# ಹೊಸತು

ನೆಮ್ಮದಿಯ ನಾಳೆ ನಮ್ಮದು

ಒಳಗೇನಿದೆ ...


ರವೀಂದ್ರರು ಬೆಳೆದ ಸನ್ನಿವೇಶ — ಸಿ. ಕೆ. ವೆಂಕಟರಾಮಯ್ಯ ... ೩೭

ಸಾಮ್ರಾಜ್ಯಶಾಹಿಯನ್ನು ಕುರಿತು ಟಾಗೋರ್ — ಡಾ|| ಎಸ್. ಚಟರ್ಜಿ ... ೧೧

ವಿಶ್ವಕನ್ನಡ ಸಮ್ಮೇಳನ — ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ ... ೫೬

ಸುತ್ತೂರಿನಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಭೆಯ ೨೨ನೇ ಅಧಿವೇಶನ — ಪ್ರೊ|| ಬಿ. ವಿ. ವೀರಭದ್ರಪ್ಪ ... ೨೩

ಚೆಳಮಾರ ಹಾದಿ — ಮಾರುತಿ ದಾಸಣ್ಣವರ ... ೨೭

ಆಪರೇಷನ್ನು ಯಾರಿಗೆ ? — ರಾಘವೇಂದ್ರ ಉಡುಪಿ ... ೩೪

ತೋಳ ಬಂತೆಲೆ ತೋಳ — ಹಾಲಾಡಿ ಮಾರುತಿ ರಾವ್ ... ೫೪

ಕಾವ್ಯಧಾರೆ — ೭, ೧೬, ೧೯, ३೦, ४೮, ೬೧

ಪ್ರಾಚೀನ ಭಾರತೀಯ ಸಮಾಜದಲ್ಲಿ ತಿಕ್ಕಾಟಗಳು — ಪ್ರೊ|| ಒ.ಪಿ. ಜಯಸ್ವಾಲ್ ... ೧೩

ದಿನಕರ ದೇಸಾಯಿ ಕಾವ್ಯದಲ್ಲಿ ಜನಪರ ಚಿಂತನೆ — ಡಾ|| ಎಸ್. ಪ್ರಸಾದ ಸ್ವಾಮಿ ... ೧೭

'ಗಾಂಧಿಕ್ಲಾಸು' – ಶ್ರಮಜೀವಿಯ ಪ್ರಾಮಾಣಿಕತೆ — ಡಾ|| ಶಿವಕುಮಾರ್ ಕಂಪ್ಲಿ ... ೬೦

ಡಾ|| ಎಂ. ಎಸ್. ವೇದಾ ಅವರ ಸಣ್ಣಕತೆಗಳು 'ಈ ತನಕ'ದ ನೆಪದಲ್ಲಿ — ಡಾ|| ಜಿ. ಆರ್. ತಿಪ್ಪೇಸ್ವಾಮಿ ... ४೭

'ಎಂಡೋಸಲ್ಫಾನ್' ಎಂಬ ಅಸಾಮ ಬಿನ್ ಲಾಡೆನ್ — ನಾಗೇಶ ಹೆಗಡೆ ... ४೧

ಲಾಡೆನ್ ಹತ್ಯೆಯಾಯಿತು – ಮುಂದೇನು ? — ಸೀಯಾರ್ಕೆ ... ४೬

ಹಸಿರು ಹುಲ್ಲಿನ ಮಹತ್ವ — ಎಸ್. ರಾಜಶೇಖರ್ ... ೫೧

ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚುವುದೇ ಇಂದಿನ ನೀತಿ... — ಕೆ. ಎಸ್. ಪಾರ್ಥಸಾರಥಿ ... ೫೨

ಹುಟ್ಟು-ಸಾವುಗಳ ನಡುವಿನ ಸೇತುವೆ ಆಸ್ಪತ್ರೆಯೆ ? — ಡಿ. ಟಿ. ಲೋಹಿತ್ ... ೨೦

ಮಲೆನಾಡ ಸುಗ್ಗಿಹಬ್ಬ ಹಾಗೂ ಜಮೀನ್ದಾರಿಕೆ — ರಾಜೇಶ್ ... ೩೫

ಮೂರು ಗ್ರಹಣಗಳು — ಡಾ|| ಬಿ. ಎಸ್. ಶೈಲಜಾ ... ೨೬

ಹೊಸ ಓದು — ಇಂದಿರಾಕುಮಾರಿ ... ४४

ಭಾವ ಸಾಮರಸ್ಯ – ಪ್ರೊ|| ತೀ ನಂ ಶ್ರೀ ವಿಚಾರಧಾರೆ — ಬಿ. ವಿ. ಶ್ರೀನಾಥಶಾಸ್ತ್ರೀ ... ೬೨



ಚಿತ್ರಗಳು : ಕಮಲಂ ಅರಸು, ಸಂಕೇತ್, ಶ್ರೀಹರಿ ದೇಶಪಾಂಡೆ, ಸುವರ್ಣ, ಬಿ.ವಿ.ಎಚ್. ಗೋಪಿ

ಮುಖಪುಟ : ರವೀಂದ್ರನಾಥ ಟಾಗೋರ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ ಪುರಾಣಗಳಲ್ಲಿ ದೇವತೆಗಳು ಪುಸಕ್ಕನೆ ವಿಷ್ಣು ಅಥವಾ ಶಿವನ ಬಳಿಗೆ ಹೋಗಿ ಯಾವನೋ ರಾಕ್ಷಸನ ಪುಂಡುತನವನ್ನು ಬಣ್ಣಿಸಿ ಅವನನ್ನು ಕೊಂದು ರಕ್ಷಣೆ ಒದಗಿಸಬೇಕೆಂದು ಪ್ರಾರ್ಥಿಸುತ್ತಾರೆ. ಮಾನವ ಕ್ಷೀರಸಾಗರಕ್ಕೋ, ಕೈಲಾಸಕ್ಕೋ ಹೋಗಿ ದೊಡ್ಡ ದೇವರ ಬಳಿ ಅಂಗಲಾಚಲಾಗುವುದಿಲ್ಲ, ಆದ್ದರಿಂದ ದೇವತೆಗಳು ಹೋಗುತ್ತಾರೆ. ಒಬ್ಬ ರಾಕ್ಷಸನಿಗೆ ಪ್ರತಿರೋಧ ಒಡ್ಡಲಾಗದ ಈ ದೇವತೆಗಳು ಸ್ವರ್ಗದಲ್ಲಿ ಬೇರೇನೇನೋ ಸುಖಗಳಲ್ಲಿ ಮುಳುಗಿರುತ್ತಾರಾದ್ದರಿಂದ ರಾಕ್ಷಸನೆಂದರೆ ನಡುಗುತ್ತಾರೆ. ಈಗ ನಾವೇ ಕೈಲಾಸಕ್ಕೆ ಹೋಗಿಬರುತ್ತೇವೆ, ಅಂದಿನ ಮಾನವನಿಗೆ ಹೋಗಲು ಆಗುತ್ತಿರಲಿಲ್ಲವೆ ! ಇರಲಿ. ವಿಷ್ಣು ಮತ್ತು ಶಿವ ಸರ್ವಜ್ಞರು, ಆದರೆ ಅವರಿಂದ ಇಂದು ವರ ಪಡೆದ ರಾಕ್ಷಸ ನಾಳೆ ಎಷ್ಟು ಭಯಂಕರನಾಗುತ್ತಾನೆಂಬ ಪ್ರಾಥಮಿಕ ತಿಳುವಳಿಕೆ ಅವರಿಗಿಲ್ಲ. ದೇವತೆಗಳು ಬಂದಾಗ ಕೈ ಕೈ ಹಿಸುಕಿಕೊಳ್ಳುತ್ತಾರೆ, ಅಯ್ಯೋ, ವರ ಕೊಟ್ಟುಬಿಟ್ಟಿದ್ದೇನೆ, ನಾನೀಗ ಏನು ಮಾಡಲಿ, ಎಂದು ಹೇಳಿ ಆಮೇಲೆ ಪರಿಹಾರ ಸೂಚಿಸುತ್ತಾರೆ. ನಾನೇ ಹುಟ್ಟಿ ಬರುತ್ತೇನೆ, ಸಾವಧಾನದಿಂದಿರಿ, ಆ ರಾಕ್ಷಸನನ್ನು ಸಾಯಿಸಿ ಧರ್ಮ ನೆಲೆಗೊಳಿಸುತ್ತೇನೆ, ಎನ್ನುತ್ತಾರೆ. ಇಲ್ಲವೆ, ಬೇರೆ ಯಾರನ್ನೋ ಕಳಿಸಿ ಕೊಲ್ಲಿಸುವುದಾಗಿ ಆಶ್ವಾಸನೆ ನೀಡುತ್ತಾರೆ. ಹೀಗೆ ಹುಟ್ಟಿಬಂದು, ದೊಡ್ಡವನಾಗಿ ರಾಕ್ಷಸನನ್ನು ಬಲಿ ತೆಗೆದುಕೊಳ್ಳುವವರೆಗೆ ದೇವತೆಗಳು (ಮತ್ತು ಮಾನವರು) ಆ ರಾಕ್ಷಸಗಣದ ಉಪಟಳ ಸಹಿಸಿಕೊಂಡಿರಬೇಕು. ಶಿವ-ಪಾರ್ವತಿಯರ ಸಮಾಗಮದಿಂದ ಷಣ್ಮುಖ ಅಥವಾ ಕುಮಾರ ಹುಟ್ಟಿದ್ದು ಇಂತಹ ಒಂದು ಸಾಧನೆಗಾಗಿ. ಪಾರ್ವತಿ ತಪಸ್ಸು ಮಾಡಿ ಶಿವನನ್ನು ಗೆದ್ದುಕೊಳ್ಳಬೇಕು, ಮನ್ಮಥ ಮಧ್ಯೆ ಬಂದು ಅವಳಿಗೆ ಸಹಾಯಮಾಡಿ ಭಸ್ಮವಾಗಬೇಕು, ಶಿವ ಹೇಗೋ ಸಂಪ್ರೀತನಾಗಬೇಕು, ಅವರ ಮದುವೆಯಾಗಿ ಸ್ಕಂದ ಜನಿಸಬೇಕು. ಆಮೇಲೆ ರಾಕ್ಷಸನ ವಧೆ ! ಇಷ್ಟೆಲ್ಲಾ ಏಕೆ, ಶಿವನೇ ತ್ರಿಶೂಲದಿಂದ ಅವನನ್ನು ಸಾಯಿಸಿ ಕತೆ ಮುಗಿಸಬಾರದೆ ? ಕಾಲಿದಾಸ ಅದಕ್ಕೆ ''ಕುಮಾರಸಂಭವ''ದಲ್ಲಿ ಉತ್ತರ ಸೂಚಿಸಿದ್ದಾನೆ : ''ವಿಷವೃಕ್ಷವೇ ಆದರೂ ನಾವೇ ಬೆಳೆಸಿದ ಮರವನ್ನು ಕಡಿದುಹಾಕುವುದೆ, ಸರ್ವಥಾ ಸಾಧ್ಯವಿಲ್ಲ'' – (ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ). ಅದಕ್ಕೆ ಸ್ಕಂದನು ಹುಟ್ಟಿಬರಬೇಕು.

ಅಮೆರಿಕಾ - ಒಸಾಮಾ ಬಿನ್ ಲಾಡೆನ್ ಕತೆ ಇಂಥಾದ್ದು. ರೀಗನ್- ಬುಷ್- ಒಬಾಮಾಗಳು ವಿಷ್ಣು-ಶಿವರಲ್ಲ, ಅಷ್ಟೆ ಒಸಾಮಾ ಎಂಬ ವಿಷವೃಕ್ಷವನ್ನು ಬಿತ್ತಿ, ನೀರೆರೆದು, ಗೊಬ್ಬರ ಹಾಕಿ, ಬೆಳೆಸಿದವರು ಇವರು. ಅವನನ್ನು ಕೊಬ್ಬಿಸಿದ್ದು ಸೋವಿಯೆತ್ ಒಕ್ಕೂಟದ ಸೈನ್ಯದ ವಿರುದ್ಧ ಎತ್ತಿಕಟ್ಟಲು. ಸಾದಿ ಅರೇಬಿಯಾದಲ್ಲಿದ್ದು ಅಲ್ಲಿಯ ದೊರೆಯ ದೌರ್ಜನ್ಯಗಳ ವಿರುದ್ಧ ಹೋರಾಡುವುದನ್ನು ಬಿಟ್ಟು ಒಸಾಮಾ, ಸಾದಿಯನ್ನು ಬಿಟ್ಟು ಬೇರೆಲ್ಲರಿಗೂ ಕ್ರೂರಿಯಾದ. ಅವನನ್ನು ಕೊಬ್ಬಿಸಿದ್ದವರಿಗೆ ಹತ್ತು ವರ್ಷಕ್ಕೂ ಜಾಸ್ತಿ ಬೇಕಾಯಿತು ಅವನ ಜೀವ ತೆಗೆಯಲು. ಅಷ್ಟರಲ್ಲಿ ಲಕ್ಷಗಟ್ಟಲೆ ಬೇರೆ ಜನ ಹತ್ಯೆಗೀಡಾದರು. ಅದಕ್ಕೆ ಒಸಾಮಾ-ಒಬಾಮಾ ಇಬ್ಬರೂ ಬಾಧ್ಯರು. ಈ ಒಬಾಮಾ ಮಾಡಿದ್ದು ಎಂಥ ಹೇಯ ಕೆಲಸ, ಒಸಾಮನಿಗೆ ಗೆರೋನಿಮೊ ಎಂಬ ಹೆಸರಿಟ್ಟು ಆ ಧೀರ ಅಮೆರಿಕನ್-ಇಂಡಿಯನ್‌ಗೆ ಅವಮಾನ ಮಾಡಿದ. ಒಸಾಮಾ ಹೋದರೇನಂತೆ, ಗೆರೋನಿಮೋನಂತೆ ತಮ್ಮ ಸಂಪತ್ತು ಮತ್ತು ಸಂಸ್ಕೃತಿ ಪರಂಪರೆಗಾಗಿ ಹೋರಾಟ ಮಾಡುವವರನ್ನು ಕೊಚ್ಚಿಹಾಕಲು ನಾನು, ಒಬಾಮಾ, ಇದ್ದೇನೆಂದು ಆ ಮೂಲಕ ತಿಳಿಸಿದ್ದಾನೆ. ಒಸಾಮಾನನ್ನು ಕೊಂದಿದ್ದಕ್ಕೆ ಇಡೀ ವಿಶ್ವ ಒಬಾಮನನ್ನು ಶ್ಲಾಘಿಸಿದೆ, ಆದರೆ ಅವನನ್ನು ದೈತ್ಯನನ್ನಾಗಿ ಬೆಳೆಸಿದ ಅಮೆರಿಕಾದ ಅಧ್ಯಕ್ಷರಿಗೆಲ್ಲಾ ಮಾಫಿ ಸಿಕ್ಕಿಬಿಟ್ಟಿದೆ. ಅದೇ ಸಮಕಾಲೀನ ಇತಿಹಾಸದ ವ್ಯಂಗ್ಯ. ಅಮೆರಿಕಾ ಏನು ಮಾಡಿದರೂ ಸರಿ, ಅದು ಶ್ಲಾಘನೀಯ. ಪಾಪ, ಎಲ್ಲಾ ಸ್ವಾತಂತ್ರ್ಯ ಮತ್ತು ಮಾನವ ಹಕ್ಕು ರಕ್ಷಣೆಯ ಹೊರೆಯೆಲ್ಲಾ ಆ ದೇಶದ ಮೇಲಿದೆಯಲ್ಲ! ಅಮೆರಿಕಾದ ಅಧ್ಯಕ್ಷನು ಪರಮಾತ್ಮನ ಇಂದಿನ ಅವತಾರ! ಇದಕ್ಕಿಂತಲೂ ಹೆಚ್ಚು ನಾಚಿಕೆಗೇಡು ಏನಿದ್ದೀತು ? (ಬೇರೆ ವಿವರಗಳಿಗೆ ನೋಡಿ, 'ವಿಶ್ವವೀಕ್ಷಣೆ')

* * *

ನೈಸ್, ಟಾಟಾ, ಇನ್‌ಫೋಸಿಸ್ ಮುಂತಾದ ಕಂಪನಿಗಳಿಗೆ ಎಷ್ಟು ಭೂಮಿ ಕೊಟ್ಟರೂ ಸಾಲದು. ರವಿಶಂಕರ ಗುರೂಜಿಯಂತೆ ಭೂಮಿ ಒತ್ತುವರಿ ಮಾಡಿಕೊಳ್ಳುವ ಮಂದಿ ನಮ್ಮಲ್ಲಿ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೨ ಸಂಚಿಕೆ - ೧೧ ಜೂನ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**URL : www.navakarnataka.com**
**http://navakarnataka.blogspot.com**
**http://hosathu.blogspot.com**

## ಸಂಪಾದಕೀಯ

### ಜನಾಭಿಪ್ರಾಯದ ನಿರ್ಮಾಣ

**ಬೇ**ರಾವ ದೇಶದಲ್ಲೂ ಇಲ್ಲದ ರೀತಿಯಲ್ಲಿ ನಮ್ಮ ದೇಶದ ೪೫ ದಿನಗಳ ದೀರ್ಘ ಚುನಾವಣಾ ಯಜ್ಞ ಮುಗಿದು ಕೆಲವರು ಹೊಸ ಯಜಮಾನರಾಗಿದ್ದಾರೆ, ಇನ್ನುಳಿದವರು ಆಹುತಿಯಾಗಿದ್ದಾರೆ. ಒಂದು ದಿನದಲ್ಲಿ ನಡೆಯಬೇಕಾದ ಚುನಾವಣಾ ಪ್ರಕ್ರಿಯೆ ಹಲವು ವಾರಗಳ ಕಾಲ ನಡೆಯುವುದರಿಂದ ಎಲ್ಲಾ ಶುಭ್ರವಾಗಿರುತ್ತದೆಂಬ ಭ್ರಮೆಯನ್ನು ಇನ್ನಾದರೂ ಕೈಬಿಟ್ಟು ಅದನ್ನು ಒಂದು ದಿನದ ಕ್ರಿಯೆಯನ್ನಾಗಿಸಬೇಕು. ಹಣದ ಪ್ರಭಾವವನ್ನು ಚುನಾವಣೆಗಳಲ್ಲಿ ನಿವಾರಿಸಬೇಕೆಂಬ ತತ್ವವನ್ನು ಕರುಣಾನಿಧಿ ಪಕ್ಷ ತಮಿಳುನಾಡಿನಲ್ಲಿ ತುಂಡರಿಸಿ ಹಾಕಿತು, ಆದರೂ ಸೋಲನ್ನನುಭವಿಸಿತು. ಎಡಪಕ್ಷಗಳ ರಂಗ ಪಶ್ಚಿಮ ಬಂಗಾಳದಲ್ಲಿ ಹಿಂದೆಂದೂ ಕಾಣದಿದ್ದ ಪ್ರಮಾಣದಲ್ಲಿ ಹೊಡೆತ ತಿಂದಿದೆ. ಈಚಿನ ತಿಂಗಳುಗಳಲ್ಲಿ ವಿಕಿಲೀಕ್ಸ್ ಸಾಬೀತುಪಡಿಸಿದ ಪ್ರಕಾರ ಹಿಂದೆ ಅಲ್ಲಿ ಈ ರಂಗವನ್ನು ಸೋಲಿಸಲು ಅಮೆರಿಕಾದ ಬೇಹುಗಾರಿಕಾ ಸಂಸ್ಥೆ ಹಣವನ್ನು ಹರಿಸಿತ್ತು, ರಾಜಕೀಯ ಬೆಂಬಲ ಕುದುರಿಸಲು ಹೆಣಗಿತ್ತು, ಈ ಬಾರಿ ಅದು ಯಶಸ್ವಿಯಾಗಿದೆ. ಬಂಡವಳಿಗರು ಬಂಗಾಳದಲ್ಲಿ ಹಾಲು-ಜೇನು ಹರಿಸುವ ಭರವಸೆಯನ್ನು ಚುನಾವಣಾ ಫಲಿತಾಂಶ ಬಂದನಂತರ ನೀಡಿದ್ದಾರೆ. ಆ ರಾಜ್ಯದ ಜನ ನೆಮ್ಮದಿ ಪಡೆಯುತ್ತಾರೇನೋ ಕಾದು ನೋಡೋಣ. ಗೆದ್ದದ್ದು ತೃಣಮೂಲಕ್ಕೆ ನೀರೆರೆದಂತಾಗಿ ಆ ಪಕ್ಷವು ಸೋತ ಪಕ್ಷಗಳ ಕಾರ್ಯಕರ್ತರನ್ನು ಥಳಿಸುವುದು, ಕಚೇರಿಗಳಿಗೆ ಬೆಂಕಿ ಇಕ್ಕುವುದು, ಹೀಗೆ ಹಿಂಸೆಗಿಳಿದಿದೆ. ಚಕ್ರಧರ ಮಹತೊ ಕಡೆಯವರ ಭಾಗವಹಿಸುವಿಕೆಯೂ ಇದರಲ್ಲಿದೆಯೆಂದು ಊಹಿಸಬಹುದಾಗಿದೆ. ಮಮತಾ ದೀದಿ ಇದನ್ನು ಮುಂದುವರಿಯಲು ಬಿಟ್ಟರೆ ರಾಜ್ಯಾಡಳಿತದ ಆರಂಭ ಹಸನಾಗುವುದಿಲ್ಲ. ಕೇರಳದಲ್ಲಿ ಅಚ್ಯುತಾನಂದನ್ ಸರ್ಕಾರ ಸೋತಿದೆ, ಆದರೆ ಮಾನಹಾನಿಗೆ ಗುರಿಯಾಗಲಿಲ್ಲ. ತಮಿಳುನಾಡಿನ ಆಯ್ಕೆಗೆ ಟೆಲಿಕಾಂ ರಾಜಾ ಬಹುಮಟ್ಟಿಗೆ ಕಾರಣ. ಬಹು ಕುಟುಂಬಿ ಮತ್ತು ಸ್ವಕೀಯ ಕುಟುಂಬ ಪೋಷಣೆಯ ರಾಜಕೀಯ ಧುರೀಣ ಕರುಣಾನಿಧಿ ಧೂಳೀಪಟವಾಗಿದ್ದಾರೆ. ಮಹಾರಾಣಿ ಜಯಲಲಿತಾ ಐವತ್ತು ಮೊಕದ್ದಮೆಗಳಲ್ಲಿ ಆಪಾದಿತರಾದರೂ ಈಗ ಮುಖ್ಯಮಂತ್ರಿ. ಆ ಮೊಕದ್ದಮೆಗಳು ಅವರ ಜೀವಿತ ಕಾಲದಲ್ಲಿ ತೀರ್ಮಾನವಾಗುವುದಿಲ್ಲವೆಂದು ತೋರುತ್ತದೆ. ಎಡಪಕ್ಷಗಳು ಆಕೆಯ ಪಕ್ಷದ ಜೊತೆ ಹೊಂದಾಣಿಕೆಯಿಂದಾಗಿ ಒಂದಷ್ಟು ಸ್ಥಾನ ಗೆದ್ದಿವೆ. ಹಾಗೆಂದಮಾತ್ರಕ್ಕೆ ಜಯಲಲಿತಾ ಭ್ರಷ್ಟಾಚಾರದಲ್ಲಿ ಮುಳುಗಿರಲಿಲ್ಲವೆಂದು ಹೇಳಲಾಗದು. ಅಸ್ಸಾಂನಲ್ಲಿ ಕಾಂಗ್ರೆಸ್ ಗೆದ್ದಿತೆನ್ನುವುದಕ್ಕಿಂತಲೂ ಗೊಗೋಯ್ ಜಯಭೇರಿ ಬಾರಿಸಿದ್ದಾರೆಂಬುದು ಹೆಚ್ಚು ಸತ್ಯ.

ಫಲಿತಾಂಶಗಳು ಬೇರೆಲ್ಲರಿಗಿಂತಲೂ ಹೆಚ್ಚು ಪೆಟ್ಟು ತಿನ್ನುವಂತೆ ಮಾಡಿದ್ದು ಎಡಪಕ್ಷಗಳನ್ನು. ಸೋಲಿಗೆ ಸಬೂಬು ಶೋಧಿಸುವ ಬದಲು ಸ್ವಯಂಕೃತಾಪರಾಧಗಳನ್ನು ಮುಚ್ಚಿಟ್ಟುಕೊಳ್ಳದೆ ಮುಕ್ತವಾಗಿ ವಿಶ್ಲೇಷಿಸಿಕೊಳ್ಳುವುದು ಎಡಪಕ್ಷಗಳಿಗೆ ಆರೋಗ್ಯಕರ. ಪಶ್ಚಿಮ ಬಂಗಾಳದಲ್ಲಿ ಭೂ ಸುಧಾರಣೆ ಮತ್ತು ಪಂಚಾಯಿತಿಗಳನ್ನು ಬಿಟ್ಟರೆ ಎಡರಂಗಕ್ಕೆ ಹೆಮ್ಮೆ ತರುವಂಥವು ಬಹಳಷ್ಟಿಲ್ಲ. ವಸತಿ, ಉಡುಪು, ಸಾರಿಗೆ, ಶಿಕ್ಷಣ, ಆರೋಗ್ಯ, ಉದ್ಯೋಗ, ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಪ್ರಗತಿಗಿಂತಲೂ ಯಥಾಸ್ಥಿತಿಯೇ ಹೆಚ್ಚೆಂಬುದು ಜನತೆಯ ಆರೋಪ. ಜೀವನಮಟ್ಟದಲ್ಲಿ ವ್ಯಾಪಕ ಉತ್ತಮಿಕೆಯಾಗದಿರುವುದರಲ್ಲಿ ಕೇಂದ್ರ ಸರ್ಕಾರದ ಪಾತ್ರವಿದೆ, ಆದರೆ ರಾಜ್ಯ ಸರ್ಕಾರದ್ದು ಅದಕ್ಕಿಂತ ಕಡಿಮೆ ಪಾತ್ರವೇನಲ್ಲ. ಮೂರು ದಶಕಗಳ ಹಿಂದೆ 'ಕ್ರಾಂತಿಕಾರಿ ಘೇರಾವ್' ತಂತ್ರದಿಂದ ಉದ್ದಿಮೆಗಳ ಮೇಲೆ ಉಂಟಾದ ದುಷ್ಪರಿಣಾಮವನ್ನು ಎಡರಂಗ ವಿಶ್ಲೇಷಿಸಿಕೊಂಡಿದ್ದು ಅಪರೂಪ. ಈಗ ಕಾರ್ಮಿಕ ಸಂಘಗಳು ಹೇಗೆ ಕೆಲಸ ಮಾಡಬಹುದೆಂಬುದನ್ನು ಕುತೂಹಲದಿಂದ ನಿರೀಕ್ಷಿಸುವಂತಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿಯೊಂದು ವ್ಯವಹಾರದಲ್ಲೂ ಸ್ವಯಂಘೋಷಿತ ಪಕ್ಷ ಕಾರ್ಯಕರ್ತರು ಮೂಗು ತೂರಿಸುತ್ತಿದ್ದುದನ್ನು ಪಕ್ಷಗಳು ಗಂಭೀರವಾಗಿ ವಿಮರ್ಶೆ ಮಾಡಿಕೊಳ್ಳಲಿಲ್ಲವೆಂದು ಜನತೆ ಅಸಮಾಧಾನ ವ್ಯಕ್ತಪಡಿಸುತ್ತಲೇ ಬಂದುದಕ್ಕೆ ಕಳೆದ ಮೂರು ವರ್ಷಗಳ ಇತರ ಚುನಾವಣಾ ಫಲಿತಾಂಶಗಳೇ ಸಾಕ್ಷಿ.

ಪಶ್ಚಿಮ ಬಂಗಾಳದ ಎಡರಂಗ ನಾಯಕರಾಗಿದ್ದ ಜ್ಯೋತಿ ಬಸು ಪ್ರಧಾನಿಯಾಗಬೇಕಾಗಿದ್ದುದನ್ನು ತಡೆದು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಪ್ರಮಾದವೆಸಗಿದ್ದು ಈಗ ಇತಿಹಾಸ. ಚರಿತ್ರೆಯು ಪ್ರಮಾದಗಳನ್ನು ಮನ್ನಿಸುವುದಿಲ್ಲ. ಜ್ಯೋತಿ ಬಸು ಪ್ರಧಾನಿಯಾಗಿ ಕೆಲಕಾಲವಾದರೂ ದೇಶದ ನೀತಿನಿರೂಪಣೆಯಲ್ಲಿ ಗುಣಾತ್ಮಕ ಬದಲಾವಣೆ ತರಬಹುದಾಗಿದ್ದ ಅವಕಾಶವನ್ನು ಕಳೆದುಕೊಂಡಿದ್ದು ಎಡರಂಗದ ಅವನತಿಗೆ ಚಾಲನೆ ನೀಡಿತು. ಕೇಂದ್ರ ಮತ್ತು ರಾಜ್ಯಗಳ ನಡುವಣ ಸಂಬಂಧಗಳಿಗೆ ಹೊಸ ಆಯಾಮ ಕಲ್ಪಿಸುವ ಸಾಧ್ಯತೆಯೂ ಅದರಿಂದ ದೂರವಾಯಿತು. ಅದರ ಬೆನ್ನಲ್ಲೇ ಬಂದಿದ್ದು ದೇವೇಗೌಡ ಅಮರಸಿಂಗ್‌ರಂತಹ ನಾಯಕರ ಪಾರುಪತ್ಯೆಗೆ ಒಂದು ದೊಡ್ಡ ಎಡಪಕ್ಷವು ಅಹರ್ನಿಶಿ ಶ್ರಮಿಸಿದ ವಿಪರ್ಯಾಸ. ಈಗಲೂ ಎಡರಂಗ ಈ ಬಗ್ಗೆ ಕಣ್ಣು ತೆರೆದದ್ದು ಖಾತ್ರಿಯಾಗಿಲ್ಲ. ಕೇರಳದಲ್ಲಿ ಅಚ್ಯುತಾನಂದನ್ ಅವರನ್ನು ಚುನಾವಣಾ ಕಣಕ್ಕಿಳಿಸುವುದು ಬೇಡವೆಂಬ ಪ್ರಮಾದ ಎಂತಹ ಘಾತುಕ ಪರಿಣಾಮಕ್ಕೆ ಕಾರಣವಾಗಿದೆಯೆಂಬುದನ್ನು ಜನತೆ ತೋರಿಸಿಕೊಟ್ಟಿದೆ. ಅಂತಃಕಲಹಗಳು ಕಮ್ಯುನಿಸ್ಟ್ ಪಕ್ಷವೊಂದರಲ್ಲಿ ವ್ಯಾಪಕವಾಗಿ ಬೆಳೆದರೆ ಜನತೆ ಏನು ಮಾಡಬೇಕೋ ಅದನ್ನು ಮಾಡುತ್ತದೆ. ಕೇರಳದ ಚುನಾವಣಾ ಫಲಿತಾಂಶ ಅದಕ್ಕೆ ನಿದರ್ಶನ. ಮಮತಾ ದೀದಿಯ ತೃಣಮೂಲ ಕಾಂಗ್ರೆಸ್‌ಗೆ ಮತ ನೀಡಿದ ಪಶ್ಚಿಮ ಬಂಗಾಳದ ಜನತೆಗೆ ಋಣಮೂಲ ಸಾಧನೆಯಷ್ಟೇ ಗಂಟು ಎಂದು ಕೆಲವರು ಹಗುರವಾಗಿ ಮಾತನಾಡಿದ್ದಾರೆ. ಅದೂ ಒಂದು ರಾಜಕೀಯ ಪ್ರಮಾದವಾಗಿಬಿಡುವುದನ್ನು ತಳ್ಳಿಹಾಕುವಂತಿಲ್ಲ. ಬದಲಾವಣೆ ಬೇಕೆನಿಸಿದಾಗ ಆ ರಾಜ್ಯದ ಜನತೆಗೆ ಆಯ್ಕೆ ಇದ್ದದ್ದೇ ಒಂದು. ಈಗ ಹೊಸ ಸರ್ಕಾರದ ಯಾವ ಜನವಿರೋಧಿ ನೀತಿಯನ್ನು ಟೀಕಿಸಿದರೂ ಮಮತಾ ದೀದಿಯದು ಒಂದೇ ಉತ್ತರವಿರುತ್ತದೆ : ''ನೀವು ೩೪ ವರ್ಷ ಮಾಡಿದ್ದೇನು ? ಸ್ವಲ್ಪ ಸುಮ್ಮನಿರಿ, ನಿಮಗೆ ಮಾತನಾಡುವ ಅರ್ಹತೆ ಇಲ್ಲ'' ಇದು

ಪ್ರಜಾಪ್ರಭುತ್ವ ವಿರೋಧಿ ಧೋರಣೆಯೇ ಹೌದು, ಆದರೆ ಜನತೆಯ ಬೆಂಬಲದ ಅಲೆ ಆಕೆಗೆ ಕೆಲಕಾಲ ಗುರಾಣಿಯಾಗಿರುತ್ತದೆ. ಸಕ್ರಿಯ ರಾಜಕೀಯಕ್ಕೆ ಎಡಪಕ್ಷಗಳು ತಮ್ಮದೇ ಆದ ಹೊಸ ವಿಧಾನ ಅರಸಿಕೊಳ್ಳಬೇಕಾದ್ದು ಅನಿವಾರ್ಯವಾಗಿದೆ.

ಮುಂದೇನು ಎಂಬ ಪ್ರಶ್ನೆಯನ್ನು ಬಂಡವಾಳಶಾಹಿ ಮಾಧ್ಯಮಗಳು ಎಡಪಕ್ಷಗಳಿಗೆ ಬಹಳ ಹುರುಪಿನಿಂದ ಹಾಕಿವೆ. ''ಅಂಗಡಿ ಮುಚ್ಚಿ ಭಾರತವನ್ನು ಜಾಗತೀಕರಣದ ಬಲೆಗೆ ಬೀಳಲು ಸಲೀಸು ಹಾದಿ ಮಾಡಿಕೊಡಿ'' ಎಂಬುದು ಅದರರ್ಥ. ಆ ಮಾಧ್ಯಮಗಳಿಗೆ ನಿರಾಶೆ ಬಹಳ ದೂರವಿರದಂತೆ ಮಾಡುವ ಜವಾಬ್ದಾರಿ ಎಡಪಕ್ಷಗಳಿಗಿದೆ. ಅದು ಸುಲಭಸಾಧ್ಯವಲ್ಲ. ರಾಜಕೀಯವನ್ನು ಮೂದಲಿಸಿ, ಅಪಹಾಸ್ಯ ಮಾಡಿ, ಅದನ್ನು ತಗಡು ಮಾಡುತ್ತಿರುವ ಸಂದರ್ಭ ಇಂದಿನದು. ಅಲ್ಲೊಬ್ಬ ಇಲ್ಲೊಬ್ಬ 'ಹೀರೊ' ಸಿಕ್ಕಿದರೆ ಸಾಕು, ಎಲ್ಲ ಸುಸೂತ್ರವಾಗಿ ನಡೆಯುತ್ತದೆಂಬ ಭ್ರಾಂತಿಯನ್ನು ಜನರ ತಲೆಗೆ ತುಂಬುವ ಕೆಲಸ ನಿರಂತರವಾಗಿ ಸಾಗುತ್ತಿದೆ. ರಾಜಕೀಯೇತರ ಮಾರ್ಗದಲ್ಲಿ ರಾಜಕೀಯ ನಡೆಯಬೇಕೆಂದು ಮೇಲುಹಂತದ ಮಧ್ಯಮವರ್ಗ ಬಯಸುತ್ತಿದೆ. ಕಾಂಗ್ರೆಸ್ ಪಕ್ಷವು ಮಧ್ಯಂತರ ಚುನಾವಣೆ ಇನ್ನೇನು ಬಂದೇಬಿಟ್ಟಿತೆಂಬಂತೆ ಉತ್ತರ ಪ್ರದೇಶ ಮುಂತಾದೆಡೆಗಳಲ್ಲಿ ನಾಟಕೀಯವಾಗಿ ಜನಪರ ಕಾಳಜಿ ತೋರಿಸಹೊರಟಿದೆ. ಕರುಣಾನಿಧಿ, ಪವಾರ್ ಮತ್ತು ಮಾಯಾವತಿ ಎಂದು ನಿರ್ಧರಿಸಿದರೆ ಅಂದು ಕೇಂದ್ರ ಸರ್ಕಾರ ಉರುಳುತ್ತದೆ. ಮನಮೋಹನ ಸಿಂಗ್ ಸರ್ಕಾರ ದೇಶವನ್ನು ಬಗ್ಗುಡದ ನೀರಿನಲ್ಲಿ ಮುಳುಗಿಸಿದೆ, ಆ ನೀರಿನಲ್ಲಿ ಅಮೆರಿಕಾ ಮೀನು ಹಿಡಿಯಲು ಬಲೆ ಹಿಡಿದು ನಿಂತಿದೆ. ದೇಶದ ಜನತೆಯನ್ನು ಸ್ವಚ್ಛವಾದ ನೀರಿಗೆ ಎಳೆದುತರಲು ಯಾರಲ್ಲಾದರೂ ದೋಣಿ ಇದ್ದರೆ ಅದು ಎಡಪಕ್ಷಗಳ ಬಳಿ ಇರಬೇಕಷ್ಟೆ. ಅದನ್ನು ನೀರಿಗಿಳಿಸಿ ಹುಟ್ಟುಹಾಕುವ ಕೆಲಸವನ್ನು ಈಗ ಸೋತಿರುವ ಎಡಪಕ್ಷಗಳು ಕೂಡಲೆ ಕೈಗೆತ್ತಿಕೊಳ್ಳಬೇಕಾಗಿದೆ. ಚುನಾವಣೆಯಲ್ಲಿ ಸೋಲುಂಟಾಗಿದೆ, ಆದರೆ ವರ್ಗಹೋರಾಟದಿಂದ ವಿಮುಖವಾಗುವ ಪ್ರಶ್ನೆ ಎಡಪಕ್ಷಗಳ ಮುಂದೆ ಬರುವಂತಿಲ್ಲ. ಜನರಿಂದ ದೂರಕ್ಕೆ ಓಡಿಹೋಗಿ ಮತ್ತೆ ಐದು ವರ್ಷಗಳ ನಂತರ ಅವರ ಮುಂದೆ ನಿಲ್ಲುವುದು ಎಡಪಕ್ಷಗಳ ಪ್ರಣಾಲಿಕೆಯಲ್ಲಿರಬಹುದಾದಂಥದಲ್ಲ. ಜನತೆಯ ನಡುವೆ ಇರುವುದೆಂದರೆ ಜನತೆಯ ಪ್ರಜ್ಞೆಯನ್ನು ವಿಸ್ತರಿಸುವ ಕೆಲಸ. ಇಂದಿನ ಚುನಾವಣೆಗಳ ಫಲಿತಾಂಶದ ಸಂದೇಶ ಅದೇ ಎನಿಸುತ್ತದೆ.

## 'ಬ್ರಿಕ್ಸ್' ದೇಶಗಳು ಪರಿಣಾಮಕಾರಿಯಾಗಲಿ

**ಅಂ**ತರರಾಷ್ಟ್ರೀಯ ರಾಜಕಾರಣದಲ್ಲಿ ಪ್ರಾದೇಶಿಕವಾಗಿ, ಅನುಕೂಲಕ್ಕಾಗಿ ಸೇರಿ, ಸಮಾಲೋಚನೆ ನಡೆಸಿ ತಂಡಗಳನ್ನು ರಚಿಸಿಕೊಂಡಿರುವುದು ಅಪರೂಪವೇನಲ್ಲ. ಅಂಥವುಗಳ ಉದ್ದೇಶಗಳೂ ಆದರ್ಶಪ್ರಾಯ – ಪರಸ್ಪರ ಆರ್ಥಿಕ ಸಹಕಾರ, ಅಂತರರಾಷ್ಟ್ರೀಯ ಪ್ರಶ್ನೆಗಳ ಕುರಿತು ಒಂದೇ ನಿಲುವು, ಮುಕ್ತ ವಾಣಿಜ್ಯ ವ್ಯವಹಾರ ಇತ್ಯಾದಿ. ಈ ಉದ್ದೇಶಿತ ಗುರಿಗಳು ಎಷ್ಟು ಮಟ್ಟಿಗೆ ಕಾರ್ಯರೂಪಕ್ಕೆ ಬಂದಿವೆ, ಎಷ್ಟು ಪರಿಣಾಮಕಾರಿಯಾಗಿವೆ ಎನ್ನುವುದು ಬೇರೆ ವಿಷಯ. ಆದರೂ ಅವು ಅಸ್ತಿತ್ವದಲ್ಲಿವೆ, ಆಗಾಗ ಸಭೆ ಸೇರುತ್ತಿರುತ್ತವೆ. ಯೂರೋಪಿಯನ್ ಯೂನಿಯನ್, ಆಫ್ರಿಕಾ ದೇಶಗಳ ಕೂಟ, ಆಸಿಯಾನ್, ಸಾರ್ಕ್, ದಕ್ಷಿಣ ಅಮೆರಿಕ ದೇಶಗಳ ಒಕ್ಕೂಟ, ಇತ್ಯಾದಿ ಉದಾಹರಣೆ. ಈಗ ಈ ಸಾಲಿಗೆ ಬ್ರೆಜಿಲ್, ರಷ್ಯಾ, ಇಂಡಿಯ, ಚೀಣಾ, ದಕ್ಷಿಣ ಆಫ್ರಿಕ – ಸಂಕ್ಷಿಪ್ತವಾಗಿ 'ಬಿಆರ್‌ಐಸಿಎಸ್' (ಬ್ರಿಕ್ಸ್) – ಈ ರಾಷ್ಟ್ರಗಳ ಕೂಟ ಸೇರಿದೆ. ಪ್ರಪಂಚದ ಜನಸಂಖ್ಯೆಯಲ್ಲಿ ಶೇ. ೪೦ರಷ್ಟನ್ನು ಪ್ರತಿನಿಧಿಸುವ ಈ ಐದು ರಾಷ್ಟ್ರಗಳ ಕೂಟ ನಿಜವಾಗಿಯೂ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಅತ್ಯಂತ ಪರಿಣಾಮಕಾರಿಯಾದ ಪಾತ್ರವಹಿಸಬಲ್ಲದು. ಅದು ಸಾಧ್ಯವಾಗಲಿ ಎನ್ನುವುದೇ ನಮ್ಮ ಬಯಕೆ.

ಈ ತಂಡ ಅಸ್ತಿತ್ವಕ್ಕೆ ಬಂದಿದ್ದು ೨೦೦೯ರಲ್ಲಿ ರಷ್ಯಾದ ಎಕತೆರೀನ ಬರ್ಗ್ ನಗರದಲ್ಲಿ ಜರುಗಿದ ಶೃಂಗಸಭೆಯಲ್ಲಿ. ಅದರಲ್ಲಿ ಭಾಗವಹಿಸಿದ್ದ ದೇಶಗಳು ಬ್ರೆಜಿಲ್, ರಷ್ಯಾ, ಇಂಡಿಯ ಮತ್ತು ಚೀಣಾ. ಈಗ ೨೦೧೧ರಲ್ಲಿ ದಕ್ಷಿಣ ಆಫ್ರಿಕ ಸೇರಿದೆ ಈ ರಾಷ್ಟ್ರಗಳ ಜೊತೆಗೆ. ಈ ತಂಡ ರಚನೆಗೊಳ್ಳುವುದಕ್ಕೆ ಪೂರ್ವದಲ್ಲಿ ಶಾಂಘಾಯ್ ತಂಡ ಇತ್ತು. ಅವು ರಷ್ಯಾ, ಭಾರತ, ಚೀಣಾಗಳಿಗೆ ಸೀಮಿತವಾಗಿತ್ತು. ರಷ್ಯಾ, ಚೀಣಾ, ಭಾರತ ಈ ಮೂರು ರಾಷ್ಟ್ರಗಳು ಒಂದುಗೂಡಿ ಕೆಲಸ ಮಾಡಿದರೆ ಅಂತರರಾಷ್ಟ್ರೀಯ ವಿದ್ಯಮಾನಗಳ ದಿಶೆಯನ್ನೇ ಬದಲಿಸಬಲ್ಲವು ಎನ್ನುವ ಪ್ರತೀತಿ ರಷ್ಯಾದ ಮಹಾಕ್ರಾಂತಿಯ ದಿನಗಳಿಂದಲೂ ಇದೆ. ಇವತ್ತು 'ಬ್ರಿಕ್ಸ್' ಆ ಪಾತ್ರ ವಹಿಸಿಕೊಳ್ಳಬಹುದಾಗಿದೆ. ಈ ಐದು ರಾಷ್ಟ್ರಗಳು ಉದಯೋನ್ಮುಖ ರಾಷ್ಟ್ರಗಳು. ಆರ್ಥಿಕವಾಗಿ ಈಚಿನ ವರ್ಷಗಳಲ್ಲಿ ಸಾಕಷ್ಟು ಪ್ರಗತಿ ಸಾಧಿಸಿ ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಇವು. 'ಬ್ರಿಕ್ಸ್' ಅಸ್ತಿತ್ವಕ್ಕೆ ಬಂದದ್ದೂ ಕೂಡ ವಿಶೇಷ ಸಂದರ್ಭದಲ್ಲಿ, ಪ್ರಪಂಚದ ಪ್ರಮುಖ ದೇಶಗಳಾದ ಅಮೆರಿಕ, ಯೂರೋಪುಗಳಲ್ಲಿ ಆರ್ಥಿಕ ಕುಸಿತ ಸಂಭವಿಸಿದ್ದಾಗ. ಈ ಆರ್ಥಿಕ ಕುಸಿತ ಪ್ರಪಂಚದ ಎಲ್ಲ ದೇಶಗಳ ಮೇಲೂ ಪರಿಣಾಮ ಬೀರಿದ್ದುವು. ಇಂಥ ಸನ್ನಿವೇಶದಲ್ಲಿ ಹುಟ್ಟಿಕೊಂಡ ಈ ಸಂಘಟನೆ ಪರಸ್ಪರ ಆರ್ಥಿಕ ಸಹಕಾರಕ್ಕೆ, ಏಕಮುಖ ಧೋರಣೆಗಳಿಗೆ ಹೆಚ್ಚಿ ಪ್ರಾಮುಖ್ಯತೆ ನೀಡಿತು. ಆರ್ಥಿಕ ಕುಸಿತದ ಪರಿಣಾಮಗಳನ್ನು ಎದುರಿಸಲು ಅಂಗೀಕೃತವಾದ ಕ್ರಮಗಳನ್ನು ರೂಪಿಸಿದುವು. ಪರಸ್ಪರ ಸಹಕಾರವನ್ನು ವರ್ಧಿಸಲು, ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ರಚನಾತ್ಮಕ ಪಾತ್ರ ವಹಿಸಲು ಸಾಕಷ್ಟು ಅವಕಾಶಗಳಿವೆ ಈ ದೇಶಗಳಿಗೆ. ಅದಕ್ಕೆ ಅಗತ್ಯವಾದ ರಾಜಕೀಯ ಇಚ್ಛಾಶಕ್ತಿ ಬೇಕು ಅಷ್ಟೆ.

ಎಷ್ಟೇ ಮಹತ್ತರವಾದ ಆಶೋತ್ತರಗಳನ್ನು ಹೊಂದಿದ್ದರೂ 'ಬ್ರಿಕ್ಸ್' ತಂಡದಲ್ಲಿರುವ ದೇಶಗಳೂ ಅಮೆರಿಕದೊಂದಿಗೆ ಸಂಬಂಧಗಳಿಗೆ ವಿಶೇಷ ಮಹತ್ವ ನೀಡಿವೆ. ವಾಷಿಂಗ್ಟನ್ ಅನ್ನು ಎದುರು ಹಾಕಿಕೊಳ್ಳಲು ಹಿಂಜರಿಯುತ್ತವೆ. ಈ ಭ್ರಮೆ ಇರುವವರಿಗೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಪರಿಣಾಮಕಾರಿಯಾಗಿ ವ್ಯವಹರಿಸಲು ಸಾಧ್ಯವಾಗದು. ವಿಶ್ವಸಂಸ್ಥೆಯ

(೭ನೇ ಪುಟಕ್ಕೆ)

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಈ ತಿಂಗಳು (೩ನೇ ಪುಟದಿಂದ)
ಸಾವಿರಾರು ಮಂದಿ ಇದ್ದಾರೆ. ನೋಯಿಡಾ, ಪಾಲಘಾಟ್, ಬೆಂಗಳೂರು ಇವು ಕೆಲವು ಉದಾಹರಣೆಗಳು ಮಾತ್ರ. ಇಷ್ಟೊಂದು ಭೂಮಿಯನ್ನು ಕಬಳಿಸಲು ಬಿಟ್ಟಿರುವುದರಿಂದ ಕೃಷಿಗೆ ಭೂಮಿ ಗಮನಾರ್ಹವಾದಷ್ಟು ಕಡಿಮೆಯಾಗಿದೆ, ನಮ್ಮ ದೇಶದ ಆಹಾರದ ಸುಭದ್ರತೆಗೆ ಕುತ್ತು ಬಂದಿದೆ, ಎಂದು ಡಾ॥ ಸ್ವಾಮಿನಾಥನ್ ಆತಂಕ ವ್ಯಕ್ತಪಡಿಸಿದ್ದಾರೆ. ಆ ಹಿನ್ನೆಲೆಯಲ್ಲಿ, ರೈತರು ನೈಸ್ ಕಂಪನಿಗೆ ಬೇಕಾಬಿಟ್ಟಿ ಭೂಮಿ ಬಿಟ್ಟುಕೊಡದೆ ಉಗ್ರ ಹೋರಾಟ ನಡೆಸಿದರೆ ಅದರಲ್ಲಿ ತಪ್ಪೇನೂ ಇಲ್ಲ, ಬದಲಾಗಿ ಅವರಿಗೆ ಅಭಿನಂದನೆ ಸಲ್ಲಬೇಕೆಂಬುದು ಸಾಮಾನ್ಯ ತಿಳುವಳಿಕೆ. 'ಹೊಸತು' ಖಂಡಿತಕ್ಕೂ ಅವರೊಡನಿರುವ ನೀತಿಗೆ ಬದ್ಧ. ರೈತರಿಂದ ಭೂಮಿ ಪಡೆದು ಸರ್ಕಾರವು ನೈಸ್‌ನ 'ಸಿ' ಹಂತದ ಕೆಟ್ಟ ಯೋಜನೆಗೆ ಅದನ್ನು ಕೊಡಬೇಕೆಂಬ ಆಜ್ಞೆ ಸರ್ವೋಚ್ಚ ನ್ಯಾಯಾಲಯ ನೀಡಿದೆಯೆನ್ನುತ್ತಾರೆ. ರಾಜ್ಯದ ಅಡ್ವೊಕೇಟ್ ಜನರಲ್ ನ್ಯಾಯಾಲಯದಲ್ಲಿ ಸರ್ಕಾರದ ಕಷ್ಟವನ್ನು ಬಿಚ್ಚಿಟ್ಟರು : ರೈತರಿಂದ ಭೂಮಿ ಪಡೆಯುವುದು ಸ್ವಲ್ಪ ಬಿಕ್ಕಟ್ಟಿನಲ್ಲಿದೆ, ರೈತರು ಪ್ರತಿಭಟಿಸುತ್ತಿದ್ದಾರೆ, ಭೂಮಿಯ ಸರ್ವೆ ಆಗಬೇಕು, ಅದಾಗದೆ ಬಿ ಮತ್ತು ಸಿ ಹಂತಕ್ಕೆ ಕೂಡಲೆ ಭೂಮಿ ಕೊಡುವುದು ಕಷ್ಟ, ಇತ್ಯಾದಿ. ರೈತರ ಅಹವಾಲೇನು, ಏಕೆ ಪ್ರತಿಭಟಿಸುತ್ತಿದ್ದಾರೆ, ಅವರ ಹಕ್ಕೊತ್ತಾಯವನ್ನು ಮಾನ್ಯಮಾಡುವುದು ಹೇಗೆ, ಮುಂತಾಗಿ ಯೋಚಿಸುವುದು ಕನಿಷ್ಠ ಸೌಜನ್ಯದ ವಿಷಯವೆಂದು ಹೊರಗಿನ ಸಾಮಾನ್ಯರಿಗೆ ಅನಿಸುತ್ತದೆ. ಸರ್ಕಾರವು ಸಿಂಗೂರ್-ನಂದಿಗ್ರಾಮ ಮುಂತಾದ ಘಟನೆಗಳ ಪುನರಾವರ್ತನೆಗೆ ಅವಸರದಿಂದ ಮುಂದಾಗಲು ಹಿಂಜರಿಯುವುದು ಸ್ವಾಭಾವಿಕ. ರೈತರ ವಿರೋಧಕ್ಕೆ ಕಾರಣವನ್ನು ಕೇಳದೆ ಅವರ ಮೇಲೆ ಬಾರುಗೋಲು ಬೀಸಬಹುದೆ ? ಛೆ, ಹಾಗೆ ಮಾಡುವುದು ಬೇಡವೆನ್ನುತ್ತಾರೆ ಸಾರ್ವಜನಿಕರು. ಆದರೆ ನ್ಯಾಯಾಲಯವು ಸರ್ಕಾರಕ್ಕೆ ಎಚ್ಚರಿಕೆ ನೀಡಿತು : ''ನಿಮಗೆ ಕಾನೂನು - ಸುವ್ಯವಸ್ಥೆಯ ಪಾಲನೆ ಮಾಡಲು ಭಯವಾದರೆ, ರಾಜ್ಯದ ಆಡಳಿತ ಬಿಡಿ. ಅವರ ಭೂಮಿಯನ್ನು ವಶಪಡಿಸಿಕೊಂಡರೆ ಅವರು ಪ್ರತಿಭಟಿಸುತ್ತಲೇ ಇರುತ್ತಾರೆ, ಹಾಗೆಂದು ಯೋಜನೆಯನ್ನು ಕಾರ್ಯಗತಗೊಳಿಸದೆ ಕೂತುಕೊಳ್ಳುವುದು ಸರಿಯಲ್ಲ'' ಅಂದರೆ, ಭೂಮಿ ಕಳೆದುಕೊಳ್ಳಲು ಹಸನ್ಮುಖಿಯಾಗಿ ಮುಂದೆ ಬಾರದಿದ್ದರೆ ರೈತರಿಗೆ ಬಾರುಗೋಲು ಸೇವೆ ಮಾಡಿ ಕಾನೂನು - ಸುವ್ಯವಸ್ಥೆ ಕಾಪಾಡಬೇಕು, ಭೂಮಿ ವಶಪಡಿಸಿಕೊಳ್ಳಬೇಕು. ಇದು ನ್ಯಾಯವೆ ಎಂಬ ಪ್ರಶ್ನೆಯನ್ನು ನ್ಯಾಯಾಲಯಕ್ಕೆ ಹಾಕಬಾರದೇನೋ. ಆದರೆ ರೈತರಿಗೆ ಅದು ತಿಳಿಯುವುದಿಲ್ಲವಲ್ಲ! ಈ 'ನೈಸ್' ಅಲ್ಲದ ಕಂಪನಿಗಳು ಇನ್ನೂ ಏನೇನು ಬಾಳುವೆ ಹಾಳು ಮಾಡಬೇಕೋ, ಅದೆಲ್ಲ ರೈತರಿಗೆ ಇನ್ನೂ ಗೊತ್ತಿಲ್ಲ. ಯಾವನು ಈ ನೈಸ್ ಯೋಜನೆಯನ್ನು ಮಂಜೂರು ಮಾಡಿದ್ದೆಂದು ರೈತರು ಹಿಡಿಶಾಪ ಹಾಕುತ್ತಿದ್ದಾರೆ. ಅದಕ್ಕೆ ಶಿಕ್ಷೆ ಇಲ್ಲ ತಾನೆ ?

* * *

ಗೋದಾವರಿ ಪಾತ್ರದಲ್ಲಿ ಎಣ್ಣೆ ಮತ್ತು ಅನಿಲಗಳ ಬಾವಿಗಳನ್ನು ಕೊರೆದು ಅಂಬಾನಿಯೆಂಬ ಮಹಾಮಹಿಮ ಎಷ್ಟು ದೇಶಸೇವೆ ಮಾಡುತ್ತಿದ್ದಾನೆಂದು ಕೆಲವು ಮಾಧ್ಯಮ ವೀರರು ಪದೇ ಪದೇ ನೆನಪಿಸುತ್ತಿರುತ್ತಾರೆ. ನ್ಯಾಯಮೂರ್ತಿ ಬಿ. ಸುದರ್ಶನ ರೆಡ್ಡಿ ಅನಿಲ ಮತ್ತು ಎಣ್ಣೆ ಸಾರ್ವಜನಿಕ ಸಂಪತ್ತು, ಅದನ್ನು ಖಾಸಗಿಯವರಿಗೆ ಲೂಟಿಮಾಡಲು ಕೊಡುವುದು ಸರಿಯಲ್ಲವೆಂಬ 'ಅಲ್ಪಸಂಖ್ಯಾತ' ತೀರ್ಪು ಕೊಟ್ಟಿದ್ದುದನ್ನು 'ಹೊಸತು' ಹಿಂದೊಮ್ಮೆ ಪ್ರಕಟಿಸಿತ್ತು. ತೀರ್ಪಿನ ನಂತರದ ಅಸಾಧಾರಣ ಬೆಳವಣಿಗೆ ಏನೆಂದರೆ ಬಾವಿಗಳಲ್ಲಿ ಹಠಾತ್ತನೆ ಎಣ್ಣೆ ಮತ್ತು ಅನಿಲಗಳ ಉತ್ಪಾದನೆ ಸೊರಗಿಹೋಗಿದೆ, ಎಂಬುದು. ಅಂದರೆ, ನಮ್ಮಿಷ್ಟ ಬಂದಷ್ಟು ಬೆಲೆ ನಿಗದಿಗೊಳಿಸಲು ಬಿಡಿ, ಭಾರತದಲ್ಲಿ ತೈಲ ಮತ್ತು ಅನಿಲದ ಇಂತಿಷ್ಟು ಭಾಗವನ್ನು ಮಾರಬೇಕೆಂಬ ಷರತ್ತು ವಿಧಿಸಬೇಡಿ, ಹಾಗೇನಾದರೂ ನಮ್ಮ ಆಶಯಕ್ಕೆ ಒಪ್ಪಿಗೆ ಕೊಡದಿದ್ದರೆ ಬಾವಿಗಳೆಲ್ಲಾ ಖಾಲಿಯಾಗಿವೆಯೆಂದು ಹೇಳಿಬಿಡುತ್ತೇವೆ, ಹುಷಾರ್, ಎಂದು ಸರ್ಕಾರಕ್ಕೆ ಎಚ್ಚರಿಕೆಯನ್ನು ನೀಡಲಾಗಿದೆ. ಮುರಳಿ ದೇವರ ಎಂಬ ತೈಲ ಮಂತ್ರಿ ಅಂಬಾನಿಯ ಪರವೇ ವಿನಾ ದೇಶದ ಮತ್ತು ಜನರ ಪರವಲ್ಲ, ಖಾಸಗಿಯೆಂದರೆ ಶ್ರೇಷ್ಠ, ಇತ್ಯಾದಿ ಮೂರ್ಖ ಬಾಲಿಶ ಮಾತನ್ನಾಡುವ ಖದೀಮ ಧೀಮಂತರಿಗೆ ಸತ್ಯವನ್ನು ತಿಳಿಯಬೇಕೆಂಬ ಆಸೆಯಿದ್ದರೆ ಹೋಗಿ ತೈಲ ಮತ್ತು ಅನಿಲ ಬಾವಿಗಳಲ್ಲಿ ಇಳಿದು ನೋಡಲಿ, ಅಲ್ಲವೆ ?

* * *

ಅಂತರರಾಷ್ಟ್ರೀಯ ಸ್ನೇಹ ವೃದ್ಧಿಗೆ ಕೊಡುಗೆ ನೀಡಿದವರಿಗೆಂದು ಕೇಂದ್ರ ಸರ್ಕಾರ ನೆಹರು ಪ್ರಶಸ್ತಿಯೊಂದನ್ನು ನೀಡುತ್ತದೆ. ಈ ಬಾರಿ ಅದನ್ನು ಜರ್ಮನಿಯ ನೇತಾರರಾದ ಶ್ರೀಮತಿ ಏಂಜೆಲಾ ಮರ್ಕೆಲ್‌ಗೆ ನೀಡುವುದಾಗಿ ಘೋಷಿಸಿದ್ದಾರೆ. ಹಿಂದೊಮ್ಮೆ ಈಜಿಪ್ಟಿನ ಅಧ್ಯಕ್ಷನಾಗಿದ್ದ ಹೊಸ್ನಿ ಮುಬಾರಕ್‌ಗೂ ಅದನ್ನು ಭಾರತ ಸರ್ಕಾರ ನೀಡಿದ್ದಿತು. ಪಾಪ, ಏಂಜೆಲಾ ಅವರಿಗೆ ಎಷ್ಟು ಮುಜುಗರವಾಗಬೇಡ! ಭಾರತ ಸರ್ಕಾರ ಮತ್ತು ಅದರ ಸಲಹೆಗಾರರು ಆಗಾಗ್ಗೆ ಎಂತೆಂತಹ ಅದ್ಭುತಗಳನ್ನು ಮಾಡಿಬಿಟ್ಟಿರುತ್ತಾರೆ, ನೋಡಿ. ಹೊಸ್ನಿ ಮಹಾನುಭಾವನು ಅಂತರರಾಷ್ಟ್ರೀಯ ಸದ್ಭಾವನೆಗೆ ಎಂತಹ ಗಹನ ಕೊಡುಗೆ ನೀಡಿದ್ದನೆಂಬುದರ ವಿವರಣೆ ಈಗ ಹೊರಬಂದರೆ ಎಷ್ಟು ಗಮ್ಮತ್ತಿರುತ್ತದೆ ನೋಡಿ! ಮರ್ಕೆಲ್ ಮತ್ತು ಮುಬಾರಕ್ ಒಂದೇ ತಕ್ಕಡಿಯಲ್ಲಿ ಎಂದಾದರೆ ಮರ್ಕೆಲ್ ದೆಹಲಿಗೆ ಬಂದು ಪ್ರಶಸ್ತಿ ಸ್ವೀಕರಿಸಲು ಅಂಜಬಹುದು.

* * *

ದೆಹಲಿಯಲ್ಲಿರುವ ಅಖಿಲ ಭಾರತ ವೈದ್ಯಕೀಯ ಸಂಸ್ಥೆಯ ಒಬ್ಬ ಸ್ನಾತಕೋತ್ತರ ವಿದ್ಯಾರ್ಥಿಗೆ ಕಿರುಕುಳ ಕೊಟ್ಟು ಅಲ್ಲಿಯ ಅಧ್ಯಾಪಕ ಪ್ರಭೃತಿಗಳು ಅವನನ್ನು ಹೇಗೆ ನಾಶಮಾಡಲು ಪಣತೊಟ್ಟಿದ್ದರೆಂಬುದನ್ನು ವಿವರಿಸುವ ಒಂದು ಲೇಖನವನ್ನು 'ಹೊಸತು' ಪ್ರಕಟಿಸಿತ್ತು. ಕೆಲ ಓದುಗರಿಗಾದರೂ ಅದರ ನೆನಪಿರಬಹುದು. ಆ ದಲಿತ ವಿದ್ಯಾರ್ಥಿ ಒಬ್ಬ ಆಟೋಚಾಲಕನ ಮಗ. ಹೋರಾಡುತ್ತಲೇ ವಿದ್ಯಾರ್ಥಿಯಾಗಿ ಅವನು ಅರಳಿದ. ಕಡೆಗೆ ಹೇಳಿದ, ''ನಾನು ದೊಡ್ಡ ವೈದ್ಯನಾಗದಿದ್ದರೆ ಅಷ್ಟೇ ಹೋಯಿತು, ನಾನೊಬ್ಬ ಹೋರಾಟಗಾರನಾದೆನೆಂಬ ಹೆಮ್ಮೆ ನನ್ನಲ್ಲಿದೆ'' ಎಂದು.

ಮೈ ಉರಿ ಬರುವಂತೆ ಮತ್ತೆ ಅದೇ ದೆಹಲಿಯ ಪ್ರತಿಷ್ಠಿತ ಸಂಸ್ಥೆ , ಸಾರ್ವಜನಿಕ ಬೊಕ್ಕಸದ ಸಾವಿರಾರು ಕೋಟಿ ರೂಪಾಯಿ ಭಕ್ಷಿಸುವ ಸಂಸ್ಥೆ , ಈಗ ಇನ್ನೊಬ್ಬ ದಲಿತ ಸ್ನಾತಕೋತ್ತರ ವಿದ್ಯಾರ್ಥಿಯ ಮೇಲೆ ಕತ್ತಿ ಮಸೆದು ಅವನನ್ನು ಕೊಂದುಹಾಕಿದೆ. ಅದಕ್ಕೆ ಕಾರಣ ಅವನು ಅಶಿಸ್ತಿನ ಹುಡುಗ, ದಡ್ಡ, ಸ್ಟೆತೋಸ್ಕೋಪ್ ಹಿಡಿಯಲು ಕಲಿಯದ ಹುಡುಗ ಎಂದೇನೂ ಅಲ್ಲ. ಅವನನ್ನು ಕೊಂದದ್ದಕ್ಕೆ ಒಂದೇ ಕಾರಣ ಅವನು ದಲಿತ ಎಂಬುದು, ದಲಿತನಾಗಿದ್ದೂ ಇಂತಹ ಪ್ರತಿಷ್ಠಿತ ಸಂಸ್ಥೆಗೆ ಪ್ರವೇಶ ಪಡೆದ ಎಂಬುದು. ಅವನು ಉತ್ತರಪ್ರದೇಶದವನು, ಬಾಲ ಮುಕುಂದ ಎಂದು ಅವನ ಹೆಸರು. ಮಾರ್ಚ್ ೨೦೧೦ರಲ್ಲಿ ಇನ್ನು ಅವಮಾನ ಸಹಿಸಲಾರದೆ ಆತ್ಮಹತ್ಯೆಗೆ ಶರಣಾದ. ''ನೀನೆಂದೂ ಇಲ್ಲಿ ಡಿಗ್ರಿ ಪಡೆಯಲು ಬಿಡುವುದಿಲ್ಲ ನೋಡು'' ಎಂದು ಅವನ ಪ್ರಾಧ್ಯಾಪಕ ಯಾವಾಗಲೂ ಅವನನ್ನು ಹೀಯಾಳಿಸುತ್ತಿದ್ದ, ''ಕಮ್ಯುನಿಟಿ ಮೆಡಿಸಿನ್'' ಎಂಬ ವಿಭಾಗದಲ್ಲಿ ಅವನನ್ನು ಯಾವಾಗಲೂ ಫೇಲ್ ಮಾಡಿಸುತ್ತಲೇ ಬಂದ. ಆ ಪ್ರಾಧ್ಯಾಪಕನ ಮೇಲೆ ಯಾವ ಕ್ರಮವನ್ನೂ ಈವರೆಗೆ ಕೈಗೊಂಡಿಲ್ಲ , ಮುಂದೆ ಕೈಗೊಳ್ಳುವುದೂ ಇಲ್ಲ; ಆದರೆ ಅಸು ನೀಗಿದ ಮುಕುಂದನ ತಂದೆ-ತಾಯಿ ಪರಿತಪಿಸುತ್ತಲೇ ಇದ್ದಾರೆ. ಡಾ॥ ಅಂಬೇಡ್ಕರ್ ಜನ್ಮದಿನಗಳಂದು ಭಾವುಕತೆಯ ಭಾಷಣ ಮಾಡಿ ಕಡೆಗೆ 'ಜೈ ಭೀಮ್' ಎನ್ನುವ ಮಂತ್ರಿಗಳಿಗೆ ಬಾಲ ಮುಕುಂದನ ಆಕ್ರಂದನ ಕೇಳಲಿಲ್ಲ, ಅವನ ತಾಯಿಯ ಕಣ್ಣೀರು ಮನಕರಗಿಸಲಿಲ್ಲ. ಅದು ನಮ್ಮ ಸಂಸ್ಕೃತಿಯೇ ?

* * *

ಕಾಂಗ್ರೆಸ್ ಮುರಿದ ಮನೆ. ಜೆಡಿಎಸ್ ಕುಟುಂಬಕೇಂದ್ರಿತ. ಎರಡೂ ಪಕ್ಷಗಳ ಪ್ರತಿಷ್ಠೆ ಮಾತ್ರ ವಿಪರೀತ. ಕರ್ನಾಟಕ ರಾಜ್ಯದಲ್ಲಿ ಭಾಜಪ ಬೆಳೆಸಲು ಇಬ್ಬರೂ ಕಾರಣ. ಕೆಟ್ಟ ರಾಜಕಾರಣ ನಡೆಸಿದ ಗೌಡರು ಮಗನನ್ನು ಪಟ್ಟಕ್ಕೇರಿಸಲು ಕಣ್ಣು ಮುಚ್ಚಿಕೊಂಡು ಕೈಜೋಡಿಸಿದರು. ಈಗ ಅದರ ಫಲ ಅನುಭವಿಸುತ್ತಿದ್ದಾರೆ. ಈಚೆಗೆ ನಡೆದ ಉಪಚುನಾವಣೆಯಲ್ಲಿ ಎರಡೂ ಪಕ್ಷಗಳು ಪಂಗನಾಮ ಹಾಕಿಕೊಂಡಿವೆ. ಗೆದ್ದಿರುವವರೆಲ್ಲ ಇವರಲ್ಲಿದ್ದವರೇ. ಇಬ್ಬರೂ ಒಟ್ಟಾಗಿ ಒಂದು ಒಪ್ಪಂದಕ್ಕೆ ಬಂದಿದ್ದರೆ ಕನಿಷ್ಠ ಎರಡು ಕ್ಷೇತ್ರಗಳಲ್ಲಿ ಜಯ ಸಾಧಿಸಬಹುದಾಗಿತ್ತು. ಇಲ್ಲಿವರೆಗೆ ನಡೆದಿರುವ ಚುನಾವಣೆಗಳಲ್ಲಿ ಈ ಎರಡು ಪಕ್ಷಗಳ ಕಿತ್ತಾಟದಿಂದ ಭಾಜಪಗೆ ಚೆನ್ನಾಗಿ ಲಾಭವಾಗಿದೆ. ಎಲ್ಲಿಯವರೆಗೆ ಇವೆರಡೂ ಕಚ್ಚಾಡುತ್ತಿರುವುವೋ ಅಲ್ಲಿಯವರೆಗೆ ಯಡ್ಡಿಯೂರಪ್ಪ ಕುರ್ಚಿ ಭದ್ರ.

ಇದರ ಜೊತೆ ರಾಜ್ಯಪಾಲ ಹಂಸರಾಜ ಭಾರದ್ವಾಜ್ ಮತ್ತು ಮುಖ್ಯಮಂತ್ರಿ ಯಡ್ಡಿಯೂರಪ್ಪ ಜಿದ್ದಾಜಿದ್ದಿಯಲ್ಲೂ ಇದುವರೆಗೆ ಅನುಕೂಲವಾಗಿರುವುದು ಭಾಜಪಕ್ಕೆ. ಸರ್ವೋಚ್ಚ ನ್ಯಾಯಾಲಯದ ತೀರ್ಪು ಬಂದಮೇಲೆ ಅಮಾನತುಗೊಂಡಿದ್ದ ಶಾಸಕರು ಎತ್ತ ವಾಲುತ್ತಾರೆ ಎಂದು ಕಾದುನೋಡದೆ ಆತುರಾತುರವಾಗಿ ಕೇಂದ್ರಕ್ಕೆ ವರದಿ ಸಲ್ಲಿಸಿರುವ ರಾಜ್ಯಪಾಲರು ಈಗ ಪೆಚ್ಚಾಗಬೇಕಾಗಿದೆ. ಬಹುಮತ ಇರುವವರೆಗೆ ಸರಕಾರವನ್ನು ವಜಾ ಮಾಡಲಾಗದು ಎನ್ನುವುದನ್ನು ತಿಳಿದಿದ್ದರೂ ಕೇಂದ್ರದಲ್ಲಿ ಕಾನೂನು ಸಚಿವರಾಗಿದ್ದ ಅವರು ನಡೆದಿರುವ ದಾರಿ ಸಮರ್ಥನೀಯವಲ್ಲ. ಇದರ ಲಾಭ ಕೂಡ ಮತ್ತೆ ಆಡಳಿತ ಪಕ್ಷಕ್ಕೆ.

* * *

'ಕಳ್ಳನನ್ನು ನಂಬಿದರೂ ಕುಳ್ಳನನ್ನು ನಂಬಬಾರದು' ಅಂತ ಒಂದು ಮಾತಿದೆ. ಇದು ಸವೆದುಹೋಗಿರುವ ಕ್ಲೀಷೆ. ಅದಕ್ಕೆ ಬದಲಾಗಿ ಈಗ 'ಕಳ್ಳನನ್ನು ನಂಬಿದರೂ ಶಾಸಕನನ್ನು ನಂಬಬಾರದು' ಎಂದು ಬದಲಿಸಿದರೆ ಸೂಕ್ತವಾದೀತೇನೋ. ಅಧಿಕಾರ ಮತ್ತು ಹಣದ ಚೀಲದ ಮುಂದೆ ಶಾಸಕರ ನಿಷ್ಠೆ, ಅಭಿಮಾನ ಎಲ್ಲ ಕ್ಷಣಮಾತ್ರದಲ್ಲಿ ಗಾಳಿಗೆ ತೂರಿ ಹೋಗುತ್ತದೆ. ಕಳೆದ ಏಳೆಂಟು ತಿಂಗಳಿಂದ ನ್ಯಾಯಾಲಯದ ಸುತ್ತ ತಿರುಗುತ್ತಿದ್ದ 'ಭಾಜಪ'ದ ಭಿನ್ನ ಶಾಸಕರು ಈಗ ಮುಖ್ಯಮಂತ್ರಿ ಯಡ್ಡಿಯೂರಪ್ಪನ ಸುತ್ತ ಎಡತಾಕುತ್ತಿದ್ದಾರೆ. ಒಂದೇ ರಾತ್ರಿಯಲ್ಲಿ ತಮ್ಮ ನಿಲುವನ್ನು ಬದಲಿಸಿ ಪಕ್ಷದಲ್ಲಿ ತಮ್ಮ ಭಾರಿ ವಿಶ್ವಾಸವನ್ನು ವ್ಯಕ್ತಗೊಳಿಸಿದ್ದಾರೆ. ಇಂಥವರನ್ನು ನಂಬುವುದು ಹೇಗೆ? ಇವರೇ ನಮ್ಮನ್ನು ಆಳುತ್ತಿರುವ ಜನ ಪ್ರತಿನಿಧಿಗಳು!

* * *

ತಮಿಳುನಾಡಿನಲ್ಲಿ ಮತ್ತೆ ಎಐಡಿಎಂಕೆಯ ನಾಯಕಿ ಜಯಲಲಿತಾ ಅಧಿಕಾರದ ಗದ್ದುಗೆ ಹಿಡಿದಿದ್ದಾರೆ. ತಮಿಳುನಾಡಿನ ರಾಜಕೀಯದಲ್ಲಿ ಡಿಎಂಕೆ - ಎಐಡಿಎಂಕೆ ಇವರದೇ ಮೇಲಾಟ. ಅವರನ್ನು ಬಿಟ್ಟರೆ ಇವರು, ಇವರನ್ನು ಬಿಟ್ಟರೆ ಅವರು. ಭ್ರಷ್ಟತೆಯಲ್ಲಂತೂ ಯಾರು ಮೇಲು ಎಂದು ನಿರ್ಧರಿಸುವುದು ಕಷ್ಟ ಇಬ್ಬರೂ ಒಂದೇ ತೂಗುತ್ತಾರೆ. ವಿಚಿತ್ರ ಎಂದರೆ ಈ ಎರಡೂ ಪಕ್ಷಗಳು ತಮಿಳುನಾಡಿನಲ್ಲಿ ನಾಸ್ತಿಕವಾದಿ ದ್ರಾವಿಡ ಕಳಗಂನಿಂದ ಹುಟ್ಟಿಬಂದವು. ಅದರ ನಾಯಕ ರಾಮಸ್ವಾಮಿ ನಾಯಕರ್ ಅಪ್ಪಟ ನಾಸ್ತಿಕವಾದಿ. ಅಣ್ಣಾ ದೊರೈ ಇರುವವರೆಗೆ ಆ ಸಿದ್ಧಾಂತ ಜೀವಂತವಾಗಿತ್ತು. ಆಮೇಲೆ ಕವಲೊಡೆದ ಈ ಎರಡು ಪಕ್ಷಗಳೂ ನಾಸ್ತಿಕವಾದಿ ಸಿದ್ಧಾಂತಕ್ಕೆ ತಿಲಾಂಜಲಿ ಇತ್ತಿವೆ. ಎಐಡಿಎಂಕೆ ಹುಟ್ಟುಹಾಕಿದ ಎಂ. ಜಿ. ರಾಮಚಂದ್ರನ್ ಕೊಲ್ಲೂರು ಮೂಕಾಂಬಿಕೆ ಭಕ್ತನಾಗಿದ್ದ. ಈಗ ನಡೆದ ಚುನಾವಣೆಗಳಲ್ಲಿ ಜಯಲಲಿತ ಜಯಕ್ಕಾಗಿ ಎಐಡಿಎಂಕೆ ನಾಯಕನೊಬ್ಬ ಚೆನ್ನೈನಲ್ಲಿ ಅತಿದೊಡ್ಡ ಯಾಗ ನಡೆಸಿದ, ಕೋಟಿ ಕೋಟಿ ರೂಪಾಯಿ ಖರ್ಚುಮಾಡಿ. ಹೇಗಿದೆ ನೋಡಿ! ಅಲ್ಲದೆ ತಮಿಳುನಾಡಿನಲ್ಲಿ ಎಲ್ಲ ರಾಜಕೀಯವೂ ಸಿನಿಮೀಯ ಅಲ್ಲವೆ?

* * *

ಇಂಟರ್‌ನೆಟ್ ಎನ್ನುವ ಅಂತರ್ಜಾಲ ವ್ಯವಸ್ಥೆ ಇಂದು ತೀರ ಮುಕ್ತವಾದ ಒಂದು ಮಾಧ್ಯಮ. ಇಲ್ಲಿ ನಿರ್ಭಿಡೆಯಿಂದ ಎಲ್ಲರೂ ಎಲ್ಲರನ್ನೂ ವಿಮರ್ಶಿಸಿ, ಚರ್ಚಿಸಿ, ಪ್ರಚಾರಮಾಡುವ ಅವಕಾಶವಿದೆ. ಹಲವಾರು ಪ್ರಗತಿಪರ, ಪ್ರಗತಿವಿರೋಧಿ ಚಟುವಟಿಕೆಗಳೂ ನಡೆಯುತ್ತವೆ. ಆಂದೋಲನಗಳು ಚಳುವಳಿಗಳು ಸಂಘಟಿಸಲ್ಪಡುತ್ತಿವೆ. ಇವೆಲ್ಲಾ ಎಲ್ಲರೂ ಬಯಸುವಂತೆ ಇಲ್ಲದೆ ಇರಬಹುದು. ಆದರೆ ಇವೆಲ್ಲಾ ಬಹಿರಂಗವಾಗಿ ನಡೆಯುವುದೇ ಅದರ ಕೆಟ್ಟ ವಿಷಯಗಳನ್ನು ನಿಯಂತ್ರಿಸಲೂ ಸಹಾಯಕ. ಈಗ ಸರ್ಕಾರಗಳು, ಭಯೋತ್ಪಾದನೆಯನ್ನು ತಡೆಗಟ್ಟುವ ನೆಪದಲ್ಲಿ ಈ ಮಾಧ್ಯಮದ ಮೇಲೆ ಹಲವಾರು ಕಟ್ಟುಪಾಡುಗಳನ್ನು ಹೇರಲು ಮುಂದೆ ಬಂದಿವೆ. ಹಾಗೂ ಸರ್ಕಾರ ಇಲ್ಲಿಯ ಎಲ್ಲ ವೈಯಕ್ತಿಕ ವಿಷಯಗಳನ್ನು ತಾನು ಕದ್ದಾಲಿಸುವ, ನೋಡುವ ಹಕ್ಕನ್ನು ಬಯಸಿದೆ. ಈಗಾಗಲೇ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಸಾಧಾರಣ ಪ್ರಜೆ ಯಾವುದೇ ವೈಯಕ್ತಿಕ ಗೌಪ್ಯ ವಿಷಯವನ್ನು ಉಳಿಸಿಕೊಳ್ಳಲಾಗದ ಪರಿಸ್ಥಿತಿ ಉಂಟಾಗಿದೆ. ಈ ದೊಡ್ಡಣ್ಣನ ಬಾಲ ಬಡುಕನಾದ ನಮ್ಮ ಸರ್ಕಾರವೂ ಅದೇ ಕಟ್ಟುಪಾಡುಗಳನ್ನು ವಿಧಿಸಲು ಮುಂದಾಗಿರುವುದು ಶೋಚನೀಯ. ಪ್ರಭುತ್ವದ ಸರ್ವಾಧಿಕಾರೀ ಇಚ್ಛೆ ಪ್ರಜಾಪ್ರಭುತ್ವದ ಪ್ರಕ್ರಿಯೆಗಳಿಗೆ ಮುಳುವಾಗುವ, ತುರ್ತು ಪರಿಸ್ಥಿತಿಯ ಕಾಲವನ್ನು ನೆನಪಿಸುವ ಮಟ್ಟಕ್ಕೆ ಹೋದೀತೆ ಎನ್ನುವ ಗಾಬರಿ ಉಂಟಾಗಿದೆ. ನೀಲೇಕಣಿ ಮಾಡುತ್ತಿರುವ ಸಾರ್ವತ್ರಿಕ ಗುರುತಿನ ಚೀಟಿ ಹೀಗೆ ಪೌರರ ವೈಯಕ್ತಿಕ ವಿಷಯಗಳನ್ನು ಶೋಧಿಸಲು ಬಳಕೆಯಾಗದು ಎನ್ನುವ ಭರವಸೆ ಏನೂ ಇಲ್ಲ.

* * *

ಮಾಧ್ಯಮಗಳೆಲ್ಲಾ ಒಂದಾಗಿ ಎಡಪಕ್ಷಗಳನ್ನು ವಿರೋಧಿಸಲು ಆರಂಭಿಸಿದರೆ ಇಂದು ಏನೂ ಮಾಡಲಾಗುವುದಿಲ್ಲ. ಪುರುಲಿಯಾದಲ್ಲಿ ಶಸ್ತ್ರಾಸ್ತ್ರ ಸರಬರಾಜು ಮಾಡಿದ ಪ್ರಸಂಗವನ್ನು ಪಶ್ಚಿಮ ಬಂಗಾಲದಲ್ಲಿ ಚುನಾವಣೆಯ ಸಂದರ್ಭದಲ್ಲೇ ಚರ್ಚೆಗೆ ತಂದಿದ್ದು, ಅದರಲ್ಲಿ ಭಾಗವಹಿಸಿದವನನ್ನು ಟಿವಿಯಲ್ಲಿ ನೇರ ಮಾತನಾಡಲು ಬಿಟ್ಟು, ಮಮತಾಪರ ವಾದ ಮಂಡಿಸಿದ್ದು ಅಂಥ ಒಂದು ಪ್ರಜಾಪ್ರಭುತ್ವ ವಿರೋಧೀ ಕ್ರಮ. ಆ ಪ್ರಸಂಗ ನಡೆದಾಗಲೇ ಎಡಪಕ್ಷಗಳು ಅದು ಪಶ್ಚಿಮ ಬಂಗಾಳದ ಚುನಾಯಿತ ಸರ್ಕಾರದ ವಿರುದ್ಧ ಪಿತೂರಿ ಎಂದಾಗ ಎಲ್ಲರೂ ಎಡಪಕ್ಷಗಳನ್ನು ಟೀಕಿಸಿದ್ದರು. ಆದರೆ ಈಗ ಡೇವಿಸ್ ಎಂಬ ಅಯೋಗ್ಯನು ಕಮ್ಯುನಿಸ್ಟ್ ಪಕ್ಷಗಳ ವಿರುದ್ಧ ಪಿತೂರಿ ನಡೆಸುವುದು ಅಂತರರಾಷ್ಟ್ರೀಯ ಕಾನೂನಿನನ್ವಯ ನ್ಯಾಯಯುತವಾದುದು ಎಂದು ತನ್ನ ಸಮರ್ಥನೆ ಮಾಡಿಕೊಂಡಿರುವುದು ಹಾಗಿರಲಿ, ಅದನ್ನು ಪ್ರಚಾರ ಮಾಡಿದ ಟೈಂಸ್-ನೌ ವಾಹಿನಿಯ ದುರುದ್ದೇಶದ ಹಿಂದಿನ ಕೈವಾಡ ಯಾರದು? ಸಿಪಿಎಂ ಕಾರ್ಯಕರ್ತರು ಮತ್ತು ಮಾವೋವಾದಿಗಳ ನಡುವಿನ ಘರ್ಷಣೆಯನ್ನು ನ್ಯಾಯಯುತವೆಂದು ಸಾರಿದರೆ ಮಮತಾ ದೀದಿಯ ಭಂಟರು ಯಾವ ರೀತಿ ವರ್ತಿಸುವರೋ ಎಂಬ ಆತಂಕ ವಾಸ್ತವವಾದುದು. ನ್ಯಾಯಯುತವಾಗಿ, ಪ್ರಜಾಪ್ರಭುತ್ವಾತ್ಮಕವಾಗಿ, ಎಡಪಕ್ಷಗಳು ಭಾಗವಹಿಸಿ ಗೆದ್ದು ಬರುವುದಕ್ಕೂ ಇನ್ನು ಮೇಲೆ ಅವಕಾಶ ನೀಡಬಾರದು ಎಂಬ ಧೋರಣೆ ಬೆಳೆಯುತ್ತಿರುವುದು ಆತಂಕಕಾರಿ. ನಮ್ಮ ರಾಜ್ಯ ಒಂದರ ಸರ್ಕಾರದ ವಿರುದ್ಧ ಅಂತರರಾಷ್ಟ್ರೀಯವಾಗಿಯೂ ಪಿತೂರಿ ಮಾಡಬಹುದು, ಅದರ ಬಗ್ಗೆ ಕೇಂದ್ರ ಸರ್ಕಾರ ತಲೆ ಕೆಡಿಸಿಕೊಳ್ಳುವುದಿಲ್ಲ ಎನ್ನುವುದು ಇನ್ನೂ ಆತಂಕಕಾರಿ. ■

*ಸಂಪಾದಕೀಯ (೫ನೇ ಪುಟದಿಂದ)*

ಭದ್ರತಾ ಮಂಡಲಿಯ ಸಭೆಯಲ್ಲಿ ಈ ಐದು ದೇಶಗಳು ನಡೆದುಕೊಂಡ ರೀತಿ ಅದಕ್ಕೆ ಸಾಕ್ಷಿ. ಈ ದೇಶಗಳ ಪೈಕಿ ರಷ್ಯಾ, ಚೀಣಾಗಳು ಭದ್ರತಾ ಮಂಡಲಿಯ ಖಾಯಂ ಸದಸ್ಯ ರಾಷ್ಟ್ರಗಳು ಎನ್ನುವುದನ್ನು ನೆನಪಿನಲ್ಲಿಡಬೇಕು. ಲಿಬಿಯಾದಲ್ಲಿ 'ನ್ಯಾಟೋ' ರಾಷ್ಟ್ರಗಳ ಮಧ್ಯಪ್ರವೇಶವನ್ನು ಈ ತಂಡದ ರಾಷ್ಟ್ರಗಳು ತಡೆಯಲು ಸಾಧ್ಯವಿತ್ತು. ಆದರೆ ಅಮೆರಿಕ, ಬ್ರಿಟನ್, ಫ್ರಾನ್ಸ್‌ಗಳು ಮಧ್ಯಪ್ರವೇಶಕ್ಕಾಗಿ ಮಂಡಿಸಿದ ನಿರ್ಣಯಕ್ಕೆ ಮತ ನೀಡದೆ ಮೌನ ವಹಿಸಿದವು. ರಷ್ಯಾ, ಚೀಣಾಗಳು ವೀಟೋ ಹಕ್ಕು ಚಲಾಯಿಸಲು ಹಿಂಜರಿದುವು. ಪರಿಣಾಮ ಲಿಬಿಯಾದಲ್ಲಿ ಸಾವಿರಾರು ಅಮಾಯಕರ ಸಾವು 'ನ್ಯಾಟೋ' ಬಾಂಬು ದಾಳಿಯಿಂದ. ಪಶ್ಚಿಮ ರಾಷ್ಟ್ರಗಳು, ಅಮೆರಿಕ ಗದಾಫಿಯ ನಿರ್ಮೂಲನಕ್ಕಾಗಿ ಹೊರಟಿರುವುದು 'ಬ್ರಿಕ್ಸ್' ದೇಶಗಳಿಗೆ ಈಗ ತಲೆನೋವಾಗಿ ಪರಿಣಮಿಸಿದೆ. ಅದರ ಬಗ್ಗೆ ತಮ್ಮ ಕಳವಳವನ್ನು ಅವು ವ್ಯಕ್ತಗೊಳಿಸಿವೆ. ಆದರೆ ಈಗ ಅದರಿಂದ ಪ್ರಯೋಜನವಿಲ್ಲ, ವ್ಯರ್ಥ ಪ್ರಲಾಪ ಅಷ್ಟೆ.

ಎಲ್ಲಿಯವರೆಗೆ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳನ್ನು ಎದುರಿಸುವ ಧೋರಣೆಗೆ ಹಿಂಜರಿಕೆ ಇರುವುದೋ ಅಲ್ಲಿಯವರೆಗೆ ಬ್ರಿಕ್ಸ್ ಪರಿಣಾಮಕಾರಿಯಾಗದು. ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಏಕಕೇಂದ್ರೀಯ ವ್ಯವಸ್ಥೆಯನ್ನು ಅಲುಗಾಡಿಸಲಾಗದು. ಇಂದಿನ ಪರಿಸ್ಥಿತಿಯಲ್ಲಿ ಸಮಾನವಾದ ಸಂಬಂಧಗಳ, ಪ್ರಜಾಪ್ರಭುತ್ವಾತ್ಮಕವಾದ ಬಹುಕೇಂದ್ರೀಯ ವ್ಯವಸ್ಥೆ ಮುನ್ನಡೆಗೆ ಅಗತ್ಯ. 'ಬ್ರಿಕ್ಸ್' ಅಂಥ ಸಾಧ್ಯತೆಗೆ ನೆರವಾಗಬಲ್ಲದು. ಹಾಗಾಗಲಿ ಎಂದು ಹಾರೈಸೋಣ.

[signature]

## ಬದುಕಲು ಬಿಡಿ

ಕೊಲ್ಲದಿರಿ ನನ್ನ ಕನಸುಗಳ ನನಗೂ ಬಾಳುವಾಸೆ
ಒಡೆಯದಿರೆನ್ನ ಆಶೆಯ ಮೊಟ್ಟೆಗಳ ನನಗೂ ನಲಿಯುವಾಸೆ

ಹಾಕದಿರಿ ನನ್ನ ಬಾಯಿಗೆ ಹಂಗಿನ ಬೀಗ
ನನಗೂ ಮಾತಾಡುವಾಸೆ ಮನತುಂಬಿ ಹಾಡುವಾಸೆ

ಹಿಡುಕದಿರಿ ನನ್ನ ಹೃದಯ ಅದಕ್ಕೂ ಹಿಗ್ಗುವಾಸೆ
ಕೀಳದಿರೆನ್ನ ಎಳೆಕಣ್ಣುಗಳ ಲೋಕವ ಕಣ್ತುಂಬ ನೋಡುವಾಸೆ

ನಾನಿನ್ನೂ ಮಿಡಿಮೊಗ್ಗು ಕಾರಣವಿಲ್ಲದೆ ಕಿತ್ತೆಸೆಯದಿರಿ
ನನಗೂ ಅರಳುವಾಸೆ ಸುತ್ತೆಲ್ಲ ಪರಿಮಳ ಬೀರುವಾಸೆ

ಯಾರ ಮುಡಿಯೋ - ದೇವರಡಿಯೋ ಸೇರದಿದ್ದರೂ
ಕವಿಯ ಹೃದಯದಲಿ ಕವನವಾಗಿ ಸ್ಪಂದಿಸುವಾಸೆ

ನಾನು ಹುಟ್ಟಿದ್ದು ತಪ್ಪೆ?? ನಾ ಬೇಡುತ್ತಿಲ್ಲ ಹಣ-ಧನ
ನನ್ನ ಪಾಡಿಗೆ ಬಿಡಿ ನನ್ನ ನನಗೂ ಬದುಕುವಾಸೆ.

**ಕುಸುಮ ನಕೋಸಾ ಕರಾಳೆ**, 'ಶ್ರೀನಗರ', ಧಾರವಾಡ - ೩




## ಏಪ್ರಿಲ್ ಸಂಚಿಕೆ

ಜಪಾನಿನಲ್ಲಿ ನಡೆದ ಭೀಕರ ದುರಂತದ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಮುಖಪುಟದಲ್ಲಿ ಚಿತ್ರಿಸಿದ ಏಪ್ರಿಲ್ ೨೦೧೧ರ 'ಹೊಸತು' ನಡುಕ ಉಂಟುಮಾಡಿತು. ಈ ಬಗ್ಗೆ ಸಿ. ಆರ್. ಕೃಷ್ಣರಾವ್‌ರವರು ಬರೆದ ಜಪಾನಿನ ತ್ರಿವಳಿ ದುರಂತ ಈ ಶೀರ್ಷಿಕೆಯಡಿಯಲ್ಲಿ ಬರೆದ ಚಿಕ್ಕ ಶ್ರದ್ಧಾಂಜಲಿ ಲೇಖನ ಓದಿದೆ. ನಿಜಕ್ಕೂ ಭಾರತದಂತಹ ಪ್ರದೇಶದಲ್ಲಿ ಈ ರೀತಿಯ ಒಂದು ದುರಂತ ಸಂಭವಿಸಿದರೆ ನೆನಸಿಕೊಳ್ಳುವುದಕ್ಕೇ ಆಗದು. ಆದರೆ ಇಂದು ಭಾರತ ಅಭಿವೃದ್ಧಿಯ ಪಥದ ನೆಪದಲ್ಲಿ ಪರಮಾಣು ವಿದ್ಯುತ್‌ನತ್ತ ದಾಪುಗಾಲು ಹಾಕುತ್ತಿದೆ. ಮುಂದುವರಿಯುತ್ತಿರುವ ರಾಷ್ಟ್ರಗಳಿಗೆ ಇದು ಅನಿವಾರ್ಯವಾದರೂ ಸಹ ದುರಂತ ಸಂಭವಿಸಿದ ಮೇಲೆ ಯಾವ ರೀತಿಯ ಕ್ರಮ ಕೈಗೊಳ್ಳಬಹುದು ಎಂಬ ಮುಂದಾಲೋಚನೆ ಇರಬೇಕು. ಈ ನಿಟ್ಟಿನಲ್ಲಿ ಭಾರತ ಯಾವ ಮುಂಜಾಗ್ರತಾ ಕ್ರಮ ಕೈಗೊಳ್ಳುತ್ತಿಲ್ಲ. ಜಪಾನಿನ ದುರಂತದಿಂದಲಾದರೂ ಭಾರತ ಎಚ್ಚರಿಕೆಯ ಪಾಠ ಕಲಿಯಬೇಕು. ದುರಂತಗಳು ನಡೆದ ಮೇಲೆ ಸಂಕಷ್ಟಕ್ಕೆ ಸಿಲುಕದೆ ಮುಂಚೆಯೇ ತಕ್ಕಮಟ್ಟಿಗಾದರೂ ಪ್ರಕೃತಿಯೊಂದಿಗೆ ಸ್ಪಂದಿಸುವ ಗುಣ ಮೈಗೂಡಿಸಿಕೊಳ್ಳಬೇಕು.

ಮೈಸೂರು **ಕಾಳೀಹುಂಡಿ ಶಿವಕುಮಾರ್**

## ಮೇ ಸಂಚಿಕೆ

ಭ್ರಷ್ಟಾಚಾರದ ವಿರುದ್ಧ ನಿರಂತರವಾಗಿ ಹೋರಾಟ ನಡೆಸಬೇಕೆನ್ನುವ ವಿಷಯವನ್ನು ಹೊತ್ತುತಂದ 'ಮೇ ೨೦೧೧'ರ 'ಹೊಸತು' ಅಣ್ಣಾ ಹಜಾರೆ ಅವರ ಚಳುವಳಿಗೆ ಸಾರ್ವಜನಿಕರು ನೀಡಿದ ಬೆಂಬಲವನ್ನು ಗುರುತಿಸುವಲ್ಲಿ ಯಶಸ್ವಿಯಾಗಿದೆ. ಜನಲೋಕಪಾಲ್ ಮಸೂದೆ ಕರಡು ರಚನಾ ಸಮಿತಿಯಲ್ಲಿ ಯಾರ್‍ಯಾರು ಇರ್ತಾರೆ ಎನ್ನುವುದು ಗೌಣ! ಆ ವರ್ಗಕ್ಕೆ, ಈ ವರ್ಗಕ್ಕೆ, ಮಹಿಳೆಯರಿಗೆ ಅವಕಾಶ ನೀಡಬೇಕು ಎನ್ನುವ ಮಾತಿನಲ್ಲಿ ಹುರುಳಿಲ್ಲ.

ಈಗಿರುವ ಸಮಿತಿಯ ಸದಸ್ಯರು ಮಸೂದೆಯನ್ನು ರಚಿಸುವುದಕ್ಕೆ ಅಗತ್ಯ ಅರ್ಹತೆಯನ್ನು ಹೊಂದಿದ್ದಾರೆ. ಆ ಸಭೆಯ ನಡಾವಳಿಗಳನ್ನು ವೀಡಿಯೋ ದಾಖಲೆ ಮಾಡಿರುವುದು. ಉಚಿತ ಹಾಗೂ ನಡಾವಳಿಗಳನ್ನು ಭಾರತದ ಪ್ರಜೆಗಳು ಗಮನಿಸುವ ಹಕ್ಕನ್ನು ಸಹ ಹೊಂದಿದ್ದು, ಅಲ್ಲಾಗಿರುವ ನಡಾವಳಿಗಳು ಮಾಧ್ಯಮಗಳಲ್ಲಿ ಪ್ರಸಾರವಾಗಬೇಕು!

ಮತ್ತೊಂದು ಮೇ ದಿನಾಚರಣೆ ಮುಗಿದಿದೆ. ಕಾರ್ಮಿಕರ ಹಿತಾಸಕ್ತಿಗಳನ್ನು ಕಾಪಾಡಲು ಸರ್ಕಾರ ಮಾಡುತ್ತಿದೆ ಎನ್ನಲಾದ ಪ್ರಯತ್ನಗಳು ಪ್ರಶ್ನಾರ್ಹ. ಕಾರ್ಮಿಕ ಕಾನೂನುಗಳಿಗೆ ಅಗತ್ಯ ತಿದ್ದುಪಡಿ ಮಾಡಿ ಶೋಷಿತ ವರ್ಗಕ್ಕೆ ಅನುಕೂಲ ಮಾಡಿಕೊಡುವ ಅಗತ್ಯವಿದೆ. ರೋಗಗ್ರಸ್ತ ಸರ್ಕಾರಿ ಆಸ್ಪತ್ರೆಗಳನ್ನು ಮಠಗಳಿಗೆ ವಹಿಸುವುದೇ ಮೂರ್ಖತನವೆಂದ ಡಾ॥ ಸಿ. ಆರ್. ಚಂದ್ರಶೇಖರ್‌ರವರ ಅಭಿಪ್ರಾಯ ಸರ್ವಮಾನ್ಯ! ಸರ್ಕಾರಿ ಆಸ್ಪತ್ರೆಗಳಿಗೆ ಸಾಕಷ್ಟು ಸ್ವಾತಂತ್ರ್ಯ ನೀಡಿ, ಸಮರ್ಥವಾಗಿ ಕೆಲಸ ಮಾಡಲು ಸರ್ಕಾರ ಅವಕಾಶ ಮಾಡಿಕೊಡಬೇಕಷ್ಟೆ!

ಮೈಸೂರು **ಕೋ. ಸು. ನರಸಿಂಹಮೂರ್ತಿ**




ಸೂಜಿ-ದಾರದ ಹಾಡುಪಾಡು – ಲಕ್ಷಾಂತರ ಗಾರ್ಮೆಂಟ್ ಮಹಿಳಾ ಕಾರ್ಮಿಕರ ಬವಣೆಯನ್ನು ಮನಸ್ಸಿಗೆ ನಾಟುವಂತೆ ಪರಿಚಯಿಸಿಕೊಡುವುದರಲ್ಲಿ ಯಶಸ್ವಿಯಾಗಿದೆ. ಮ್ಯಾನೇಜರುಗಳು, ಸೂಪರ್‌ವೈಸರುಗಳು ಮತ್ತು ಲೀಗಲ್ ಆಫೀಸರುಗಳು ಸಹ ನಕ್ಷತ್ರಿಕರಾಗಿ ವರ್ತಿಸುತ್ತಾರೆ. ಇವರನ್ನು ವಾರಕ್ಕೊಮ್ಮೆ ಮಾನಸಿಕ ಆಸ್ಪತ್ರೆಗೆ ಕಳಿಸಿ ಇಲಾಜು ಮಾಡಿಸಿದರೆ ಒಳ್ಳೆಯದೆನಿಸುತ್ತದೆ. ಕಾರ್ಮಿಕಳಾಗಿ ದುಡಿಯುತ್ತ, ಶೋಷಣೆಯ ವಿರುದ್ಧ ದನಿಯೆತ್ತಿ ಕಾರ್ಮಿಕ ನಾಯಕಿಯಾಗಿ ಮೂಡಿಬಂದಿರುವ ರುಕ್ಮಿಣಿಯಂಥ ದಿಟ್ಟ ಮಹಿಳೆಯರು ತಮ್ಮ ದಿಟ್ಟತನವನ್ನು ಪ್ರಕಟಪಡಿಸಬೇಕಾದ್ದು ಇಂದಿನ ಅಗತ್ಯ.

ಬೆಂಗಳೂರು **ಲಕ್ಕಮ್ಮ ಲಗ್ಗೆರೆ**

ಎಂದಿನಂತೆ, 'ಹೊಸತು' ಹೊಸ ಹೊಸ ವಿಚಾರಗಳನ್ನು ಹೊತ್ತು ತಂದಿದೆ. ನನಗೆ, ಪ್ರತಿ ಸಂಚಿಕೆಯ 'ಈ ತಿಂಗಳು' ಹಾಗೂ ಸಂಪಾದಕೀಯಗಳು ಬಹು ಇಷ್ಟವಾಗುವ ಲೇಖನಗಳು. ಉಳಿದವು ಇಷ್ಟವಾಗುವುದಿಲ್ಲ ಎಂದಲ್ಲ. ಅವುಗಳೂ ಕೂಡ ಅಚ್ಚೊತ್ತಿದ ಪರಿಣಾಮವನ್ನುಂಟುಮಾಡುತ್ತವೆ.

ಹಾಲಿ, 'ಈ ತಿಂಗಳು'ದ ಪ್ರಥಮ ಪ್ಯಾರಾದಲ್ಲಿಯೆ ವಿಷಯವಾಗಿ – ನೇರವಾಗಿ ವಿಷಯ ಪ್ರಸ್ತಾಪಿಸಿರುವುದು ಹಾಗೂ ನವಿರಾಗಿ ಖಂಡಿಸಿರುವುದು ಬಹು ಇಷ್ಟವಾಯಿತು. ಡಾ॥ ಕೋವೂರರು ಪವಾಡ ಬಯಲಿಗೆಳೆದಾಗ, ನಮ್ಮ ದೇಶದ ಹಾಗೂ ಪರದೇಶದ ಜನ ಇವರನ್ನು ತಿರಸ್ಕರಿಸಬೇಕಿತ್ತು. ಅಂಥವರ ದರ್ಶನಕ್ಕಾಗಿ ಕೋಟಿ ಕೋಟಿ ಜನ ಹರಿದು ಬರುವುದು, ಪೋಟಿಗಾಗಿ ಬೂಟು ನೆಕ್ಕುವ ರಾಜಕಾರಣಿಗಳ ದಂಡೇ ಅಲ್ಲಿ ನೆರೆಯುವುದು ಅರ್ಥವಿಲ್ಲದ ಸಂಗತಿ. ಇಲ್ಲಿಯವರೆಗೆ ಯಾವ ಮಾಡರ್ನ್ ಸ್ವಾಮಿಯಾಗಲಿ ಅವರ ಶಿಷ್ಯರಾಗಲಿ ಸ್ವರ್ಗಕ್ಕೆ ಹಾರಿದ್ದಾರ? ಯಾರ ಹಣೆಯಬರಹವನ್ನು ಅಳಿಸಿದ್ದಾರೆ? ಈ ಪ್ರಶ್ನೆ ನಮಗೇಕೆ ಅರ್ಥವಾಗುತ್ತಿಲ್ಲವೋ!

ಚಿತ್ರದುರ್ಗ **ಶರಣಗೌಡ ಎರಡೆತ್ತಿನ**

ರಾ. ನಂ. ಚಂದ್ರಶೇಖರ ಅವರು ''ವಿಶ್ವ ಕನ್ನಡ ಸಮ್ಮೇಳನ – ೨೦೧೧'' ಲೇಖನದಲ್ಲಿ ಕನ್ನಡ ಅಭಿವೃದ್ಧಿಯ ಹಲವಾರು ಮಜಲುಗಳ ಬಗ್ಗೆ ವಿವರಿಸಿದ್ದಾರೆ. ನಮ್ಮ ಕೆಲ ಕನ್ನಡ ಹೆಸರಾಂತ ಸಾಹಿತಿಗಳು, ಕನ್ನಡ ಪರ ಹೋರಾಟ ಸಂಘಟಕರು, ಮಂತ್ರಿಗಳು, ಉಪನ್ಯಾಸಕರು, ಉಪಾಧ್ಯಾಯರು, ಸರಕಾರಿ ನೌಕರರು ಕನ್ನಡದ ಬಗ್ಗೆ ಅಭಿಮಾನ ವ್ಯಕ್ತಪಡಿಸುತ್ತ ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮದ ಶಾಲೆಗೇ ಕಳಿಸುತ್ತಿರುವುದರಿಂದ ಕನ್ನಡದ ಅಭಿವೃದ್ಧಿ ಹೇಗೆ ಸಾಧ್ಯ?

ತುಮಕೂರು **ವಾಮನ ರಾವ್**

## ಬಡತನ ನಿರ್ಮೂಲನೆ ಸಾಧ್ಯವೆ?

ನಿಸರ್ಗ ಮಾನವನ ಎಲ್ಲ ಅವಶ್ಯಕತೆಗಳನ್ನು ಪೂರೈಸಬಲ್ಲದು. ಆದರೆ ಅದು ಆತನ ದುರಾಶೆಯನ್ನು ಶಮನಗೊಳಿಸಲಾರದು. ಬಡತನವೂ ಮನುಷ್ಯನ ದುರಾಸೆಯ ಒಂದು ಫಲ. ಅತಿ ಶ್ರೀಮಂತರಿದ್ದಾರೆಂದೇ ಅತಿ ಬಡವರೂ ಇದ್ದಾರೆ. ಈ 'ಅತಿ'ಗಳು ಇಲ್ಲವಾದರೆ ಎಲ್ಲರೂ ಸಮಾನರೇ.

ಒಂದು ಕಡೆ ಜಗತ್ತಿನ ಅತಿ ಶ್ರೀಮಂತ ರಾಷ್ಟ್ರ ಬರ್ಮುಡಾ ಇದೆ. ಅಲ್ಲಿ ಒಬ್ಬ ವ್ಯಕ್ತಿಯ ವಾರ್ಷಿಕ ಸರಾಸರಿ ಆದಾಯ ೬೯,೯೦೦ ಡಾಲರುಗಳು. ಇನ್ನೊಂದು ಕಡೆ ಜಿಂಬಾಬ್ವೆ ಎಂಬ ಅತ್ಯಂತ ಬಡ ದೇಶವಿದೆ. ಅಲ್ಲಿ ವ್ಯಕ್ತಿಯ ಸರಾಸರಿ ಆದಾಯ ಕೇವಲ ೨೦೦ ಡಾಲರುಗಳು. ವ್ಯತ್ಯಾಸ ಹೋಲಿಸಲು ಆಗದಷ್ಟು ಅಪಾರ. ಇಲ್ಲಿ ಆದಾಯ ಎಂದರೆ ಒಬ್ಬ ವ್ಯಕ್ತಿಯ ಕೊಳ್ಳುವ ಸಾಮರ್ಥ್ಯ. ಕೆಲವು ದೇಶಗಳ ವ್ಯಕ್ತಿಯ ಸರಾಸರಿ ಕೊಳ್ಳುವ ಸಾಮರ್ಥ್ಯವನ್ನು (ಡಾಲರುಗಳಲ್ಲಿ) ಗಮನಿಸಿ:

* ಭಾರತ ೨,೭೪೦
* ಬಂಗ್ಲಾದೇಶ ೧,೩೪೦
* ಪಾಕಿಸ್ತಾನ ೨,೫೭೦
* ಶ್ರೀಲಂಕಾ ೪,೨೧೦
* ಚೀನಾ ೫,೩೭೦
* ಅಮೆರಿಕಾ ೪೫,೮೫೦

ವಿಶ್ವದ ಎಲ್ಲ ಸಂಪತ್ತನ್ನು ಒಟ್ಟುಗೂಡಿಸಿ, ಭೂಮಿಯ ಮೇಲಿರುವ ಎಲ್ಲ ಜನರಿಗೂ ಸಮಾನವಾಗಿ ಹಂಚಿಬಿಟ್ಟರೆ ಬಡವರೂ ಇರುವುದಿಲ್ಲ. ಶ್ರೀಮಂತರೂ ಇರುವುದಿಲ್ಲ. ಜಗತ್ತಿನ ಪ್ರತಿಶತ ೪೦ರಷ್ಟು ಬಡವರು ಒಟ್ಟು ಸಂಪತ್ತಿನ ಪ್ರತಿಶತ ೫ರಷ್ಟನ್ನು ಹೊಂದಿದ್ದಾರೆ. ಪ್ರತಿಶತ ೨೦ರಷ್ಟು ಶ್ರೀಮಂತರು ಪ್ರತಿಶತ ೭೫ರಷ್ಟು ಸಂಪತ್ತನ್ನು ಪಡೆದಿದ್ದಾರೆ. ಜಗತ್ತಿನ ಸಂಪತ್ತಿನ ಹಂಚಿಕೆಯಲ್ಲಿರುವ ಅಸಮತೋಲನವನ್ನು

ಈ ಮೂಲಕ ಗುರುತಿಸಬಹುದು. ಇನ್ನುಳಿದ ೪೦ರಷ್ಟು ಜನ ಇತ್ತ ಬಡವರೂ ಅಲ್ಲ, ಅತ್ತ ಶ್ರೀಮಂತರೂ ಅಲ್ಲ.

ಇದ್ದ ಸಂಪತ್ತನ್ನು ಎಲ್ಲರಲ್ಲೂ ಸಮಾನವಾಗಿ ಹಂಚುವ ಹಾಗೂ ಆ ಮೂಲಕ ಬಡತನವನ್ನು ನಿವಾರಿಸುವ ವಿಚಾರವೇನೊ ಚೆನ್ನಾಗಿದೆ. ಆದರೆ ಅದು ಜಾರಿಗೆ ಬರುವುದು ಅಸಾಧ್ಯ.

ಬಿಜಾಪುರ **ಸುಭಾಸ ಯಾದವಾಡ**

### ಸರ್ಕಾರಿ ಆಸ್ಪತ್ರೆಗಳ ಆಡಳಿತ ನಿರ್ವಹಣೆ

ಮೇ ತಿಂಗಳ (೨೦೧೧) ಪತ್ರಿಕೆಯಲ್ಲಿ ಖ್ಯಾತ ಮನೋವೈದ್ಯ ಸಾಹಿತಿ ಡಾ॥ ಸಿ. ಆರ್. ಚಂದ್ರಶೇಖರ್ ಅವರ ಲೇಖನ ''ರೋಗಗ್ರಸ್ತ ಸರ್ಕಾರಿ ಆಸ್ಪತ್ರೆಗಳು : ಮಠಗಳಿಗೆ ವಹಿಸುವುದು ಮೂರ್ಖತನ'' ಎಂಬ ಲೇಖನ ನಮ್ಮ ಆಸ್ಪತ್ರೆ ಹಾಗೂ ಇತರ ಸ್ವಾಸ್ಥ್ಯ ವ್ಯವಸ್ಥೆಗಳ ನೈಜ ಮತ್ತು ವಾಸ್ತವ ಸ್ಥಿತಿಗಳಿಗೆ ಹಿಡಿದ ಕೈಗನ್ನಡಿಯಂತಿದೆ. ನಮ್ಮ ಆಸ್ಪತ್ರೆಗಳಲ್ಲಿರುವ ಅವ್ಯವಸ್ಥೆ, ವೈದ್ಯರಾದಿಯಾಗಿ ಎಲ್ಲಾ ಸಿಬ್ಬಂದಿವರ್ಗದವರ ವರ್ತನೆ, ರೋಗಿಗಳು ಅನುಭವಿಸು ತ್ತಿರುವ ನರಕ ಸದೃಶ ಯಾತನೆಗಳನ್ನು ಸವಿವರವಾಗಿ ಡಾ॥ ಸಿ. ಆರ್. ಸಿ. ದಾಖಲಿಸಿದ್ದಾರೆ; ಅವುಗಳಿಗೆ ಕೆಲವು ಪರಿಹಾರಗಳನ್ನೂ ಸೂಚಿಸಿದ್ದಾರೆ. ಅದರಿಂದ ನಾನು ಮತ್ತೊಮ್ಮೆ ವಿವರಿಸುವುದು ಸೂಕ್ತವಲ್ಲ.

ಇಂದಿನ ಆಸ್ಪತ್ರೆಗಳ ಆಡಳಿತ ವ್ಯವಸ್ಥೆಗಳ ನಿರ್ವಹಣೆ ಬಗೆಗೆ ನಾನೇ ಸ್ವತಃ ಒಬ್ಬ ಪಾತ್ರಧಾರಿಯಾಗಿ ಅನುಭವಿಸಿದ ಎರಡು ಪ್ರಾತ್ಯಕ್ಷಿಕೆಗಳನ್ನು ಉದ್ಧರಿಸಿ ಈ ಪ್ರತಿಕ್ರಿಯೆಯನ್ನು ಮುಗಿಸುತ್ತೇನೆ.

ಸುಮಾರು ಕಾಲು ಶತಮಾನ ಸರ್ಕಾರ ಆರೋಗ್ಯ ಇಲಾಖೆಯ ವಿವಿಧ ಸ್ತರಗಳಲ್ಲಿ, ನಾನಾ ಕಡೆಗಳಲ್ಲಿ ಯಾವುದೇ ತರಬೇತಿ ಇಲ್ಲದೆ ಕಾರ್ಯ ನಿರ್ವಹಿಸಿ, ನಿವೃತ್ತಿಗೆ ಎರಡು ವರುಷ ಉಳಿದಿರುವಾಗ ದೇಶದ ಎರಡು ಕಡೆ 'ಆಸ್ಪತ್ರೆ ಮತ್ತು ಸ್ವಾಸ್ಥ್ಯ ವ್ಯವಸ್ಥೆಗಳ ಆಡಳಿತ ನಿರ್ವಹಣೆ'ಯ ವಿಷಯಗಳಲ್ಲಿ ತಲಾ ಒಂದೊಂದು ತಿಂಗಳು (೧೯೮೦-೮೧) ಭಾಗವಹಿಸುವ ಅವಕಾಶಗಳು ಒದಗಿ ಬಂದಿದ್ದವು. ಅವುಗಳಲ್ಲಿ ಒಂದು ಕೇರಳದ ತಿರುವಾಂಕೂರಿನಲ್ಲಿ ಜರುಗಿದರೆ ಎರಡನೆಯದು ನವದೆಹಲಿಯ ಮುನೀರ್ಕಾವಲಯದಲ್ಲಿ ನಡೆಯಿತು. ಕೇರಳದ್ದು ಅದೇ ಮೊದಲ ಸಾರಿಯದಾಗಿದ್ದು, ತರಬೇತಿಗೆ ಒಳಪಡುವ ವಿಷಯಗಳ ಬಗೆಗೆ ವಿಸ್ತಾರವಾದ ಪಠ್ಯ ವಿವರಗಳ ಪುಸ್ತಕಗಳನ್ನು ತಯಾರಿಸಿ ಬಿತ್ತರಿಸಿತ್ತು. ತನ್ನದೇ ಸೀಮಿತವಾದ ಇತಿಮಿತಿಯಲ್ಲಿ ವೈದ್ಯಕೀಯ ಇಲಾಖೆಗಳ ಮಧ್ಯಮ ಶ್ರೇಣಿಯ ಆಡಳಿತಾಧಿಕಾರಿಗಳಿಗೆ ಅವಕಾಶ ಮಾಡಿಕೊಡಲಾಗಿತ್ತು. ಅದರ ವ್ಯಾಪ್ತಿ ಅಖಿಲ ಭಾರತದ್ದಾಗಿದ್ದು ಒಂದೊಂದು ರಾಜ್ಯದ ೨-೩ ಆಡಳಿತಾಧಿಕಾರಿಗಳನ್ನು ಆಯ್ಕೆ ಮಾಡಿದ್ದರು. ಸ್ವಾಸ್ಥ್ಯ ವ್ಯವಸ್ಥೆಯ ವಿವಿಧ ಪ್ರಕಾರಗಳು, ಕಾರ್ಯ ನಿರ್ವಹಿಸುವ ರೀತಿನೀತಿಗಳು, ಆಸ್ಪತ್ರೆಗಳ ಕಟ್ಟಡ ನಿರ್ವಹಣೆಯಿಂದ ಔಷಧಿಗಳ ಖರೀದಿ, ಆರ್ಥಿಕ ನಿರ್ವಹಣೆ ಮುಂತಾದ ಎಲ್ಲಾ ವಿಚಾರಗಳನ್ನು ಕುರಿತು ಅಲ್ಲಿಯ ಮೆಡಿಕಲ್ ಕಾಲೇಜು, ಸಾರ್ವಜನಿಕ ಆರೋಗ್ಯ ಇಲಾಖೆ, ಸರ್ಕಾರದ ಪ್ರಧಾನ ಕಾರ್ಯದರ್ಶಿ ಮುಂತಾದವರಿಂದ ಭಾಷಣ, ಪ್ರಾತ್ಯಕ್ಷಿಕೆ, ಚರ್ಚಾಕೂಟಗಳು ಜರುಗುತ್ತಿದ್ದವು. ಸಂಕ್ಷಿಪ್ತವಾಗಿ

**ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ (೨೦೧೦)**

'ಬೆಟ್ಟದ ಜೀವ' ಮತ್ತು 'ಹೆಜ್ಜೆಗಳು' ಚಿತ್ರಗಳ ನಿರ್ದೇಶಕ ಪಿ. ಶೇಷಾದ್ರಿ, 'ಪುಟ್ಟಕ್ಕನ ಹೈವೇ' ಚಿತ್ರದ ನಿರ್ದೇಶಕ ಬಿ. ಸುರೇಶ್ ಮತ್ತು ಅತ್ಯುತ್ತಮ ಚಿತ್ರ ವಿಮರ್ಶೆಗಾಗಿ ಎನ್. ಮನು ಚಕ್ರವರ್ತಿ - ಇವರು ೨೦೧೦ನೇ ಸಾಲಿನ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿ ಗಳಿಸಿದ್ದಾರೆ. ಇವರಿಗೆ 'ಹೊಸತು' ಅಭಿನಂದನೆಗಳು ಸಲ್ಲುತ್ತವೆ.

ಹೇಳುವುದಾದರೆ ಆಸ್ಪತ್ರೆ ಹಾಗೂ ಸ್ವಾಸ್ಥ್ಯ ವಿಷಯಗಳ ಎಲ್ಲಾ ವಿಚಾರಗಳ ಬಗೆಗೆ ಸವಿಸ್ತಾರ ಜ್ಞಾನ ಪ್ರಸಾರ ಮಾಡುವ ಏರ್ಪಾಡಾಗಿತ್ತು. ಅದರ ಇನ್ನೊಂದು ವಿಶೇಷವೆಂದರೆ ಯಾವುದಾದರೂ ವಿಷಯಗಳ ಕುರಿತು ಬೋಧನೆ ಮಾಡುವ ತಜ್ಞರು ಲಭ್ಯವಿರದಿದ್ದರೆ, ಮುಂಬಯಿ, ಮದ್ರಾಸುಗಳಿಂದಲೂ ಅಂತಹವರನ್ನು ಕರೆಸುತ್ತಿದ್ದುದು.

ನವದೆಹಲಿಯಲ್ಲಿ ಸಂಸ್ಥೆ ಒಂದು ವ್ಯವಸ್ಥಿತ ರೀತಿಯಲ್ಲಿ ರೂಪುಗೊಂಡು ಸ್ಥಿರವಾಗಿ ನೆಲೆಗೊಂಡಿತ್ತು. ಅದರಲ್ಲಿ ಕಾಂಪೌಂಡರ್, ನರ್ಸಿಂಗ್ ಮುಖ್ಯಸ್ಥರು, ರೆಸಿಡೆಂಟ್ ಮೆಡಿಕಲ್ ಆಫೀಸರು, ಡಿಸ್ಟ್ರಿಕ್ ಮೆಡಿಕಲ್ ಆಫೀಸರು, ಜಿಲ್ಲಾ ಆರೋಗ್ಯಾಧಿಕಾರಿಗಳು, ರೈಲ್ವೆ, ಸೇನಾ ಮೆಡಿಕಲ್‌ನ ಮೆಡಿಕಲ್ ಆಡಳಿತಗಾರರು, ಔದ್ಯೋಗಿಕ ಕ್ಷೇತ್ರದ ಆಸ್ಪತ್ರೆಗಳ ನಿರ್ವಾಹಕರು, ಕೆಲವು ಖಾಸಗಿ ಆಸ್ಪತ್ರೆ ನಿರ್ವಾಹಕರು (ಇಂದು ಖ್ಯಾತಿ ಪಡೆದ ಎಸ್ಕಾರ್ಟ್ ಆಸ್ಪತ್ರೆ ಆಗ ನಿರ್ಮಾಣದ ಹಂತದಲ್ಲಿದ್ದು ಅದರ ನಿರ್ವಾಹಕರೂ ಬಂದಿದ್ದರು) ಮುಂತಾದ ವರ್ಗದವರೆಲ್ಲಾ ಅಲ್ಲಿ ಬಂದಿದ್ದರು.

ವಿಸ್ತಾರವಾದ ಪಠ್ಯಕ್ರಮ, ಆಸ್ಪತ್ರೆಯು ಕಾರ್ಯ ನಿರ್ವಹಿಸಲು ಸರಳ ಹಾಗೂ ಸುಲಭವಾಗಿರಲು ಅದನ್ನು ಯೋಜನಾಬದ್ಧವಾಗಿ ನಿರ್ಮಿಸುವ ವಾಸ್ತು ವಿಧಾನ ಮುಂತಾದ ವಿಷಯಗಳ ಕುರಿತು ವಿವರಣೆ, ಔಷಧಗಳು ಮತ್ತು ಸಾಧನ ಸಲಕರಣೆಗಳನ್ನು ಪಡೆದುಕೊಳ್ಳುವ ಶಾಸ್ತ್ರೀಯ ವಿಧಾನ ಇಂಥ ಹಲವು ಹತ್ತು ವಿಚಾರಗಳ ಬಗೆಗೆ ವಿವರಣೆಗಳಿರುತ್ತಿದ್ದವು. ರಾಷ್ಟ್ರೀಯ ಸ್ವಾಸ್ಥ್ಯ ಯೋಜನೆಗಳ ಬಗೆಗೆ ವಿಸ್ತಾರ ಚರ್ಚೆ, ಶಿಬಿರಾರ್ಥಿ ಗಳಿಂದಲೆ ವಿಚಾರ ವಿನಿಮಯ, ಚರ್ಚಾಕೂಟ, ವರದಿಗಳ ತಯಾರಿಗಳನ್ನು ಜರುಗಿಸುತ್ತಿದ್ದರು. ದೆಹಲಿಯ ಪ್ರಖ್ಯಾತ ಆಸ್ಪತ್ರೆಗಳಿಗೆ ಭೇಟಿ ಮಾಡಿ ಅವು ಕಾರ್ಯ ನಿರ್ವಹಿಸುವ ರೀತಿನೀತಿಗಳನ್ನು ಪ್ರತ್ಯಕ್ಷವಾಗಿ ವೀಕ್ಷಿಸುವ ಅವಕಾಶ, ಹರಿದ್ವಾರದಲ್ಲಿ ಭಾರತ ಸರ್ಕಾರದ ಪೆನಿಸಿಲಿನ್ ತಯಾರಕ ಘಟಕಕ್ಕೆ ಭೇಟಿ, ಪೆನಿಸಿಲಿನ್ ತಯಾರಾಗುವ ವಿವಿಧ ಹಂತಗಳ ವೀಕ್ಷಣೆಗಳ ಅನುಭವಗಳನ್ನೆಲ್ಲಾ ಮನದಟ್ಟಾಗುವಂತೆ ನೀಡಿದರು. ತರಬೇತಿಯ ವಿಷಯಗಳ ಕುರಿತು ಸೈಕ್ಲೋಸ್ಟೈಲ್ ಮಾಡಿದ ಪುಸ್ತಿಕೆಗಳನ್ನು ವಿತರಿಸಿದ್ದರು. ಒಂದು ರೀತಿಯಲ್ಲಿ ಕೇರಳ ರೀತಿಯದ್ದೇ ಆಗಿದ್ದರೂ, ಅದರ ಆಳ-ವಿಸ್ತಾರ ಮಿಗಿಲಾಗಿದ್ದಿತು.

ಈ ಎರಡು ತರಬೇತಿಯಲ್ಲಿ ಭಾಗವಹಿಸಿದ್ದರಿಂದ ಅಲ್ಲಿಯವರೆಗೆ ಕುರುಡು ಕುರುಡಾಗಿ ನಾವೆಲ್ಲಾ ಆಸ್ಪತ್ರೆಯ ಆಡಳಿತವನ್ನು ನಿರ್ವಹಿಸುತ್ತಿದ್ದುದರ ಬಗೆಗೆ ಕ್ಷ-ಕಿರಣ ಹಿಡಿಯಿತು. ನಮ್ಮೆಲ್ಲರ ಕಣ್ಣು ತೆರೆಯಿಸಿತು. ನಮ್ಮ ಸೇವೆಯ ಮೊದಲ ವರ್ಷಗಳಲ್ಲಿ ಇಂತಹ ತರಬೇತಿಗೊಳಪಟ್ಟಿದ್ದರೆ ಏನೆಲ್ಲಾ ಸಾಧಿಸಬಹುದೆಂಬುದರ ಬಗೆಗೆ ನಿರಾಶೆ ಮೂಡಿತು. ಎಲ್ಲಕ್ಕಿಂತ ಮಿಗಿಲಾಗಿ ನಾನು ನಿವೃತ್ತಿಯಾಗುವ ಎರಡು ವರ್ಷಗಳ ಮೊದಲು ಎರಡು ಸಾರಿ ಇಂತಹ ತರಬೇತಿಗೊಳಪಡಿಸಿದ್ದು ಆಚ್ಚರಿಯುಂಟು ಮಾಡಿತು. ಈ ಬಗೆಗೆ ಇಲಾಖೆಯವರೊಬ್ಬರೂಡನೆ ವಿಚಾರಿಸಿದಾಗ, ಇಂತಹ ತರಬೇತಿ ಪಡೆಯಲು ನಿಯೋಜಿಸಿದ ಬಹುಪಾಲು ವೈದ್ಯರು ನಿರಾಕರಿಸುವುದೇ ಹೆಚ್ಚು. ಇಂತಹ ವಿಷಯದಲ್ಲಿ ಆಸಕ್ತಿ ತೋರ್ಪಡಿಸುತ್ತಿದ್ದ ನನ್ನನ್ನು ಮತ್ತೊಮ್ಮೆ ಆರಿಸಬೇಕಾಯಿತಂತೆ !

ಈ ಹಿನ್ನೆಲೆಯಲ್ಲಿ ಇಂದಿನ ಅವಶ್ಯಕತೆಯೆಂದರೆ ಆಸ್ಪತ್ರೆಗಳ ನಿರ್ವಹಣೆಯಲ್ಲಿ ಅವುಗಳ ನಿರ್ವಹಣೆ ಮಾಡುತ್ತಿರುವ ವೈದ್ಯಕೀಯ ಪರಿಣತರನ್ನು ಆಡಳಿತದ ಜವಾಬ್ದಾರಿಯಿಂದ ಮುಕ್ತಗೊಳಿಸುವುದು; ಹೊಸ ಹೊಸ ಪದವೀಧರರಿಗೆ ಹಿಂದೆ ವಿಸ್ತರಿಸಿದಂತೆ ಕೇರಳ/ದೆಹಲಿ ಗಳಲ್ಲಿರುವಂತಹ ತರಬೇತಿಗೆ ಅವಕಾಶ ಮಾಡಿ ಕೊಡುವುದು. ಅವುಗಳಲ್ಲಿ ವಿವಿಧ ಸ್ತರದ ಆಡಳಿತಕ್ಕೆ ಬೇಕಾಗುವ ಸರ್ಟಿಫಿಕೇಟ್ ಕೋರ್ಸ್, ಡಿಪ್ಲೋಮಾ, ಡಿಗ್ರಿ, ಸ್ನಾತಕೋತ್ತರ ಆಡಳಿತ ಕೋರ್ಸುಗಳಿವೆ. ಅವು ಕೆಲವು ವಾರಗಳಿಂದ ೫-೬ ವರ್ಷಗಳ ಅವಧಿ ಯದಾಗಿರುತ್ತವೆ. ಅವರನ್ನು ಐ.ಎ.ಎಸ್., ಐ.ಪಿ.ಎಸ್. ಗಳಂತೆ ಐ.ಎಂ.ಎಸ್. (ಮೆಡಿಕಲ್ ಆಡಳಿತ)ಗಳಲ್ಲಿ ತರಬೇತಿ ಕೊಡಿಸಿ ರಾಜ್ಯದಾದ್ಯಂತ ಆಸ್ಪತ್ರೆ, ಆರೋಗ್ಯ ವ್ಯವಸ್ಥೆಗಳಿಗೆ ನೇಮಿಸುವುದು; ಅವರಿಗೆ ಮೆಡಿಕಲ್ ಪ್ರಾಕ್ಟೀಸ್ ನಿಷಿದ್ಧ ಮಾಡುವುದೊಂದೇ ಸರಿಯಾದ ಮಾರ್ಗ. ಕರ್ನಾಟಕದ ಮಂಡ್ಯದಲ್ಲಿ ಆಡಳಿತ ನಿರ್ವಹಣಾ ಸಂಸ್ಥೆಯೊಂದಿದೆ ಎಂದು ತಿಳಿದಿದೆ. ಆದರೆ ಅದರ ಆಳ, ವ್ಯಾಪ್ತಿ ನನಗೆ ಅರಿವಿಲ್ಲ.

ಶಿವಮೊಗ್ಗ ***ಎಚ್. ಡಿ. ಚಂದ್ರಪ್ಪಗೌಡ***

ಭಾರತೀಯ ಸಾಹಿತ್ಯ - ಸಂಸ್ಕೃತಿ ಕ್ಷೇತ್ರಗಳಲ್ಲಿ ಹೇಗೋ ಶಿಕ್ಷಣ ಮತ್ತು ರಾಜಕೀಯ ಕ್ಷೇತ್ರಗಳಲ್ಲೂ ರವೀಂದ್ರನಾಥ ಟಾಗೋರ್ ಸುವಿಖ್ಯಾತರು. ಈ ವರ್ಷ ಅವರ ೧೫೦ನೇ ಜನ್ಮದಿನದ ವರ್ಷ. ದೇಶದಲ್ಲೆಲ್ಲಾ ಆವರ ವ್ಯಕ್ತಿತ್ವ ಮತ್ತು ಸಾಹಿತ್ಯ ಕುರಿತಂತೆ ಹಲವಾರು ರೀತಿಗಳಲ್ಲಿ ಕಾರ್ಯಕ್ರಮ ಗಳನ್ನು ಸಂಘ-ಸಂಸ್ಥೆಗಳು ಮತ್ತು ಸರ್ಕಾರ ಆಯೋಜಿಸಿವೆ. ವಿಚಾರ ಸಂಕಿರಣಗಳು, ಕಾವ್ಯ ಗಾಯನ, ನಾಟಕ ಪ್ರದರ್ಶನ, ಹೀಗೆ ವಿವಿಧವಾಗಿ ಟಾಗೋರರ ಸ್ಮರಣೆ ಮಾಡಿ ಅವರಿಗೆ ಗೌರವ ಸಲ್ಲಿಸಲಾಗಿದೆ. 'ಹೊಸತು' ಅವರಿಗೆ ತಲೆಬಾಗಿ ನಮಿಸುತ್ತದೆ, ಶ್ರದ್ಧೆಯಿಂದ ಸ್ಮರಿಸುತ್ತದೆ ಮತ್ತು ಅವರ ಕೃತಿಗಳನ್ನೆಲ್ಲಾ ಚಾರಿತ್ರಿಕವಾಗಿ ವಿಶ್ಲೇಷಿಸುತ್ತದೆ. ಪ್ರಸ್ತುತ ನಂಬಿಕೆಯಲ್ಲಿ ಟಾಗೋರರ ಬಗ್ಗೆ ಎರಡು ಲೇಖನಗಳಿವೆ. ಮುಂದಿನ ಸಂಚಿಕೆಗಳಲ್ಲಿ ಬೇರೆಯವನ್ನೂ ಪ್ರಕಟಿಸುವ ಉದ್ದೇಶವಿದೆ. ಮತ್ತೊಮ್ಮೆ ಟಾಗೋರರಿಗೆ 'ಹೊಸತು' ನಮಸ್ಕಾರ.

# ಸಾಮ್ರಾಜ್ಯಶಾಹಿಯನ್ನು ಕುರಿತು ಟಾಗೋರ್

❑ ಡಾ|| ಎಸ್. ಚಟರ್ಜಿ

ಸುಮಾರು ಒಂದು ವರ್ಷದ ಹಿಂದೆ ಟಾಗೋರರ ೧೫೦ನೆಯ ಹುಟ್ಟುಹಬ್ಬದ ಕಾರ್ಯಕ್ರಮಗಳು ಆರಂಭವಾದಾಗ ಭಾರತ ಮತ್ತು ಬಾಂಗ್ಲಾದೇಶದ ಜನರಿಗೆ ಉಲ್ಲಾಸ. ಎರಡೂ ದೇಶಗಳ ರಾಷ್ಟ್ರಗೀತೆಗಳನ್ನು ರಚಿಸಿದವರು ಟಾಗೋರರೆ. ಇದು ಬಹಳ ದೊಡ್ಡ ಘನತೆ. ಆದರೆ ನನ್ನ ಮನಸ್ಸು ಪ್ರಸ್ತುತ ಸಂದರ್ಭದಲ್ಲಿ ಅವರ ಸಮಕಾಲೀನತ್ವವನ್ನು ಕುರಿತು ಯೋಚಿಸುತ್ತಿದೆ. ೨೦೧೦ರ ಜೂನ್ ೧ರಂದು ಗಾಝಾಗೆ ತೆರಳುತ್ತಿದ್ದ ಶಾಂತಿದೂತ ಹಡಗುಗಳ ಮೇಲೆ ಇಸ್ರೇಲಿ ವಿಮಾನಗಳು ದಾಳಿ ಮಾಡಿ ಅನೇಕರನ್ನು ಕೊಂದವು. ಆಗ ನನ್ನ ಮನಸ್ಸಿಗೆ ಬಂದಿದ್ದು ಟಾಗೋರ್ ಅವರ ಬರಹಗಳು. ಪರ್ಶಿಯಾದ (ಈಗ ಇರಾನ್) ರಾಜನ ಆಹ್ವಾನದ ಮೇರೆಗೆ ಅಲ್ಲಿಗೆ ಅಧಿಕೃತ ಭೇಟಿಗಾಗಿ ವಿಮಾನದಲ್ಲಿ ಹೋಗುತ್ತಿದ್ದಾಗ ಅವರು ಬರೆದದ್ದು ಈ ರೀತಿಯಿತ್ತು :

''ಇಷ್ಟು ಎತ್ತರದಿಂದ ನೋಡಿದಾಗ ಭೂಮಿಯು ಒಂದು ಅಸ್ಪಷ್ಟ ವಸ್ತುವಾಗಿ ತೋರುತ್ತದೆ ಮತ್ತು ಮಾನವನ ವಿವೇಚನಾಶಕ್ತಿ ಆಯ ತಪ್ಪುತ್ತದೆ. ವಿಮಾನದಲ್ಲಿ ಹಾರಿ ಅಷ್ಟು ಎತ್ತರದಿಂದ ಮಾನವನು ಧ್ವಂಸಕಾರ್ಯವನ್ನೆಸಗಲು ತೀರ್ಮಾನಿಸಿದಾಗ ಪರಿಣಾಮವು ಭೀಕರವಾಗಿರುತ್ತದೆ, ತನ್ನ ಧ್ವಂಸಕಾರ್ಯದ ಪರಿಣಾಮ ಅವನಿಗೆ ಗೊತ್ತಾಗುವುದಿಲ್ಲ. ಅವನುಂಟುಮಾಡುವ ವಿಪತ್ತಿನ ಕಲ್ಪನೆ ಅವನಿಗೆ ಬರುವುದಿಲ್ಲ. ನಮ್ಮ ಕ್ರಿಯೆಗಳನ್ನು ಸಮರ್ಥಿಸಿಕೊಳ್ಳಲು ನಮಗಿರುವ ಆಧಾರ ವಾಸ್ತವವೊಂದೇ, ಆದರೆ ಅದು ಮರೆಯಾಗಿ ಬಿಟ್ಟಿರುತ್ತದೆ. ತನ್ನ ಆಕ್ರಮಣಕಾರಿ ಆಕಾಂಕ್ಷೆಗಳ ಪೂರೈಕೆಗಾಗಿ ಮಾನವ ಇಂತಹ ಅನೇಕ ವಿಮಾನಗಳನ್ನು ನಿರ್ಮಿಸಿ ಕೊಂಡಿದ್ದಾನೆ. ಅವನು ಇಚ್ಛಿಸುವ ಸಾಮಾಜಿಕ ರಚನೆ ಮತ್ತು ಧರ್ಮದ ಸಮರ್ಥನೆಗೂ ಅವು ಸಾಧನ. ಅಷ್ಟೊಂದು ಎತ್ತರದಿಂದ ಭೂಮಿಯ ಮೇಲಿರುವವನ ಮೇಲೆರಗಿದರೆ ಹತನಾಗುವವನಿಗಿರುವ ಸಾಂತ್ವನದ ಮಾತೊಂದೇ: ಶರೀರವನ್ನು ಕೊಂದರೂ ಆತ್ಮಕ್ಕೆ ಸಾವು ಸಂಭವಿಸುವುದಿಲ್ಲ, ಎಂದು.

''ಬಾಗ್ದಾದಿನಲ್ಲಿ ಬ್ರಿಟಿಷರು ವಿಮಾನ ನೆಲೆಯನ್ನು ಹೊಂದಿದ್ದಾರೆ. ಅಲ್ಲೊಬ್ಬ ಕ್ರೈಸ್ತ ಧರ್ಮ ಪ್ರಚಾರಕ ಪಾದ್ರಿ ಇದ್ದಾನೆ. ಪ್ರತಿನಿತ್ಯ ಆ ನೆಲೆಯಿಂದ ಹಾರುವ ವಿಮಾನಗಳು ಸ್ಥಳೀಯ ಅರಬ್ ಹಳ್ಳಿಗಳ ಮೇಲೆ ಬಾಂಬುಗಳನ್ನು ಸುರಿಸುತ್ತವೆಂದು ಆತ ತಿಳಿಸಿದ. ಅದರಿಂದ ಭೂಮಿಯ ಮೇಲುಂಟಾಗುವ ಗೊತ್ತುಗುರಿಯಿಲ್ಲದ ಹತ್ಯೆ ಮೇಲಿಂದ ಕಾಣುವುದಿಲ್ಲ. ಅವರ ಸಾಮ್ರಾಜ್ಯ ವಿಸ್ತರಣಾಕಾಂಕ್ಷೆ ಕನಿಷ್ಠ ಮಾನವತಾ ಭಾವನೆಯನ್ನು ಮಸುಕುಗೊಳಿಸುತ್ತದೆ ಮತ್ತು ಆಕಾಶದಿಂದ ಕೊಲ್ಲುವುದನ್ನು ಸುಲಭಗೊಳಿಸುತ್ತದೆ. ...ಭೂಮಿಯ ಮೇಲೆ ಅಡ್ಡಾಡುತ್ತಿರುವ ಜನರನ್ನು ವಿಮಾನದಿಂದ ಸುಲಭವಾಗಿ ಕೊಲ್ಲಬಹುದು, ಎದುರಾಳಿಯ ಪ್ರತಿರೋಧದ ಭಯವಿಲ್ಲ. ಅಲ್ಲದೆ ದಾಳಿಯ ನೈಜತೆಯ ಪರಿವೆಯೂ ಇರುವುದಿಲ್ಲ. ಯಾರನ್ನು ಸುಲಭವಾಗಿ ಕೊಲ್ಲುತ್ತಾರೋ ಅವರು ಕೊಲ್ಲುವವರಿಗೆ ಕಾಣುವುದಿಲ್ಲ. ಆ ಕಾರಣದಿಂದಾಗಿ ಪಾಶ್ಚಿಮಾತ್ಯರ ಈ ಹತ್ಯಾವಿಧಾನವನ್ನು ಯಾರು ತಿಳಿದಿಲ್ಲವೋ ಅಂಥವರ ಮಾನವೀಯ ಮೌಲ್ಯಗಳು ಪಾಶ್ಚಿಮಾತ್ಯ ಯುದ್ಧಕೋರರಿಗೆ ಹೆಚ್ಚುಹೆಚ್ಚು ಅಪ್ರಸ್ತುತವಾಗುತ್ತಿದೆ.''

ಟಾಗೋರರ ಈ ಮಾತು ಬಹಳ ಹಿಂದಿನದಾದರೂ ಇಂದು ಸಹ ಅದು ಇರಾಕ್, ಅಫ್ಘಾನಿಸ್ತಾನಗಳಿಗೆ ಅನ್ವಯಿಸುತ್ತದೆ. ಲೆಬನಾನ್ ಮೇಲೆ ಇಸ್ರೇಲ್ ದಾಳಿ ಮಾಡಿದಾಗ ಮತ್ತು ಈಗ ಲಿಬ್ಯಾದ ಮೇಲೆ ವಿಮಾನ ಹಾರಾಟ ನಿರ್ಬಂಧವನ್ನು ಜಾರಿಗೊಳಿಸಲು ಮುಕ್ತವಾಗಿ ಹಾರಾಡುವ ಫ್ರಾನ್ಸ್, ಬ್ರಿಟನ್ ಮತ್ತು ಅಮೆರಿಕಾದ ವಿಮಾನಗಳಿಗೂ ಅನ್ವಯಿಸುತ್ತದೆ.

ರಬೀಂದ್ರನಾಥ ಟಾಗೋರರು ಬಹಳವಾಗಿ ಪ್ರಯಾಣ ಮಾಡುತ್ತಿದ್ದವರು : ೨೨ ಬಾರಿ ವಿದೇಶ ಪ್ರಯಾಣ ಕೈಗೊಂಡು ೩೩ ದೇಶಗಳನ್ನು ನೋಡಿಬಂದಿದ್ದರು ಅವರು. ೧೮೫೭ರ ಪ್ರಥಮ ಸ್ವಾತಂತ್ರ್ಯ ಚಳುವಳಿಯ ನಾಲ್ಕು ವರ್ಷಗಳ ನಂತರ ಅವರು ಜನಿಸಿದರು. ಅವರ ಕುಟುಂಬವು 'ಬಂಗಾಳದ ನವೋದಯ'ದ ಮುಂಚೂಣಿಯಲ್ಲಿತ್ತು. ಈಸ್ಟ್ ಇಂಡಿಯ ಕಂಪನಿಯ ಆಳ್ವಿಕೆಯಲ್ಲಿದ್ದ ದೇಶವನ್ನು ಬ್ರಿಟಿಷ್ ಸರ್ಕಾರವು ನೇರವಾಗಿ ತನ್ನ ಅಧೀನಕ್ಕೆ



*ಚಿತ್ರ : ಟಾಗೋರ್ ಈ ಚಿತ್ರವನ್ನು ಇರಾನಿನ ಶಿರಾಜ್ ಎಂಬಲ್ಲಿ ೧೯೩೨ರಲ್ಲಿ ತೆಗೆಯಲಾಗಿತ್ತು. ಅದನ್ನು ನನಗೆ ಇ-ಮೇಲಿನಲ್ಲಿ ರವಾನಿಸಿರುವ ನನ್ನ ಸ್ನೇಹಿತೆ ಸೀಮಾ ರಾವನ್‌ಫಾರ್ ಹಸೀಗಿ ಅವರಿಗೆ ನಾನು ಕೃತಜ್ಞ.*

ತೆಗೆದುಕೊಂಡಾಗ ಭಾರತೀಯ ವಿದ್ಯಾವಂತ ವರ್ಗದವರಿಗೆ ಒಂದು ಆಸೆ ಚಿಗುರಿತ್ತು, ಆದರೆ ಅದು ಬೇಗನೆ ಕರಗಿ ಹೋಯಿತು. ನಿಜವಾಗಿ ಅವರು ಖೇದದಿಂದ ಕಂಡಿದ್ದು 'ಬ್ರಿಟಿಷ್ ಅಲ್ಲದ ಬ್ರಿಟಿಷ್ ಆಡಳಿತ', ಅಷ್ಟೆ. ಟಾಗೋರರು ಬ್ರಿಟಿಷರು ಆಗುಮಾಡಿದ ಈ ಪ್ರಕ್ರಿಯೆಯನ್ನು ನೋಡುತ್ತಲೇ ಬೆಳೆದರು. ಅವರು ಮೊದಲು ಬ್ರಿಟನ್ನಿಗೆ ಹೋದದ್ದು ಬ್ಯಾರಿಸ್ಟರ್ ಆಗಲೆಂದು, ಆದರೆ ಅದೆಂದೂ ಫಲಿಸಲಿಲ್ಲ.ಅಲ್ಲಿಯ ಜನರ ಕಾರ್ಯನಿಷ್ಠತೆ ಅವರಿಗೆ ಹಿಡಿಸಿತ್ತು, ಆದರೆ ಅಲ್ಲಿನ ಕಾರ್ಮಿಕವರ್ಗದ ಜನರ ಹೀನ ಜೀವನವನ್ನು ನೋಡಿ ''ಅವರು ಅಮಾನುಷ ಸನ್ನಿವೇಶದಲ್ಲಿ ಜೀವನವನ್ನು ಸಾಗಿಸುತ್ತಾ ಪ್ರಾಣಿಗಳಿಗಿಂತ ಕೇವಲ ಒಂದು ಹಂತ ಮೇಲಿದ್ದಾರೆ'' ಎಂದು ಬಣ್ಣಿಸಿದರು. ಹಿಂದೆ ಡಿಕಿನ್ಸ್ ತನ್ನ ಕಾದಂಬರಿಗಳಲ್ಲಿ ಚಿತ್ರಿಸಿದ್ದುದನ್ನು, ಅಥವಾ ಏಂಗೆಲ್ಸ್ ''ಅಧೋಗತಿಗೆ ಹೋಗುತ್ತಿರುವ ಪರಿಸ್ಥಿತಿಗಳು, ಭಯಾನಕವಾಗಿ ಒಡೆಯುತ್ತಿರುವ ಮಾನಸಿಕ ಮತ್ತು ದೈಹಿಕ ಶಕ್ತಿಗಳು ಮತ್ತು ಕ್ಷೀಣಿಸುತ್ತಿರುವ ಸಾಂಸಾರಿಕ ಸಂಬಂಧಗಳು'' ಎಂದು ಯಾವುದನ್ನು ಟೀಕಿಸಿದ್ದನೋ ಅಂತಹ ಜೀವನವನ್ನು ಟಾಗೋರ್ ಪ್ರತಿಧ್ವನಿಸಿದರು. ಚಿಕ್ಕ ವಯಸ್ಸಿನಿಂದಲೇ ಅವರು ಬ್ರಿಟಿಷ್ ಸರ್ಕಾರಕ್ಕೆ ಸವಾಲು ಹಾಕುವ ರೀತಿಗಳನ್ನು ಆಲೋಚಿಸುತ್ತಿದ್ದರು. ಇದನ್ನು ''ರಾಜಕೀಯ ಆಂದೋಲನಗಳಿಂದ ಮತ್ತು ಜಂಟಿ ಸ್ಟಾಕ್ ಕಂಪನಿಗಳ ಮೂಲಕವೇ'' ಸಾಧಿಸಬೇಕೆಂಬುದು ಅವರ ತೀರ್ಮಾನವಾಗಿತ್ತು. ಅವರು ಒಂದೆಡೆ ಹೀಗೆ ಬರೆದರು: ''ನಿನ್ನ ಬಲಹೀನ ಸ್ನಾಯುಗಳಿಂದಲೇ ಮ್ಯಾಂಚೆಸ್ಟರಿನ ಪ್ರಬಲ ಉಕ್ಕಿನ ಶಕ್ತಿಯನ್ನು ಎದುರಿಸಲು ಕಲಿ, ಏನಾಗುತ್ತದೆಂದು ನೋಡೋಣ.''

ಬ್ರಿಟಿಷರು ಉಂಟುಮಾಡುತ್ತಿದ್ದ ಹಾಳುಗೆಡುವಿಕೆ ಹೆಚ್ಚು ಸ್ಪಷ್ಟವಾದದ್ದು ೧೯೦೫ರಲ್ಲಿ ಕರ್ಜನ್ ಬಂಗಾಳವನ್ನು ಕೋಮುಗಳನ್ನಾಧರಿಸಿ ವಿಭಜನೆ ಮಾಡಿದಾಗ. ಈ ಸಂದರ್ಭದಲ್ಲಿ ಅದೊಂದು ಪ್ರತ್ಯೇಕವಾದ ಘಟನೆಯಲ್ಲವೆಂದು ತನ್ನ ಓದುಗರಿಗೆ ಟಾಗೋರ್ ಮನದಟ್ಟುಮಾಡಿಕೊಟ್ಟರು. ಚೀಣಾದ ಸಂಗತಿಗಳು ಹಾಗೂ ದಕ್ಷಿಣ ಆಫ್ರಿಕಾದಲ್ಲಿ ಬೋಯರ್ ಯುದ್ಧದಿಂದ ಸ್ಥಳೀಯ ನಾಗರಿಕರಿಗೆ ಉಂಟಾಗಿದ್ದ ಉಪಟಳಗಳನ್ನು ಕುರಿತು ಅವರು ವಿಶೇಷವಾಗಿ ಬರೆದರು. ಆಗ್ಗೆ ಸ್ಥಳೀಯ ಜನರನ್ನು ಭಯಭೀತರನ್ನಾಗಿಸಿ  ಅವರ ಮನೆಗಳನ್ನು, ಗ್ರಾಮಗಳನ್ನು ಸುಟ್ಟುಹಾಕಿ, ಬೆಳೆಗಳನ್ನು ನಾಶಗೊಳಿಸಲಾಗಿತ್ತು. ಇದೇ ಸಂದರ್ಭದಲ್ಲಿ ಟಾಗೋರರು ಅನೇಕ ದೇಶಭಕ್ತಿ ಗೀತೆಗಳನ್ನು ರಚಿಸಿದರು. ಗಾಂಧೀಜಿಗೆ ಪ್ರಿಯವಾಗಿದ್ದ 'ಏಕ್ಲ ಚಲೋ' ಅವುಗಳಲ್ಲೊಂದು. ಟಾಗೋರ್ ಸ್ವತಃ ವಿವೇಕಯುತ ಹಣವಂತರಾಗಿದ್ದಾಗ್ಯೂ, ಅವರ ವರ್ಗವು ಊಳಿಗಮಾನ್ಯ ಪದ್ಧತಿಯ ಧಣಿಗಳದ್ದಾಗಿತ್ತು. ತನ್ನ ಜಮೀನನ್ನು ಪರಿವೀಕ್ಷಿಸುವ ಸಂದರ್ಭಗಳಲ್ಲಿ ಟಾಗೋರರಿಗೆ ಜಮೀನ್ದಾರಿ ಪದ್ಧತಿಯ ಅಮಾನುಷತ್ವದ ಅರಿವುಂಟಾಯಿತು. ಅದೇ ಸಮಯದಲ್ಲಿ ಜಾತಿ ಮತ್ತು ಕೋಮುಗಳ ಆಧಾರದಲ್ಲಿ ಸಮಾಜವು ವಿಭಜನೆಗೊಂಡಿದ್ದುದರಿಂದ ತಲೆದೋರಿದ್ದ ಒಡಕುಗಳೂ ಅವರ ಗಮನಕ್ಕೆ ಬಂದವು. ತಾನು ದಯಾಪರ ಜಮೀನ್ದಾರನಾಗಿದ್ದಿರಲಿ ಬಿಡಲಿ, ತನ್ನದು ಅಸಹಾಯಕತೆಯ ಇರವು ಎಂಬುದನ್ನು 'ಏಬಾರ್ ಫಿರಾವ್ ಮೋರೆ' ಎಂಬ ''ನಾನೆಲ್ಲಿರಬೇಕೋ ಅಲ್ಲಿಗೆ ನನ್ನನ್ನು ಸೇರಿಸು'' ಎಂಬರ್ಥದ ಅವರ ಕವನದಲ್ಲಿ ಅದ್ಭುತವಾಗಿ ಅಭಿವ್ಯಕ್ತಿಸಿದ್ದಾರೆ. ಇಲ್ಲಿ ತನ್ನನ್ನು ತಾನೇ ಸೂಕ್ಷ್ಮವಾಗಿ ಪರಿಶೀಲಿಸಿಕೊಂಡು, ಸಾಮಾಜಿಕ ಅಮಾನುಷತ್ವವನ್ನು ಅಲಕ್ಷಿಸಿದ ತನ್ನ ಸ್ವಭಾವವನ್ನು ಪರಾಮರ್ಶಿಸಿಕೊಂಡಿದ್ದಾರೆ: ''ಈ ಮೌನ ತುಟಿಗಳು ಇನ್ನು ಪ್ರತಿಭಟನೆಯ ಮಾತನ್ನುಸುರಬೇಕು, ಅವರ ಹೃದಯಗಳಿಗೆ ಭರವಸೆ ತುಂಬಬೇಕು ಮತ್ತು ಅವರಿಗೆ ಗಟ್ಟಿಯಾಗಿ ಹೇಳಬೇಕು, 'ಎದ್ದೇಳಿ, ನಿಮ್ಮ ಬಲವಾದ ಎದುರೇಟನ್ನು ನಿಮ್ಮ ಶತ್ರು ತಡೆಯಲಾರ', ಎಂದು.'' ತಮ್ಮನ್ನು ಹೊಸ ಪ್ರಪಂಚಕ್ಕೆ ಕರೆದೊಯ್ಯುವಂತೆ ಮುಕ್ತಿದೂತನನ್ನು ಈ ಕವನದಲ್ಲಿ ಅವರು ಕೇಳಿಕೊಂಡಿದ್ದಾರೆ; ಅಲ್ಲಿ ''ಹೊಸ ಬೆಳಕು, ಪರಿಶುದ್ಧ ಗಾಳಿ, ಅನ್ನ, ಆನಂದ, ಶಕ್ತಿ, ಆರೋಗ್ಯ ಮತ್ತು ಹೃದಯದಲ್ಲಿ ಕೆಚ್ಚು'' ಇರಬೇಕೆಂದು ಬಯಸಿದ್ದಾರೆ. ಮತ್ತೊಂದೆಡೆ ಅವರ ಬರಹ ಹೀಗಿದೆ: ''ತನ್ನ ಬರಹಗಳಿಂದ ಹಾಗೂ ನಡತೆಯಿಂದ ಯಾರು ಈ ಮಣ್ಣಿನ ಮನುಷ್ಯನಾಗಿ ರೈತನಿಗೆ ಹತ್ತಿರವಾಗುತ್ತಾನೋ ಅಂತಹ ಕವಿಯ ಬರುವಿಕೆಗಾಗಿ ತವಕಿಸುತ್ತಿದ್ದೇನೆ.'' ಈ ವಿಷಯದಲ್ಲಿ ತನ್ನ ಸೀಮಿತ ಸಾಮರ್ಥ್ಯದ ಬಗ್ಗೆ ಅವರಿಗೆ ತಿಳಿದಿದ್ದಿತು.

ಟಾಗೋರ್ ಅವರ 'ಗೀತಾಂಜಲಿ'ಯ ಆಂಗ್ಲ ಭಾಷಾಂತರಕ್ಕೆ ೧೯೧೩ರಲ್ಲಿ ಸಾಹಿತ್ಯ ಪ್ರಕಾರದಲ್ಲಿ ನೊಬೆಲ್ ಪಾರಿತೋಷಕ ದೊರಕಿತು. ಅದರಿಂದಾಗಿ ಹೆಚ್ಚಿನ ದೇಶಗಳಿಗೆ ಭೇಟಿ ನೀಡುವ ಅವಕಾಶ ಸಿಕ್ಕಿ, ರಬೀಂದ್ರನಾಥರು ಸಾಮ್ರಾಜ್ಯಶಾಹಿಯ ಕುತಂತ್ರಗಳಿಗೆ ಮುಖಾಮುಖಿಯಾದರು, ಅದರ ಇಂಗಿತವನ್ನು ಅರಿತರು. ಅನೇಕಬಾರಿ ಆಹ್ವಾನಗಳ ಮೇರೆಗೆ, ಇನ್ನು ಕೆಲವೊಮ್ಮೆ ವಿಶ್ವ ಭಾರತಿಗಾಗಿ ಹಣ ಸಂಗ್ರಹಿಸುವ ಉದ್ದೇಶದಿಂದ, ಅವರು ವಿದೇಶಗಳಿಗೆ ಭೇಟಿ ನೀಡಿದರು, ನಿಜ; ಆದರೆ ಆಗೆಲ್ಲ ತನ್ನ ಬರಹಗಳಲ್ಲಿ ಸಮಕಾಲೀನ ವಿಶ್ವದ ಆಗುಹೋಗುಗಳನ್ನು ಕುರಿತು ಬರೆದರು. ಅಷ್ಟೇ ಅಲ್ಲ, ತಮ್ಮನ್ನು ಆಹ್ವಾನಿಸಿದ್ದ ದೇಶಗಳ ಸರ್ಕಾರಗಳು ನಿರಾಶಾದಾಯಕವಾಗಿ ಕಾರ್ಯವೆಸಗುತ್ತಿದ್ದುದನ್ನು ಟೀಕಿಸಲು ಅವರು ಅಂಜಲಿಲ್ಲ. ಅದರಿಂದ ಆಗಾಗ್ಗೆ ಸಂಬಂಧಗಳು ತಣ್ಣಗಾಗಿದ್ದುದೂ ಉಂಟು, ಹಗೆತನ ತೋರಿದ್ದೂ ಉಂಟು. ಉದಾಹರಣೆಗೆ, ಜಪಾನ್ ಮತ್ತು ಅಮೆರಿಕಾ ಹೆಸರಿಸಬಹುದು.

ಯೂರೋಪಿಗೆ ತೆರಳಿದ್ದ ಅನೇಕ ಸಂದರ್ಭಗಳಲ್ಲಿ ರವೀಂದ್ರನಾಥರಿಗೆ ಸತ್ಕಾರಕೂಟಗಳನ್ನೇರ್ಪಡಿಸಿದ್ದುದುಂಟು. ಆದರೆ ಜಲಿಯನ್‌ವಾಲಾಬಾಗ್‌ನಲ್ಲಿ ನಡೆದಿದ್ದ ಹತ್ಯಾಕಾಂಡವನ್ನು ಪ್ರತಿಭಟಿಸಿ ತಮ್ಮ 'ಸರ್' ಬಿರುದನ್ನು ಮರಳಿಸಿದ ತರುವಾಯದಲ್ಲಿ ಭಾರತ ಮತ್ತು ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಪತ್ರಿಕೆಗಳು ಟಾಗೋರರ ವಿರುದ್ಧ ಹಗೆತನ ಸಾಧಿಸಿದ್ದಲ್ಲದೆ ಕೆಲವೇಳೆ ಅವರನ್ನು ಅಪಹಾಸ್ಯ ಮಾಡಿದ್ದೂ ಇದೆ. ಕೆಲವು ಬ್ರಿಟಿಷ್ ಸ್ನೇಹಿತರು ಕೂಡ ಅವರೊಂದಿಗೆ ಹಾಗೆ ನಡೆದುಕೊಂಡರು. ಗಾಂಧೀಜಿ ಸಹ ಟಾಗೋರರ ನಿಲುವನ್ನು ಸೂಕ್ತವಲ್ಲವೆಂದು ಬಣ್ಣಿಸಿದ್ದರು. ಆದರೆ ಟಾಗೋರ್ ತಮ್ಮ ದೃಢನಂಬಿಕೆಗೆ ತಕ್ಕಂತೆ ನಡೆದುಕೊಂಡಿದ್ದರು. ''ಈ ಭಯೋತ್ಪಾದಕ ಕ್ರಿಯೆಯಿಂದ ಭೀತರಾದ ಮೂಕರಾದ,. ಕೋಟಿಗಟ್ಟಲೆ ದೇಶಬಾಂಧವರ ಪ್ರತಿಭಟನೆಗೆ ದನಿಯಾಗಬೇಕಾದ್ದು'' ತನ್ನ ಕರ್ತವ್ಯವೆಂದು ಟಾಗೋರ್ ಬಗೆದರು. ಆಗ್ಗೆ ವೈಸರಾಯ್ ಆಗಿದ್ದ ಚೆಲ್ಮ್‌ಸ್‌ಫರ್ಡ್‌ಗೆ ೩೦-೫-೧೯೧೯ರಂದು ಪತ್ರ ಬರೆದು ''ಜನರ ದೀನಸ್ಥಿತಿಯೆದುರು ಇಂತಹ ಸನ್ಮಾನ ಲಾಂಛನಗಳು ಲಜ್ಜಾಸ್ಪದವಾಗಿರುತ್ತವೆ'' ಎಂದು ತಿಳಿಸಿದರು. ನಂತರದಲ್ಲಿ ೧೯೩೧ರಲ್ಲಿ ಲಂಡನ್ನಿನ 'ಸ್ಪೆಕ್ಟೇಟರ್' ಪತ್ರಿಕೆಯ ಸಂಪಾದಕನಿಗೆ ಒಂದು ಪತ್ರ ಬರೆದು ಆ ಪತ್ರಿಕೆಯ ಓದುಗರಿಗೆ ನೆನಪು ಮಾಡಿಕೊಟ್ಟರು: ''ಇಂದಿನ ವಿಜ್ಞಾನ ಯುಗದಲ್ಲಿ ದೈಹಿಕ ಮತ್ತು ಭೌತಿಕ ಶಕ್ತಿ ಎಂತಹ ದಕ್ಷತೆಯನ್ನು ಸಾಧಿಸಿದೆಯೆಂದರೆ ಹಿಂದೆಂದೂ ಇಂತಹ ಸಂಪೂರ್ಣತೆ ಕಂಡುಬಂದಿರಲಿಲ್ಲ. ಆದರೂ ಈ ಶಕ್ತಿಯು ತನ್ನ ಲಜ್ಜೆಗೆಟ್ಟ ಪ್ರಾಧಾನ್ಯವನ್ನು ಪ್ರದರ್ಶಿಸಿಕೊಳ್ಳಲು ಅಂಜುತ್ತದೆ; ಎಲ್ಲೋ ಕೆಲವು ವೇಳೆ ಮಾತ್ರ ತನ್ನ ಅಲ್ಪದೃಷ್ಟಿಯ ಬರ್ಬರತೆಯನ್ನು ಮೆರೆಯುತ್ತದೆ.''

ಟಾಗೋರರು ಅನೇಕ ಬಾರಿ ಕೊರಿಯದ ಒಬ್ಬ ಯುವಕನ ಜೊತೆ ನಡೆದ ತಮ್ಮ ಮಾತುಕತೆಯನ್ನು ಪ್ರಸ್ತಾಪಿಸಿದ್ದಾರೆ. ಆ ಯುವಕನು ಹೊಸ ಕೊರಿಯಾವೊಂದನ್ನು ಕಟ್ಟುವ ಕನಸು ಕಾಣುತ್ತಿದ್ದ. ಅದಕ್ಕಾಗಿ ಕೊರಿಯಾದಲ್ಲಿ ಜಪಾನಿನ ದಬ್ಬಾಳಿಕೆಯನ್ನು ಮೊದಲು ಕೊನೆಗಾಣಿಸಬೇಕು, ಎಲ್ಲ ದೇಶಗಳಲ್ಲೂ ದಮನಕೋರರನ್ನು ಹಿಮ್ಮೆಟ್ಟಿಸಬೇಕು. ಅದೆಲ್ಲಾ ಸಾಧ್ಯವಾಗುವುದು ಎಲ್ಲ ದಮನಿತರೂ ಒಟ್ಟಾದಾಗ ಮಾತ್ರ. ಇದು ಕಾರ್ಯಗತವಾಗುತ್ತಿದ್ದುದನ್ನು ಟಾಗೋರ್ ಸೋವಿಯೆತ್ ಒಕ್ಕೂಟದಲ್ಲಿ ಕಂಡರು. ೧೯೩೦ರಲ್ಲಿ ಆ ದೇಶಕ್ಕೆ ಭೇಟಿಯಿತ್ತುದನ್ನು ಅವರು ಯಾತ್ರೆಯೆಂದು ಕರೆದಿದ್ದರು. ಅಲ್ಲಿ ಅವರಿಗೊಂದು ಹೊಸ ಭರವಸೆ ಗೋಚರಿಸಿತು. ನಾಗರಿಕತೆಗೆ ಅತಿದೊಡ್ಡ ಬೆದರಿಕೆಯನ್ನೊಡ್ಡಿದ್ದುದು ಜರ್ಮನಿ, ಇಟಲಿ ಮತ್ತು ಜಪಾನಿನ ಫ್ಯಾಸಿಸ್ಟ್ ಮಿಲಿಟರಿ ದೈತ್ಯಶಕ್ತಿಯೆಂದು ಅವರಿಗೆ ಮನವರಿಕೆಯಾಯಿತು. ಇಂತಹ ಗ್ರಹಿಕೆಯಲ್ಲಿ ಟಾಗೋರರಿಗಿಂತ ಹೆಚ್ಚು ಜಾಣ್ಮೆ ತೋರಿದ್ದು ನೆಹರು ಒಬ್ಬರೇ. ಒಮ್ಮೆ ಅವರು ಫ್ಯಾಸಿಸ್ಟ್ ಇಟಲಿಯನ್ನು ಹೊಗಳಿದ್ದರು, ನಿಜ; ಆದರೆ ತನ್ನ ತಪ್ಪನ್ನರಿತು ಅದನ್ನು ಸರಿಪಡಿಸಿಕೊಂಡಿದ್ದರು. ಚೀಣಾದಲ್ಲಿ ಜಪಾನಿನ ಆಕ್ರಮಣದ ವಿರುದ್ಧ ಕಮ್ಯುನಿಸ್ಟ್ ಮತ್ತು ರಾಷ್ಟ್ರೀಯ ಪಕ್ಷಗಳ ಜಂಟಿ ಪ್ರತಿರೋಧದ ನಾಯಕನಾಗಿದ್ದ ಚೆಂಗ್ ಕಾಯ್ ಚೆಕ್‌ನನ್ನು ಟಾಗೋರ್ ಸೌಹಾರ್ದತೆಯ ಸಲುವಾಗಿ ಶಾಂತಿನಿಕೇತನಕ್ಕೆ ಆಹ್ವಾನಿಸಿದ್ದರು. ಆದರೆ ಆತ ಅಲ್ಲಿಗೆ ಭೇಟಿ ನೀಡುವ ವೇಳೆಗೆ ಟಾಗೋರ್ ತೀರಿಕೊಂಡಿದ್ದರು. ಆ ಸಂದರ್ಭದಲ್ಲಿ ನೆಹರು ಸಹ ಉಪಸ್ಥಿತರಿದ್ದು ವೇದಿಕೆಯನ್ನು ಶೃಂಗಾರವಾಗಿ ನಿರ್ಮಿಸುವುದರಲ್ಲಿ ಸಹಕರಿಸಿದ್ದರೆಂದು ಪ್ರಸ್ತುತ ಲೇಖಕನ ಚಿಕ್ಕಮ್ಮ ನೆನಪಿಸಿಕೊಳ್ಳುತ್ತಾರೆ. ಆಗ್ಗೆ ಆಕೆ ಅಲ್ಲಿ ವಿದ್ಯಾರ್ಥಿನಿಯಾಗಿದ್ದರು. ಕಮ್ಯುನಿಸ್ಟ್ ನಾಯಕರಾಗಿದ್ದ ಸರೋಜ್ ಮುಖರ್ಜಿ ಮತ್ತು ಬಂಗಾಳದಲ್ಲಿ ಕಮ್ಯುನಿಸ್ಟ್ ಚಳುವಳಿಯ ಆದ್ಯ ಪ್ರವರ್ತಕರಲ್ಲೊಬ್ಬರಾದ ಅಬ್ದುಲ್ ಹಲೀಮ್ ಜೊತೆಯಾಗಿ ಟಾಗೋರರನ್ನು ಹಲವು ಬಾರಿ ಭೇಟಿಯಾಗಿದ್ದುದಾಗಿ ಮುಖರ್ಜಿ ದಾಖಲಿಸಿದ್ದಾರೆ. ಟಾಗೋರ್ ಅವರಿಬ್ಬರಲ್ಲೂ ಸೋವಿಯೆತ್ ಒಕ್ಕೂಟದ ಬೆಳವಣಿಗೆಗಳನ್ನು ಕುರಿತಂತೆ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರಂತೆ. ''ಸೋವಿಯತ್ ಒಕ್ಕೂಟದ ಮಿತ್ರರು'' ಎಂಬ ಸಂಸ್ಥೆಯನ್ನು ಆರಂಭಿಸುವ ಸಂದರ್ಭದಲ್ಲಿ ಟಾಗೋರರ ಬೆಂಬಲ ಪಡೆಯಲು ಹೋಗಿದ್ದುದನ್ನು ಮತ್ತು ಟಾಗೋರ್ ಅದಕ್ಕೆ ಕೂಡಲೆ ಬೆಂಬಲ ವ್ಯಕ್ತಪಡಿಸಿದ್ದುದನ್ನು ಹಿರೇನ್ ಮುಖರ್ಜಿ ನೆನಪಿಸಿಕೊಂಡಿದ್ದಾರೆ. ಆ ಸಂಸ್ಥೆಯ ಕಾರ್ಯದರ್ಶಿಯಾಗಿ ಜ್ಯೋತಿ ಬಸು ಇದ್ದರು. ಬೆಂಬಲ ನೀಡುವಾಗ ಟಾಗೋರ್ ಒಂದು ಎಚ್ಚರಿಕೆಯ ಮಾತನ್ನು

ಹೇಳಿದ್ದರು : ''ಸೋವಿಯೆತ್ ನಾಡಿನವರಿಗೆ ಬ್ರಿಟನ್ ಬೆಂಬಲ, ಸಹಾಯಹಸ್ತದ ಆಶ್ವಾಸನೆ ನೀಡಿದೆ, ಆದರೆ ಅದಕ್ಕೆ ಸ್ವಂತದ ಹಿತಾಸಕ್ತಿಯಷ್ಟೇ ಕಾರಣ. ಅವರನ್ನು ನಂಬಬೇಡಿ. ನೀವು ಕಮ್ಯುನಿಸ್ಟರು ಸದಾ ಜಾಗೃತರಾಗಿರಬೇಕು.'' ಹೀಗೆ ಎಚ್ಚರಿಕೆ ನೀಡಲು ಕಾರಣಗಳಿದ್ದವು. ಮಧ್ಯಪ್ರವೇಶ ಕೂಡದೆಂಬ ಹೆಸರಿನಲ್ಲಿಯೇ ಬ್ರಿಟನ್, ಫ್ರಾನ್ಸ್, ಅಮೆರಿಕಾಗಳಂತಹ ಪಾಶ್ಚಾತ್ಯ ರಾಷ್ಟ್ರಗಳು ಹಿಟ್ಲರನನ್ನು ಉತ್ತೇಜಿಸಿದ್ದವು, ಆಸ್ಟ್ರಿಯಾ, ಚೆಕೋಸ್ಲಾವಿಯಾ ಮತ್ತು ಪೋಲೆಂಡ್ ದೇಶಗಳನ್ನು ಕಬಳಿಸಲು ಬಿಟ್ಟಿದ್ದವು. ಇಟಲಿಯ ಸೇನೆಯು ಅಬಿಸೀನಿಯಾ (ಈಗ ಇಥಿಯೋಪಿಯ) ಮೇಲೆ ಆಕ್ರಮಣ ನಡೆಸಿದಾಗ ಮತ್ತು ಫ್ರಾಂಕೋನ ಫ್ಯಾಸಿಸ್ಟ್ ತುಕಡಿಗಳು ಸ್ಪೇನ್ ಗಣರಾಜ್ಯವನ್ನು ತನ್ನದಾಗಿಸಿಕೊಳ್ಳಲು ಹೊರಟಿದ್ದಾಗ ಈ ಪಾಶ್ಚಾತ್ಯ ದೇಶಗಳು ಬೆಚ್ಚಗೆ ಕುಳಿತಿದ್ದವು. ಇದನ್ನೆಲ್ಲಾ ಆತಂಕದಿಂದ ಟಾಗೋರ್ ವೀಕ್ಷಿಸುತ್ತಾ ಬಂದಿದ್ದರು. 'ಆಫ್ರಿಕ' ಎಂಬ ತನ್ನ ಕವನದಲ್ಲಿ ಅದನ್ನು ಅಭಿವ್ಯಕ್ತಿಗೊಳಿಸಿದ್ದರು. ಸೋವಿಯೆತ್ ಒಕ್ಕೂಟದ ಮೇಲೆ ಹಿಟ್ಲರ್ ದಾಳಿ ನಡೆಸಿದಾಗ ಟಾಗೋರ್ ಚಕಿತಗೊಂಡಿದ್ದರು. ಆರಂಭದಲ್ಲಿ ಸೋವಿಯೆತ್ ದೇಶವು ಸೋಲುಗಳನ್ನುಂಡುದು ಅವರಿಗೆ ತಲ್ಲಣ ಉಂಟುಮಾಡಿತ್ತು. ಟಾಗೋರ್ ಸಾವನ್ನಪ್ಪಿದ್ದು ೧೯೪೧ರ ಆಗಸ್ಟ್ ೭ರಂದು. ಸಾವಿನೊಡನೆ ಸಮರ ನಡೆಸುತ್ತಿದ್ದ ಅವರ ಕೊನೆಗಾಲದಲ್ಲಿ ಕೂಡ ರಷ್ಯವು ಯುದ್ಧದಲ್ಲಿ ಪ್ರಗತಿ ಸಾಧಿಸುತ್ತಿದೆಯೇ ಎಂದು ವಿಚಾರಿಸಿ ತಿಳಿದುಕೊಳ್ಳುತ್ತಿದ್ದ ಟಾಗೋರ್, ಸೋವಿಯೆತ್ ದೇಶ ಅಂತಿಮವಾಗಿ ವಿಜಯಿಯಾಗುತ್ತದೆಂಬ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಸೋವಿಯೆತ್ ದೇಶ ಗೆಲುವು ಸಾಧಿಸದಿದ್ದರೆ ಅದು ನಾಗರಿಕತೆಯ ಚರಮವಾಕ್ಯವಾದೀತೆಂಬ ಭೀತಿ ಅವರಲ್ಲಿದ್ದಿತು.

ಪರ್ಶಿಯಾದಿಂದ ಬರೆದ ಸ್ಮೃತಿಲೇಖನಗಳಲ್ಲಿ ರವೀಂದ್ರನಾಥರು ತಮಗೆ ಪಾಶ್ಚಿಮಾತ್ಯ ದೇಶಗಳ ಪರಿಚಯವು ದೇಶೀಯ ಭಾವನೆಗಳು ಪುಟಿದೇಳಲು ಪ್ರೇರಣೆ ನೀಡಿತೆಂಬುದನ್ನು ದಾಖಲಿಸಿದ್ದಾರೆ. ಇದೇ ಭಾವನೆಯು ಕ್ರಮೇಣ ಅವರನ್ನು ''ದೇಶದ ಸಾಮಾನ್ಯ ಜನತೆ ಮತ್ತು ದೇಶ ಒಂದೇ ಅಲ್ಲ'' ಎಂಬ ನೆಲೆಗೆ ಕೊಂಡೊಯ್ದಿತು. ಅದು ಅವರನ್ನು ಅಂತರರಾಷ್ಟ್ರೀಯತೆಯ ನೆಲೆಯಲ್ಲಿ ನಿಲ್ಲಿಸಿತು. ಅವರು ವಿಶ್ವಮಾನವರಾದ್ದು ಹಾಗೆ. ಯೂರೋಪಿನ ವೈಜ್ಞಾನಿಕ ಪ್ರಗತಿ ಅಸಾಧಾರಣವಾದ್ದು. ಅದನ್ನು ವಿಶ್ವ ಪರಿಗಣಿಸಲೇಬೇಕು. ಆದರೆ ಅದೇ ವೇಳೆ ಗಣನೆಗೆ ತೆಗೆದುಕೊಳ್ಳಬೇಕಾದ ಇನ್ನೊಂದಂಶವಿದೆ : ''ಅವರು ಈ ವಿಜ್ಞಾನವನ್ನು ಬೇರೆಯವರ ಪತನಕ್ಕೆ ಮತ್ತು ಮಾನವ ಸಂಕಷ್ಟಗಳ ಹೆಚ್ಚಳಕ್ಕೆ ಪ್ರಯೋಗಿಸುತ್ತಿದ್ದಾರೆ. ಅವರ ಈ ಅಪಾಯಕರವಾದ ರೀತಿಯಿಂದಾಗಿ ಪತನವೆಂಬ ಬೆಂಕಿಯು ದೇಶದಿಂದ ದೇಶಕ್ಕೆ ಹಬ್ಬುತ್ತಿದೆ. ... ಇದರಿಂದ ಮಾನವತ್ವ ಭಾವನೆ ಇಲ್ಲವಾಗುತ್ತಿದೆ ಮತ್ತು ಮುನ್ನೆಚ್ಚರಿಕೆಯ ಗಂಟೆ ಬಾರಿಸಿದಾಗಲೂ ಮಾನವಕುಲದ ರಕ್ಷಣೆಗೆ ಅಡ್ಡಿಯನ್ನೊಡ್ಡುತ್ತಿದೆ.'' ಅಂತೆಯೇ, ಜಪಾನಿನ ಅಭಿವೃದ್ಧಿಗೆ ಅಭಿನಂದನೆ ಸಲ್ಲಿಸುತ್ತಲೇ ಟಾಗೋರ್ ಒಂದು ಮಾತು ಹೇಳಿದರು : ''ಅವಳ (ಅಂದರೆ, ಜಪಾನಿನ) ರಕ್ತವು ಯೂರೋಪಿನ ಭಯಂಕರ ವ್ಯಾಧಿಯಾದ ಸಾಮ್ರಾಜ್ಯದಾಸೆಯಿಂದ ಕಲುಷಿತಗೊಂಡಿದೆ. ಅದು ಆ ದೇಶದ ನೆರೆರಾಷ್ಟ್ರಗಳಲ್ಲಿ ಜಪಾನಿನ ಬಗೆಗೆ ಅಪನಂಬಿಕೆ ಸೃಷ್ಟಿಸಿದೆ.''

ಏಷ್ಯದ ಉದ್ದಗಲಕ್ಕೂ ಹೊಸ ಜೀವನದಿಯೊಂದು ಹರಿಯುತ್ತಿದ್ದುದನ್ನು ಟಾಗೋರ್ ಗಮನಿಸಿದರು. ಟರ್ಕಿಯ ಮುಸ್ತಫಾ ಕೆಮಲ್ ಪಾಶಾ ಸ್ಫೂರ್ತಿಯ ಒಂದು ಸೆಲೆಯಾಗಿದ್ದ. ಅವನ ನಾಯಕತ್ವದಲ್ಲಿ ಅಲ್ಲಿಯ ಪ್ರಭುತ್ವ ಘೋಷಿಸಿತ್ತು: ''ಮಧ್ಯಯುಗೀನ ನಿಯಮಗಳು ಜಾತ್ಯತೀತ ಕಾನೂನಿಗೆ ಎಡೆಮಾಡಿಕೊಡಬೇಕು. ಮಹಿಳೆಯರಿಗೆ ಕರೆ ನೀಡಲಾಗಿದೆ: ವೈಜ್ಞಾನಿಕ ದೃಷ್ಟಿಯ ಆಧಾರದ ಮೇಲಿನ ಆಧುನಿಕ ಯುಗದ ಆದರ್ಶಗಳನ್ನು ನೀವು ಮೈಗೂಡಿಸಿಕೊಳ್ಳದಿದ್ದರೆ ನಾವು ವಿಫಲರಾಗುತ್ತೇವೆ.'' ಆದರೆ ಟಾಗೋರರಿಗೆ ಅತ್ಯಂತ ಹೆಚ್ಚಿನ ಸಂತಸ ತಂದಿದ್ದು ''ವಿಶ್ವದ ಒಂದು ಮಬ್ಬಾದ ಮೂಲೆಯಲ್ಲಿ ಜರುಗುತ್ತಿದ್ದ ಘಟನೆಗಳು. ಸೋವಿಯೆತ್ ತುರ್ಕ್‌ಮೆನಿಸ್ತಾನ್‌ನ ಅಲೆಮಾರಿ ಬುಡಕಟ್ಟು ಜನರ ಜೀವನದಲ್ಲಿ ಎಷ್ಟು ನಾವೀನ್ಯ! ಅದೂ ಎಷ್ಟು ಕಡಿಮೆ ವೇಳೆಯಲ್ಲಿ! ಅದು ನಿಜಕ್ಕೂ ದಂಗುಬಡಿಸುವಂಥದು. ಎಷ್ಟು ವೇಗವಾಗಿ ಈ ಜನರಲ್ಲಿ ತಿಳುವಳಿಕೆ ಮತ್ತು ಸ್ವಾವಲಂಬನೆಯನ್ನು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ! ಸೋವಿಯೆತ್ ಸರ್ಕಾರವು ಈ ಗುರಿಗೆ ಬದ್ಧವಾಗಿರುವುದರಿಂದ ಈ ಗೆಲುವು ಸಾಧ್ಯವಾಗಿದೆ. ಒಂದು ಆರೋಗ್ಯಕರ ಮನಸ್ಸು ಮನುಷ್ಯ-ಮನುಷ್ಯರನ್ನು ಜೊತೆಗೂಡಿಸುತ್ತದೆ. ಈ ಪ್ರಕ್ರಿಯೆಗೆ ನಾಂದಿಯೆಂದರೆ ಶಿಕ್ಷಣ ಮತ್ತು ಸ್ವಾತಂತ್ರ್ಯ. ಏಷ್ಯಾದ ಈ ಭಾಗದಲ್ಲೀಗ ಇವು ಪ್ರವಾಹದಂತೆ ಹರಿಯುತ್ತಿವೆ.''

ಟಾಗೋರರಲ್ಲಿದ್ದ ಭರವಸೆಯು ಫ್ಯಾಸಿಸಂನ ಉಗಮ ಮತ್ತು ಅದರಿಂದ ಉಂಟಾದ ಮಹಾಯುದ್ಧದಿಂದಾಗಿ ಬಲವಾದ ಪೆಟ್ಟು ತಿಂದಿತು. ಅವರು ಗತಿಸುವ ಕೆಲವೇ ವಾರಗಳ



ಮುನ್ನ ಒಂದು ಭವಿಷ್ಯವಾಣಿಯೋ ಎಂಬಂತೆ ಮಾನವನ ಪ್ರಗತಿಯನ್ನು ಭಗ್ನಗೊಳಿಸಲು ವಿನಾಶದ ದುಷ್ಟ ಶಕ್ತಿಗಳು ಹುಟ್ಟಿಕೊಂಡಿವೆಯೆಂದು ವಿಶ್ವಕ್ಕೆ ನೆನಪು ಮಾಡಿಕೊಟ್ಟರು : ''ಮುಂದೊಂದು ದಿನ ಮಾನವನು ತನ್ನ ಅಜೇಯ ಶಕ್ತಿಯಿಂದ ಎಲ್ಲ ತೊಡಕುಗಳನ್ನೂ ನಿವಾರಿಸಿಕೊಂಡು ತನ್ನ ಘನತೆಯನ್ನು ಸಾರುತ್ತಾನೆ. ...ಎಷ್ಟೇ ಬಲಶಾಲಿಯಾಗಿದ್ದರೂ ಒಬ್ಬ ವ್ಯಕ್ತಿಯ ಕೊಬ್ಬಿನಿಂದ ಕೂಡಿದ ಶಕ್ತಿಯು ಶಾಶ್ವತವಲ್ಲ. ವಿಶ್ವಕ್ಕೆ ಈ ನಿಜವನ್ನು ತೋರಿಸುವ ದಿನ ಇದೀಗ ಬಂದಿದೆ.'' *(ನಾಗರಿಕತೆಯ ಬಿಕ್ಕಟ್ಟು, ಮೇ ೧೯೪೧)*

ಟಾಗೋರರ ಈ ಮಾತುಗಳು ಇತ್ತೀಚೆಗೆ ಮತ್ತೆ ನನ್ನ ಸ್ಮೃತಿಯಲ್ಲಿ ಹಾದುಹೋದವು : ಭೋಪಾಲ್ ಅನಿಲ ದುರಂತಕ್ಕೆ ಕಾರಣರಾದ ಪಾತಕಿಗಳ ವಿರುದ್ಧ ಭಾರತದ ನ್ಯಾಯಾಲಯವು ನೀಡಿದ ತೀರ್ಪನ್ನು ಕೇಳಿದಾಗ. ಸಹಜವಾಗಿಯೇ ಟಾಗೋರರ ಒಂದು ಕವನ ನೆನಪಿಗೆ ಬಂತು. ೧೯೩೧ರಲ್ಲಿ ಬರೆಯಲಾಗಿದ್ದ ಈ ಕವನವು ಭಾರತವು ಬ್ರಿಟನ್ನಿನ ವಸಾಹತಾಗಿದ್ದ ಕಾಲದಲ್ಲಿ ಹಿಜಲಿ ಕಾರಾಗೃಹದಲ್ಲಿ ರಾಜಕೀಯ ಖೈದಿಗಳನ್ನು ಕೊಂದಾಗ ಪ್ರತಿಭಟನೆಯಾಗಿ ಬಂದಿದ್ದು, ಅದು ಭಗವಂತನಿಗೆ ಪ್ರಶ್ನೆಯ ರೂಪದಲ್ಲಿದೆ :

''ದೇವರೆ, ನೀನು ಹಲವು ಬಾರಿ ನಿನ್ನ ದೂತರನ್ನು ನಮ್ಮಲ್ಲಿಗೆ ಕಳಿಸಿದ್ದೀಯೇ. ಅವರೆಲ್ಲರ ಮಾತೂ ಒಂದೇ : 'ಎಲ್ಲರನ್ನೂ ಕ್ಷಮಿಸು, ಎಲ್ಲರನ್ನೂ ಪ್ರೀತಿಸು.'

''ಭಕ್ತಿಯಿಂದ ಅವರನ್ನು ನೆನೆಯಲು ಅವರು ಪುಣ್ಯಮಾಡಿದ್ದರು. ಆದರೆ ಇಂದಿನ ಈ ಸಂಕಟದಲ್ಲಿ ನಾನವರನ್ನು ಅರೆಮನಸ್ಸಿನಿಂದ ಮಾತನಾಡಿಸಿ ಕಳಿಸಿದ್ದೇನೆ.

''ಕ್ರೌರ್ಯವು ಗುಪ್ತವಾಗಿ ಕತ್ತಲಲ್ಲಿ ದುರ್ಬಲರು, ನಿರಾಯುಧರ ಮೇಲೆ ದಾಳಿ ಮಾಡುವುದನ್ನು ಕಂಡಿದ್ದೇನೆ. ಬಲಶಾಲಿಗಳ ದೌರ್ಜನ್ಯಗಳಿಗೆ ಶಿಕ್ಷೆಯೇ ಇಲ್ಲದಿರುವುದನ್ನು, ಸತ್ಯವು ಮೌನವಾಗಿ ಅಳುವುದನ್ನೂ ನಾನು ಕಂಡಿದ್ದೇನೆ. ಚಿಕ್ಕ ಬಾಲಕನೊಬ್ಬ ಅಸಹಾಯಕತೆಯಿಂದ ಬಂಡೆಗೆ ತಲೆ ಚಚ್ಚಿಕೊಳ್ಳುವುದನ್ನು ಕಂಡಿದ್ದೇನೆ, ಹತಾಶೆಯಿಂದ ತನ್ನನ್ನು ತಾನು ನಾಶಮಾಡಿಕೊಳ್ಳುವುದನ್ನು ಕಂಡಿದ್ದೇನೆ.

''ನನ್ನ ಬಾಯಲ್ಲಿ ಮಾತಿಲ್ಲ, ಕೊರಳಲ್ಲಿ ನಾದವಿಲ್ಲ, ನನ್ನ ಬಾಳೆಲ್ಲ ಇಂದು ಕತ್ತಲಾಗಿದೆ.

''ಕಣ್ಣೀರು ತುಂಬಿದ ಕಣ್ಣುಗಳಿಂದ ನಿನ್ನನ್ನು ಕೇಳುತ್ತೇನೆ : ಯಾರು ನಿನ್ನ ಗಾಳಿಯನ್ನು ವಿಷಪೂರಿತವಾಗಿಸಿದ್ದಾರೋ, ನಿನ್ನ ಬೆಳಕನ್ನು ನಂದಿಸಿದರೋ, ಅಂಥವರನ್ನು ನೀನು ಕ್ಷಮಿಸಿದೆಯಾ ? ಅವರನ್ನಿನ್ನೂ ನೀನು ಪ್ರೀತಿಸುವೆಯಾ ?''

ಈ ಪ್ರಶ್ನೆ ಪದೇ ಪದೇ ನನ್ನ ಮನಸ್ಸಿನಲ್ಲೇಳುತ್ತದೆ. ಅದನ್ನು ನಾನೆಂದೂ ಮರೆಯಲಾರೆ. (ಲೇಖನದಲ್ಲಿ ಬಂದಿರುವ ಎಲ್ಲ ಮೂಲ ಬಂಗಾಲಿ ಭಾಗಗಳನ್ನೂ ಪ್ರಸ್ತುತ ಲೇಖಕ ಸ್ವತಃ ಅನುವಾದಿಸಿರುವುದು.)

**ಡಾ|| ಎಸ್. ಚಟರ್ಜಿ**
ಭಾರತೀಯ ಖಭೌತ ಶಾಸ್ತ್ರ ಮಂದಿರ, ಬೆಂಗಳೂರು - ೫೬೦ ೦೩೪
ಕನ್ನಡಕ್ಕೆ : **ಡಾ|| ವಾಣಿ ವರದನ್ ಚಟರ್ಜಿ**



# ಪ್ರಾಚೀನ ಭಾರತೀಯ ಸಮಾಜದಲ್ಲಿ ತಿಕ್ಕಾಟಗಳು

**ತಿ**ಕ್ಕಾಟಗಳು ಸ್ವಾಭಾವಿಕ ಮತ್ತು ಅಸ್ವಾಭಾವಿಕ, ಹೀಗೆ ಎರಡು ವಿಧಗಳಲ್ಲಿರುತ್ತವೆ. 'ಸ್ವಾಭಾವಿಕ'ವೆಂದರೆ ಪ್ರಕೃತಿಯಿಂದ ಉದ್ಭವಿಸುವಂಥವು; ಅವು ಭೌತಿಕವಾದುವು, ಕಾಲ್ಪನಿಕವಲ್ಲ. ಅದರಲ್ಲಿ ಪವಾಡಸದೃಶವಾದುದೇನೂ ಇಲ್ಲ, ಎಲ್ಲಾ ಜೀವನ ಸಹಜವಾದವು, ಇಂದ್ರಿಯ ಗ್ರಾಹ್ಯವಾದವು. ಇದರಿಂದ ಭಿನ್ನವಾದುದು 'ಅಸ್ವಾಭಾವಿಕ.'

ಭಾರತೀಯ ಸಮಾಜವು ಸಿಂಧು ಕಣಿವೆಯ ಸಂಸ್ಕೃತಿಯಿಂದ ಆರಂಭವಾಗುತ್ತದೆ. ಅದಕ್ಕೆ ಮುಂಚೆ ಸಮಾಜ ಮತ್ತು ಸಂಸ್ಕೃತಿ ಇರಲಿಲ್ಲವೆಂದಲ್ಲ. ಇಲ್ಲದಿರಲು ಹೇಗೆ ಸಾಧ್ಯ! ಅದರ ವಿವರಗಳು ನಮಗೆ ತಿಳಿದಿಲ್ಲ, ಅಷ್ಟೆ. ಸಿಂಧು ನಾಗರಿಕತೆ ಬಗ್ಗೆ ಸಹ ಎಲ್ಲವೂ ತಿಳಿದಿಲ್ಲ; ಏಕೆಂದರೆ ಆಗಿನ ಲಿಖಿತ ಪುರಾವೆಗಳನ್ನು ಅರ್ಥಮಾಡಿಕೊಳ್ಳಲು ಈವರೆಗೆ ಸಾಧ್ಯವಾಗಿಲ್ಲ. ಅರ್ಥಮಾಡಿಕೊಂಡಿರುವುದಾಗಿ ಕೆಲವರು ಹೇಳಿದ್ದಾರೆ, ಆದರೆ ಅದು ನಂಬಲರ್ಹವೆಂದು ಇತರರು ಮಾನ್ಯ ಮಾಡಿಲ್ಲ. ಉತ್ಖನನದಲ್ಲಿ ದೊರೆತ ಬೇರೆ ನೂರಾರು ಸಾಮಗ್ರಿಗಳನ್ನಾಧರಿಸಿ ಸಿಂಧು ಸಂಸ್ಕೃತಿಯನ್ನು ಕುರಿತಂತೆ ಹಲವು ನಿರ್ದಿಷ್ಟ ತೀರ್ಮಾನಗಳು ಸಾಧ್ಯವಾಗಿವೆ. ವೈದಿಕ ಸಂಸ್ಕೃತಿಯ ಬಗ್ಗೆ ಹೆಚ್ಚು ನಿಖರತೆ ಸಾಧ್ಯ; ಏಕೆಂದರೆ ಅದರ ಹುಟ್ಟು ಮತ್ತು ಬೆಳವಣಿಗೆಗಳನ್ನು ದಾಖಲಿಸಿರುವ ಲಿಖಿತ ಸಾಹಿತ್ಯ ಅಪಾರವಾಗಿದೆ. ಸಾಹಿತ್ಯವೇನೋ ಇದೆ, ಆದರೆ ಅಪಾರ್ಥ ಮಾಡಿಕೊಂಡು ತಪ್ಪು ಕಲ್ಪನೆಗಳಿಗೆ ಜೋತುಬೀಳುವ ಸಂಪ್ರದಾಯವೂ ಇದೆ. ಅಂತಹ ಒಂದು ಕಲ್ಪನೆ ಹೀಗಿರಬಹುದು: ಇಡೀ ವೈದಿಕ ಸಾಹಿತ್ಯವು ಒಂದೇ ಕಾಲಕ್ಕೆ ಸೇರಿದ ಒಂದೇ ತೆರನಾದ ಸೃಷ್ಟಿ: ಅದರಲ್ಲಿರುವ ವಿವೇಕ ಮತ್ತು ಜ್ಞಾನ ಅಪ್ರತಿಮವಾದ್ದು, ಇತ್ಯಾದಿ. ವಾಸ್ತವ ಸಂಗತಿ ಏನೆಂದರೆ ವೈದಿಕ ಸಾಹಿತ್ಯವು ಸುಮಾರು ಎರಡು ಸಾವಿರ ವರ್ಷಗಳ ಅವಧಿಯಲ್ಲಿ ನಿರ್ಮಿತಗೊಂಡಿತು ಎಂಬುದು. ಅದೂ ಬೇರೆ ಬೇರೆ ಪ್ರದೇಶಗಳಲ್ಲಿ ಮತ್ತು ಬೇರೆ ಬೇರೆ ಶೈಲಿಗಳಲ್ಲಿ. ಆದ್ದರಿಂದ ವಸ್ತುವೈವಿಧ್ಯ ಸಹಜವಾಗಿದೆ. ಅತ್ಯಂತ ಪ್ರಾಚೀನ ಭಾಗವನ್ನು ರಚಿಸಿದವರು ಪಶುಸಂಗೋಪನಾ ಹಂತದ ಪೂರ್ವದವರು, ಲಿಪಿ ಹೊಂದಿರದಿದ್ದ ಬುಡಕಟ್ಟು ವ್ಯವಸ್ಥೆಯ ಜನ. ಅವರು ತಮ್ಮನ್ನು ಆರ್ಯರೆಂದು ಕರೆದುಕೊಳ್ಳುತ್ತಿದ್ದರು. ಮೌಖಿಕವಾಗಿ ಅವರು ರಚಿಸಿದ ಮಂತ್ರಗಳು ಹಲವು ತಲೆಮಾರುಗಳ ಮೂಲಕ ಪ್ರವಹಿಸಿವೆ.

• • • • • • • • • • • • • • • • • • • • •

ಪ್ರೊ॥ ಒ. ಪಿ. ಜಯಸ್ವಾಲ್

ಆ ಆದಿಕಾಲದಲ್ಲಿ ಸಂಪತ್ತೆಂದರೆ ಗೋವುಗಳು. ಬುಡಕಟ್ಟು ವಿಘಟನೆ ಹೊಂದುತ್ತಾ ಬಂದಾಗ ವಯಸ್ಸು, ಲಿಂಗ, ಗೋಸಂಪತ್ತು, ರಥವನ್ನು ಹೊಂದಿರುವುದು, ಹೀಗೆ ಹಲವು ಕಾರಣಗಳಿಂದ ಅವರಲ್ಲಿ ಅಸಮಾನತೆ ತೋರ್ಪಡಲಾರಂಭವಾಯಿತು. ಆಹಾರದ ಉತ್ಪಾದನೆಯ ಆರ್ಥಿಕತೆ ಇನ್ನೂ ಸ್ಥಿರವಾಗಿಲ್ಲದಿದ್ದುದರಿಂದ ಬೇರೆಯವರ ಉತ್ಪಾದನೆಯಲ್ಲಿನ ಮಿಗುತಾಯದ ಆಧಾರ ಹೊಂದಿ ಜೀವಿಸುವಂತಹ ಪುರೋಹಿತರು, ಸೈನಿಕರು, ರಾಜರು, ಇರಲು ಸಾಧ್ಯವಿರಲಿಲ್ಲ. ಋಗ್ವೇದದ ಆರಂಭಿಕ ಸೂಕ್ತಗಳಲ್ಲಿ ಸಾಮಾನ್ಯವಾಗಿ ಕಾಣಬರುವುದು ತಮ್ಮ ಇರುವಿಕೆಗೆ ಅಗತ್ಯವಾದ ವಸ್ತುಗಳಿಗಾಗಿ ಉತ್ಕಟೇಚ್ಛೆ: ಪಶುಗಳು, ಆಹಾರ, ಮಳೆ, ಸುಭದ್ರತೆ, ಆರೋಗ್ಯ, ಸಂಘರ್ಷದಲ್ಲಿ ಜಯ, ಉಪಕರಣಗಳು, ಮಕ್ಕಳು, ಇತ್ಯಾದಿ. ಕಡೆಯ ಹಂತದ ಕೆಲವು ಋಗ್ವೇದದ ಸೂಕ್ತಗಳಲ್ಲಿ ಜಗತ್ತಿನ ಸೃಷ್ಟಿಯ ವಿಸ್ಮಯ, ಅಗಾಧತೆ, ಪ್ರಕಟವಾಗಿದೆ; ಇಂಥ ಕಡೆ

ಕಾಣಬರುವ ತತ್ತ್ವಚಿಂತನೆಯನ್ನು ಬಿಟ್ಟರೆ ಬೇರೆ ತಾತ್ತ್ವಿಕತೆಯೆಂಬುದು ಋಗ್ವೇದದಲ್ಲಿ ಅತಿ ವಿರಳ. ಋಗ್ವೇದದ ಎಷ್ಟೋ ಶತಮಾನಗಳ ನಂತರದಲ್ಲಿ ಬಂದ ಉಪನಿಷತ್ತುಗಳಲ್ಲಿ 'ಸತ್' ಎಂಬುದರ ಚಿಂತನೆ ಅಲ್ಲಲ್ಲಿ ಬಂದಿದೆ; ಅದರಲ್ಲಿ ಭಾವನಾವಾದದ ರೂಪುರೇಷೆಗಳು ದೊರೆಯುತ್ತವಾದರೂ ಬೇರೆಡೆ ವಾಸ್ತವಿಕ ಪ್ರಪಂಚದ ಆಗುಹೋಗುಗಳನ್ನು ಕೇಂದ್ರೀಕರಿಸಿ ಚಿಂತನೆ ನಡೆಸುವುದೇ ಹೆಚ್ಚು. ಜಗತ್ತು ನಿಜಕ್ಕೂ ಇಲ್ಲ, ಅದು ಗೋಚರಿಸುತ್ತಿರುವಂತೆ ಭಾಸವಾಗುತ್ತದೆ, ಅದು ಮನಸ್ಸು ಕಲ್ಪಿಸಿಕೊಂಡದ್ದು, ಜಗತ್ತಿನ ಮೂಲದ್ರವ್ಯವು 'ಬ್ರಹ್ಮನ್' ಎಂಬ ನಿರಾಕಾರವಾದ ವಸ್ತು, ಮುಂತಾದ ಅಭಿಪ್ರಾಯಗಳನ್ನು ಸ್ಥೂಲವಾಗಿ ಭಾವನಾವಾದ ಎನ್ನಬಹುದು. ಇದಕ್ಕೆ ಪ್ರತಿಯಾಗಿ, ಜಗತ್ತಿನ ಅಸ್ತಿತ್ವವು ಸತ್ಯ, ಅದರ ಮೂಲ ದ್ರವ್ಯವು ಭೌತರೂಪದ್ದು, ಅತ್ಯಂತ ಸೂಕ್ಷ್ಮ ಹಂತದಿಂದ ಅದು ಮಹತ್ತಾಗಿ ತಾನೇತಾನಾಗಿ ವಿಕಾಸಹೊಂದಿದೆ, ಎಂದು ತರ್ಕಿಸುವ ಭೌತವಾದದ ಅಂಶವು ಸಹ ಉಪನಿಷತ್ತುಗಳಲ್ಲಿದೆ. ಅಂದರೆ, ಪ್ರಕೃತಿಯನ್ನಾಧರಿಸಿಯೇ ವಿಶ್ಲೇಷಣೆ ನಡೆಯುತ್ತದೆ; ಇದು ವಿಜ್ಞಾನಪೂರ್ವದ ಲಕ್ಷಣವಾಗಿ ಪ್ರಪಂಚದ ಎಲ್ಲ ಸಂಸ್ಕೃತಿಗಳಲ್ಲೂ ಹೊರಹೊಮ್ಮಿದೆ. ಒಂದು ಉಪನಿಷತ್ತಿನಲ್ಲಿ ಬರುವ ಮಾತನ್ನು ಎಂ. ಎನ್. ರಾಯ್ ಒಂದೆಡೆ ಹೀಗೆ ಸಂಗ್ರಹಿಸಿದ್ದಾರೆ: "ಅವತಾರವೆಂಬುದೇನೂ ಇಲ್ಲ; ಅಂತೆಯೇ ದೇವತೆ, ಸ್ವರ್ಗ-ನರಕಗಳೂ ಸಹ. ಸಾಂಪ್ರದಾಯಿಕ ಸಾಹಿತ್ಯದಲ್ಲಿ ಧರ್ಮದ ಹೆಸರಲ್ಲಿ ಏನೇನೋ ಕಲ್ಪನೆಗಳು ಬಂದಿವೆ; ಅವುಗಳ ಕರ್ತೃಗಳು ಯಾವ ಉದ್ದೇಶ ಹೊಂದಿದ್ದರೋ ಅದನ್ನು ಅನ್ವೇಷಿಸಬೇಕು. ಮೂಲತಃ ಪ್ರಕೃತಿಯು ವಿಕಾಸಮೂಲ ಮತ್ತು ಕಾಲವು ಸಂಹಾರಮೂಲ. ಅವಕ್ಕೆ ಒಳಿತು-ಕೆಡುಕು ಎಂಬ ಭೇದವಿಲ್ಲ; ಆದ್ದರಿಂದ ಸುಖ-ದುಃಖಗಳನ್ನು ನೀಡುವ ಆಶಯ ಅವಕ್ಕಿಲ್ಲ."



ಛಾಂದೋಗ್ಯ ಉಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲಿ ಒಂದು ಪ್ರಸಂಗವಿದೆ; ಜಾನಶ್ರುತಿ ಮತ್ತು ರೈಕ್ವ ಅದರ ಪ್ರಧಾನ ಪಾತ್ರಗಳು. ಅದರಲ್ಲಿ ಪ್ರಾಕೃತಿಕ ಚಿಂತನೆಯ ಮಹತ್ವವನ್ನು ಒತ್ತುಕೊಟ್ಟು ಹೇಳಲಾಗಿದೆ. ಜಾನಶ್ರುತಿ ಒಬ್ಬ ಮುಕ್ತ ದಾನಿ; ಎಲ್ಲೆಲ್ಲೂ ವಸತಿಗೃಹಗಳನ್ನು ಕಟ್ಟಿಸಿದ್ದ. "ಆಹಾ, ಅಲ್ಲೆಲ್ಲಾ ನಾನು ಯೋಜಿಸಿರುವ ಆಹಾರ ಉಣ್ಣುತ್ತಾರೆ ಜನ" ಎಂದು ಉಲ್ಲಸಿತನಾಗುತ್ತಿದ್ದ. ಒಂದು ಸಂಜೆ ಹಂಸಗಳು ಹಾರುತ್ತಿದ್ದಾಗ ಒಂದು ಹಂಸ ಹೇಳಿತು: "ಜಾನಶ್ರುತಿಯ ಬೆಳಕು ಆಕಾಶದಂತೆ ವಿಶಾಲವಾಗಿ ಹಬ್ಬಿದೆ; ಅದನ್ನು ಮುಟ್ಟಬೇಡ, ಸುಟ್ಟುಕೊಂಡೀಯೆ," ಎಂದು. ಅದಕ್ಕೆ ಉತ್ತರವಾಗಿ ಇನ್ನೊಂದು ಹಂಸ ಹೇಳಿತು, "ಯಾವನವನು ಜಾನಶ್ರುತಿ? ಏನೋ ಅವನು ರೈಕ್ವನೆಂಬಂತೆ ಹೇಳುತ್ತಿದ್ದೀಯಲ್ಲ," ಎಂದು. ಆ ರೈಕ್ವ ಒಂದು ಗಾಡಿಯ ಕೆಳಗೆ ಮೈ ತುರಿಸಿಕೊಂಡು ಕುಳಿತ ವ್ಯಕ್ತಿ! ಅವನ ಬಗ್ಗೆ ಹಂಸ ಹೇಳಿತು: "ಪಗಡೆಯಾಟದಲ್ಲೋ ಬೇರೆ ಜೂಜಿನಲ್ಲೋ ದಾಳ ಹಾಕಿದಾಗ ಹೆಚ್ಚಿನ ಸಂಖ್ಯೆ ಪಡೆದವನಿಗೆ ಕಡಿಮೆ ಸಂಖ್ಯೆಯವನದೆಲ್ಲಾ ಹೋಗುವಂತೆ, ಒಳ್ಳೆಯದನ್ನು ಯಾರೇ ಮಾಡಲಿ ಅದೆಲ್ಲಾ ರೈಕ್ವನಿಗೆ ಸೇರುತ್ತದೆ. ಅವನು ತಿಳಿದಿರುವುದರ ಬಗೆಗೂ ಅದನ್ನೇ ಹೇಳಬೇಕು; ಯಾರಿಗೆ ಏನೇ ತಿಳಿದಿರಲಿ, ಎಲ್ಲ ತಿಳಿವಳಿಕೆಯೂ ರೈಕ್ವನದು." ಈ ಮಾತನ್ನು ಕೇಳಿಸಿಕೊಂಡ ಜಾನಶ್ರುತಿ ದಂಗಾಗಿಹೋದ. ಮಾರನೆಯ ದಿನ ರೈಕ್ವನನ್ನು ಹುಡುಕಿ ತರಲು ಭಟರನ್ನಟ್ಟಿದ. ಎಲ್ಲೆಲ್ಲೋ ಅನ್ವೇಷಣೆ ನಡೆಸಿದ ಭಟರು ಕಡೆಗೆ ಒಬ್ಬನ ಬಳಿಗೆ ಬಂದರು. ಒಂದು ಗಾಡಿಯಡಿ ಕುಳಿತು ಮೈ ತುರಿಸಿಕೊಳ್ಳುತ್ತಿದ್ದ ಅವನನ್ನು ಕೇಳಿದರು, 'ನೀನೆ ಏನು ಗಾಡಿಯ ರೈಕ್ವ' ಎಂದು. 'ಓಹೋ, ಹೌದಲ್ಲ,' ಎಂದ ಅವನು. ಅವನಲ್ಲಿಗೆ ಜಾನಶ್ರುತಿ ಓಡಿಬಂದ. ಆರುನೂರು ಗೋವುಗಳು, ಚಿನ್ನದ ಸರ, ಕುದುರೆ ಮತ್ತು ರಥ, ಎಲ್ಲಾ ತಂದಿದ್ದ. ಎಲ್ಲವನ್ನೂ ರೈಕ್ವನ ಮುಂದಿಟ್ಟು ಬಿನ್ನವಿಸಿಕೊಂಡ, "ನೀನು ಆರಾಧಿಸುವ ಪರಮ ತತ್ತ್ವವನ್ನು ನನಗೆ ಬೋಧಿಸು," ಎಂದು. ರೈಕ್ವ ಉಡುಗೊರೆಗಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ಜಾನಶ್ರುತಿ ಮತ್ತೆ ಅವನ ಬಳಿಗೆ ಬರುವಾಗ ಸಾವಿರ ಗೋವುಗಳನ್ನು ತಂದ. ಯಥಾಪ್ರಕಾರ ಚಿನ್ನದ ಸರ, ರಥ ಮತ್ತು ಕುದುರೆ ಸಹ ಇದ್ದವು. ಜೊತೆಗೆ ಅವನ ಮಗಳನ್ನೂ ಕರೆತಂದಿದ್ದ. ರೈಕ್ವನಿದ್ದ ಊರೂ ಸೇರಿದಂತೆ ಇವೆಲ್ಲವನ್ನೂ ಅವನು ರೈಕ್ವನಿಗೆ ಕೊಡಲು ಮುಂದಾದ. "ಎಲ್ಲಾ ತೆಗೆದುಕೋ, ಆ ನಿನ್ನ ರಹಸ್ಯ ಜ್ಞಾನವನ್ನು ನನಗೆ ಬೋಧಿಸು," ಎಂದ. ಬೇರೆ ಸಂಪತ್ತನ್ನು ಅಷ್ಟಾಗಿ ಲೆಕ್ಕಿಸದೆ ರೈಕ್ವ ಸುಂದರ ಯುವತಿಯ ಗಲ್ಲ ಎತ್ತಿ ಹೇಳಿದ, "ನಿನ್ನ ಸಂಪತ್ತಿನಿಂದ ಮೋಹಿತನಾಗಿ ನಾನು ನಿನಗೆ ಉಪದೇಶ ನೀಡುವುದಿಲ್ಲ, ಆದರೆ ಈ ಸುಂದರ ಯುವತಿಯ ಆಕರ್ಷಕ ಮುಖದಿಂದಾಗಿ ನಿನಗೆ ಬೋಧಿಸುತ್ತೇನೆ, ಬಾ" ಎಂದು. ಅವನು ಬೋಧಿಸಿದ್ದು ಪ್ರಾಕೃತಿಕ ಜ್ಞಾನವನ್ನು. ಸಮಾಜವು ವರ್ಗಗಳಾಗಿ ರೂಪುಗೊಂಡ ನಂತರವೂ ಪ್ರಾಕೃತಿಕ ಜ್ಞಾನ ಪ್ರಕ್ರಿಯೆಗೆ ತನ್ನದೇ ಮಹತ್ವವಿದ್ದಿತು.

ವಾಲ್ಟರ್ ರೂಬೆನ್ ಎಂಬ ವಿದ್ವಾಂಸನು ಉದ್ದಾಲಕ ಮತ್ತು ಯಾಜ್ಞವಲ್ಕ್ಯರನ್ನು ಎರಡು ಧ್ರುವಗಳೆಂದು ಗುರುತಿಸಿ ಚರ್ಚೆಯನ್ನು ಆರಂಭಿಸಿದ್ದ. ಭಾರತದಲ್ಲಿ ಗತಿತಾರ್ಕಿಕ ಚಿಂತನೆಯ ಪಿತಾಮಹ ಉದ್ದಾಲಕನೆಂದು ಅವನು ಪ್ರತಿಪಾದಿಸಿದ್ದಾನೆ. ಈ ಉದ್ದಾಲಕನು 'ಸತ್' ಎಂಬುದನ್ನು ವಿವರಿಸುವಾಗ ವಿಶ್ವದಲ್ಲಿ ಎಲ್ಲವೂ ಅದರಿಂದಲೇ ಪರಿಣಮಿಸಿವೆಯೆಂದು ಹೇಳಿ" ಎಲ್ಲವೂ ಶಾಶ್ವತ, ಏಕೆಂದರೆ ಸತ್ ಎಂಬುದು ಶಾಶ್ವತ; 'ಅಸತ್'ನಿಂದ 'ಸತ್' ಪರಿಣಮಿಸಲಾರದು" ಎಂದು ನಿರೂಪಿಸಿದ (ಛಾಂದೋಗ್ಯ ೬.೨.೨). ಆಧುನಿಕ ವಿಜ್ಞಾನಿಗಳು ಉದ್ದಾಲಕನ ಮಾತನ್ನೇ ಹೇಳಬೇಕು: ಭೌತವಸ್ತುವು ನಿತ್ಯ, ಅದಕ್ಕೆ ಆದಿ ಮತ್ತು ಅಂತ್ಯಗಳಿಲ್ಲ, ಅದು ಕೇವಲ ಸ್ವರೂಪವನ್ನಷ್ಟೆ ಬದಲಿಸಿಕೊಳ್ಳಬಹುದು, ಎಂದು. ಭಾರತದಲ್ಲಿ ಉದ್ದಾಲಕನ ಪರಂಪರೆಯು ವೈಚಾರಿಕತೆಗೆ ಅಡಿಪಾಯವಾಗಿದೆ. ಉದ್ದಾಲಕ ಮತ್ತು ಯಾಜ್ಞವಲ್ಕ್ಯ ಎರಡು ಪ್ರತ್ಯೇಕ ಚಿಂತನಾಮಾರ್ಗಗಳ ಪ್ರತಿಪಾದಕರು; ಉದ್ದಾಲಕನು ಭೌತವಾದದ ಪ್ರತಿನಿಧಿ, ಯಾಜ್ಞವಲ್ಕ್ಯನು ಭಾವನಾವಾದದ ಪ್ರತಿನಿಧಿ. ಇವರಿಬ್ಬರ ನಡುವೆ ಚಿಂತನಾ ಸಮರ ಪ್ರಾಚೀನ ಭಾರತದಲ್ಲಿ ಆರಂಭಗೊಂಡಾಗ ಇಲ್ಲಿನ ಸನ್ನಿವೇಶ ಏನಾಗಿತ್ತು? ಗಂಗಾನದಿಯ ಬಯಲಿನಲ್ಲಿ ಅಲ್ಲಲ್ಲಿ ಕೆಲವು ಸಣ್ಣ ರಾಜ್ಯಗಳಿದ್ದವು. ಅದಿನ್ನೂ ಕಬ್ಬಿಣದ ಯುಗ. ಈ ರಾಜ್ಯಗಳಿಂದ ಭಿನ್ನವಾಗಿ ಹತ್ತಾರು ಬುಡಕಟ್ಟುಗಳು ಎಲ್ಲೆಡೆ ಎಷ್ಟೋ ಕಾಲದಿಂದ ನೆಲೆನಿಂತಿದ್ದವು. ಬುಡಕಟ್ಟುಗಳಲ್ಲಿ ವರ್ಗವಿಭಜನೆ ಇರಲಿಲ್ಲ, ವರ್ಗ ಹೋರಾಟವಿರಲಿಲ್ಲ; ಆದರೆ ಹೊಸದಾಗಿ ಅಸ್ತಿತ್ವಕ್ಕೆ ಬಂದಿದ್ದ ಪ್ರಭುತ್ವಗಳಡಿ ಅವು ತಲೆಯೆತ್ತಿದ್ದವು. ಆದ್ದರಿಂದ ಅಲ್ಲಿ ಸೈದ್ಧಾಂತಿಕ ಜಗ್ಗಾಟವಿದ್ದಿತು, ಸ್ಪರ್ಧೆ ತಲೆದೋರಿತ್ತು. ವೈದಿಕ ಆಚರಣೆಗಳ ವಕ್ತಾರರ ಮತ್ತು ಅವರ ವಿರೋಧಿಗಳ ನಡುವಣ ಚರ್ಚೆಗಳಲ್ಲಿ ಇದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ವಿರೋಧಿಗಳು ಕಾಡುಗಳಲ್ಲೆಲ್ಲೋ ಆಶ್ರಮಗಳನ್ನು ಮಾಡಿಕೊಂಡಿದ್ದರು. ಅವರಿಗೆ ವೈದಿಕ ಆಚರಣೆಗಳು ಮಾನ್ಯವಲ್ಲ; ಇಂದ್ರನೊಬ್ಬ ಹಂತಕನೆಂದು ಬೇಕಾದರೆ ಅವರು ಹೇಳಿಬಿಡುತ್ತಿದ್ದರು. ವೈದಿಕ ದೇವತೆಗಳು ಬುಡಕಟ್ಟು ಜನರ ವಿನಾಶಕ್ಕೆ ಪ್ರೇರಣೆ ನೀಡುವಂಥವರೆಂದು ಅವರು ದೂಷಿಸುತ್ತಿದ್ದರು. ಯಾಜ್ಞವಲ್ಕ್ಯನಂಥವರು ವೈದಿಕ ಆಚರಣೆಗಳು, ಅವುಗಳಲ್ಲಿರುವ ಅನೇಕ ನಿಷೇಧಗಳು, ಇವನ್ನೆಲ್ಲಾ ಪ್ರತಿಭಟಿಸುತ್ತಿದ್ದಂಥವರು. ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವೆ ವಾಗ್ಯುದ್ಧಗಳು ಆಗಲೇ ಪ್ರಾರಂಭವಾಗಿದ್ದು. ಯಾಜ್ಞವಲ್ಕ್ಯ ಮುಂತಾದವರ ಚಿಂತನೆಗೆ ಪ್ರತಿಯಾಗಿ ವಿಜ್ಞಾನ ತನ್ನ ನಿಲುವನ್ನು ಗಟ್ಟಿಯಾಗಿ ಪ್ರಕಟಪಡಿಸಲಾರಂಭಿಸಿತ್ತು. ಉದಾಹರಣೆಗೆ, ಮತಧಾರ್ಮಿಕ ನಂಬಿಕೆಗಳ ವಿರುದ್ಧವಾಗಿ ವೈದ್ಯಕೀಯ; ಬ್ರಾಹ್ಮಣೀಯ ತತ್ವಕ್ಕೆ ಪ್ರತಿಯಾಗಿ ಭೌತವಾದ, ಹೀಗೆ. ಜೊತೆ ಜೊತೆಯಲ್ಲೇ ಖಗೋಳವಿಜ್ಞಾನ, ಭೌಗೋಳಿಕ ವಿಚಾರಗಳು, ಸಾಮಾಜಿಕ ನೀತಿ-ನಿಯಮಗಳು, ಎಲ್ಲಾ ಬೆಳೆದುಬರುತ್ತಿದ್ದವು.

ಒಟ್ಟಿನಲ್ಲಿ ಹೇಳುವುದಾದರೆ, ಪ್ರಾಚೀನ ಭಾರತದ ಇತಿಹಾಸದಲ್ಲಿ ಇದೊಂದು ನವೀನ ಮಾದರಿಯ ಅಂಕುರಕ್ಕೆ ಕಾರಣವಾಯಿತು. ಸರ್ವಾಂಗೀಣ ಚರ್ಚೆ ಅದರ ಮುಖ್ಯ ಲಕ್ಷಣ. ಎಲ್ಲವನ್ನೂ ಪ್ರಶ್ನಿಸುವ ಮನೋವೇದಿಕೆ ರಚನೆ ಗೊಳ್ಳುವ ಸಂದರ್ಭ ಅದು. ಇದರ ಆಧಾರದ ಮೇಲೆಯೇ ಭೌತವಾದ ಮತ್ತು ಭಾವನಾವಾದಗಳ ನಡುವೆ ಘರ್ಷಣೆ ಸಾಧ್ಯವಾದದ್ದು. ಅಂದರೆ, ಇಂತಹ ಚಿಂತನಾಸಮರಕ್ಕೆ ಸಾಮಾಜಿಕ ಮತ್ತು

ಸೈದ್ಧಾಂತಿಕ ತಳಹದಿಯೊಂದಿತ್ತು, ಎಂದರ್ಥ. ವಿಜ್ಞಾನವು ಅಗಾಧವಾಗಿ ಬೆಳೆದುಬಿಟ್ಟಿತ್ತೆಂದು ಭ್ರಮಿಸಬೇಕಾಗಿಲ್ಲ, ನಿಜ; ಆದರೆ ಉದ್ದಾಲಕನ ಚಿಂತನೆಯಲ್ಲಿ ವೈಜ್ಞಾನಿಕ ಪದ್ಧತಿಯ ಮೂಲದ್ರವ್ಯ ಸ್ಪಷ್ಟವಾಗಿ ಗೋಚರಿಸುತ್ತದೆ. ಅವನ ವಾದವಿಧಾನ, ಪ್ರಯೋಗಕ್ಕೆ ಅವನು ನೀಡುವ ಮಹತ್ವ, ತರ್ಕಶುದ್ಧವಾದ ಉಪಮಾನ ಮಾದರಿಗಳು, ಇವೆಲ್ಲಾ ಉನ್ನತಮಟ್ಟದವು. ಉತ್ತರೋತ್ತರ, ಆ ವಿಧಾನವೇ ತರ್ಕಶಾಸ್ತ್ರದಲ್ಲಿ ಅನುಮಾನ, ದೃಷ್ಟಾಂತ, ಮುಂತಾದ ರೂಪಗಳನ್ನು ತಳೆಯಿತು. ಇದೆಲ್ಲಾ ಕ್ರಿ.ಪೂ. ಆರನೆಯ ಶತಮಾನಕ್ಕೂ ಮುಂಚಿನ ವಿದ್ಯಮಾನ. ಉತ್ಪಾದನಾ ವಿಧಾನದಲ್ಲಿ ಹೊಸ ಆವಿಷ್ಕಾರಗಳ ಯುಗ ಅದು; ಪ್ರಭುತ್ವ ವ್ಯವಸ್ಥೆ ಬೇರುಬಿಡುತ್ತಿದ್ದ ಕಾಲ, ಬುಡಕಟ್ಟು ಜೀವನದ ಅವಶೇಷಗಳ ಮೇಲೆ ಹೊಸ ವ್ಯವಸ್ಥೆ ಮೂಡುತ್ತಿದ್ದ ಕಾಲ. ವ್ಯಾಪಾರ, ಯುದ್ಧ, ಎರಡೂ ಜನರನ್ನು ಸಂಕಷ್ಟಕ್ಕೆ ಗುರಿ ಮಾಡುತ್ತಿದ್ದವು; ಖಾಸಗಿ ಆಸ್ತಿಯ ಒಡೆತನಕ್ಕಾಗಿ ಎಲ್ಲಿಲ್ಲದ ದುರಾಸೆ ಮತ್ತು ಘರ್ಷಣೆ. ಅಷ್ಟಾಗಿಯೂ ಉತ್ಪಾದನಾ ಸಾಧನಗಳ ಬೆಳವಣಿಗೆಯು ಎಲ್ಲರಿಗೂ ಎಲ್ಲವನ್ನೂ ಪೂರೈಸುವಷ್ಟು ಸಮರ್ಥವಾಗಿರಲಿಲ್ಲ. (ಇಂದಿಗೂ ಅದು ನಿಜವೇ ತಾನೆ!) ಆ ಸಾಮರ್ಥ್ಯ ದೊರೆಯಲು ಉತ್ಪಾದನಾ ಶಕ್ತಿ ಇನ್ನೂ ಹಿಗ್ಗಬೇಕಾಗಿತ್ತು. ಆದರೆ ಅದಕ್ಕೆ ಮುಂಚೆ ಎಲ್ಲರೂ ಸಮಾಧಾನದಿಂದ ಕಾಯುತ್ತಿರುತ್ತಾರೆಯೆ? ಸಾಧ್ಯವಾದಾಗೆಲ್ಲಾ ಬೇರೆಯವರ ಶೋಷಣೆ ಮಾಡಿ ತಮ್ಮ ಉತ್ತಮ ಭವಿಷ್ಯ ಕಾದಿರಿಸಿಕೊಳ್ಳುವ ತವಕ ವ್ಯಾಪಕ ವಾಯಿತು. ಬುದ್ಧ ಕಾಣಿಸಿಕೊಂಡಿದ್ದು ಅಂತಹ ಹಿನ್ನೆಲೆಯಲ್ಲಿ. ಅವನ ಸಮಕಾಲೀನ ತತ್ತ್ವಶಾಸ್ತ್ರಜ್ಞರು ಗೊಂದಲದ ಗೂಡುಗಳಲ್ಲಿ ಸಂಭ್ರಮಿಸುತ್ತಿದ್ದರು. ಮಕ್ಖಲಿ ಗೋಸಾಲ, ಪೂರಣ ಕಸ್ಸಪ, ಅಜಿತ ಕೇಸಕಂಬಲಿ, ಪಕುಧ ಕಚ್ಚಾಯನ, ಸಂಜಯ ಬೇಲಟ್ಠಿಪುತ್ತ, ಮುಂತಾದವರ ಚಿಂತನೆ ಇದಕ್ಕೆ ಉದಾಹರಣೆ. ಅವರೆಲ್ಲಾ ಸಂಪ್ರದಾಯ ವಿರೋಧಿ ನಿಲುವಿನವರೇ, ಆದರೆ ಅವರಲ್ಲಿ ಒಮ್ಮತವಿರಲಿಲ್ಲ. ಬುದ್ಧನಂತೆ ಮಕ್ಖಲಿ ಗೋಸಾಲ ಸಹ ವಜ್ಜಿ ಬುಡಕಟ್ಟಿನವರ ವಿನಾಶವನ್ನು ಕಂಡಿದ್ದವನೇ. ಆದರೆ ಆ ವಿನಾಶಕ್ಕೆ 'ನಿಯತಿ' ಅಥವಾ ಹಣೆಬರಹವೇ ಕಾರಣವೆಂದು ಅವನು ತರ್ಕಿಸಿದ.

ಬುದ್ಧನು ವಜ್ಜಿಗಳ ಸಾಮಾಜಿಕ ವ್ಯವಸ್ಥೆಯನ್ನು ತನ್ನ ಮಾದರಿಯಾಗಿ ಕಂಡುಕೊಂಡಿದ್ದ. ಆದರೆ ಆ ಮಾದರಿ ಅವನ ಕಣ್ಣಮುಂದೆ ಮುರಿದುಬಿದ್ದಿತ್ತು. ಅಂತಹ ಪ್ರಚಂಡ ಚಾರಿತ್ರಿಕ ಬದಲಾವಣೆಯನ್ನು ನಿಗ್ರಹಿಸಲು ಸಾಧ್ಯವಿರಲಿಲ್ಲ, ಆದ್ದರಿಂದ ಮಕ್ಖಲಿ ಗೋಸಾಲನಂಥವರು ಹತಾಶೆಯಿಂದ ಹುಚ್ಚರಂತಾಗುವ ಸಂದರ್ಭವೇರ್ಪಟ್ಟಿತ್ತು. ಬೇರೆಷ್ಟೋ ತತ್ತ್ವಶಾಸ್ತ್ರಜ್ಞರ ಪಾಡೂ ಇದೇ ಆಗಿತ್ತು. ಅದೆಷ್ಟರಮಟ್ಟಿಗಿತ್ತೆಂದರೆ ಪೂರಣ ಕಸ್ಸಪನು ಒಳಿತು, ಕೆಡುಕು, ಎಂಬುವ ಭೇದವನ್ನೇ ನಿರಾಕರಿಸುವ ಹಂತವನ್ನು ತಲುಪಿದ್ದ. ನೈತಿಕತೆಗೆ ಅರ್ಥವಿಲ್ಲವೆಂಬ ಮಾತನ್ನು ಅಜಿತ ಕೇಸಕಂಬಲಿ ಆಡಿದ. ಒಂದು ವಿಶ್ವದೃಷ್ಟಿಗೂ ಇನ್ನೊಂದಕ್ಕೂ ಅಂತಹ ವ್ಯತ್ಯಾಸವೇನೂ ಇಲ್ಲವೆಂದು ಸಂಜಯ ಬೇಲಟ್ಠಿಪುತ್ತ ಉದ್ಗರಿಸಿದ. ಅವರ ನಡುವೆ ಮಹಾವೀರ ಸ್ವಲ್ಪ ಗಟ್ಟಿಗನಂತೆ ಕಂಡು ಬಂದ. ದೇವರ ಅಸ್ತಿತ್ವವನ್ನು ನಿರಾಕರಿಸಿ, ಮಾನವನು 'ಜಿನ'ನಾಗಲು ಸಾಧ್ಯವಿದೆಯೆಂದು ಅವನು ಘೋಷಿಸಿದ; ಆದರೆ ಅವನು ಶುದ್ಧವಾದ ಆತ್ಮನ ಬಗ್ಗೆ ಬಹಳವಾಗಿ ತಲೆಕೆಡಿಸಿಕೊಂಡ. ಬುದ್ಧ ಮಾತ್ರ ಒಂದು ರೀತಿಯ ಯಶಸ್ಸನ್ನು ಪಡೆಯಲು ಅವನ 'ಸಂಘ'ದ ಕಲ್ಪನೆ ಕಾರಣವಾಯಿತು. ಅದು ವರ್ಗಪೂರ್ವ ವ್ಯವಸ್ಥೆಯನ್ನು ತನ್ನ ಮಾದರಿಯನ್ನಾಗಿ ಸ್ವೀಕರಿಸಿತ್ತು. ಭಿಕ್ಖುಗಳು ಹೊರಗಿನ ವ್ಯವಸ್ಥೆಯಿಂದ ದೂರವಿದ್ದು, ಪ್ರಾಚೀನ ಬುಡಕಟ್ಟು ಮಾದರಿಯಲ್ಲಿ ಜೀವಿಸಬೇಕೆಂದು ಬುದ್ಧ ಬೋಧಿಸಿದ. ಬೇರೆ ತತ್ತ್ವಶಾಸ್ತ್ರಜ್ಞರು ಕಾಣದ ಬೆಳಕೊಂದನ್ನು ವರ್ಗರಹಿತ ಸಮಾಜದ ಸ್ಥಾಪನೆಯಲ್ಲಿ ಬುದ್ಧನು ಕಂಡುಕೊಂಡ, ಆದರೆ ಅವನು ಎದುರಿಸಬೇಕಾಗಿ ಬಂದ ದ್ವಂದ್ವ ಅಪಾರವಾಗಿತ್ತು. ಒಂದುಕಡೆ ಅವನಿಗೆ ವರ್ಗಪೂರ್ವ ಸಮಾಜದ ಮೌಲ್ಯಗಳು ಅಮೋಘವೆನಿಸಿ ಅದರ ಆಧಾರದ ಮೇಲೆ ಬೌದ್ಧಸಂಘವನ್ನು ರೂಪಿಸಿದ, ಆದರೆ ಇನ್ನೊಂದು ಕಡೆ ಕಟುವಾಸ್ತವದ ಒತ್ತಡ ಅವನನ್ನು ಬಾಧಿಸುತ್ತಿತ್ತು. ರಾಜಪ್ರಭುತ್ವಗಳು ಹಲವೆಡೆ ತಲೆಯೆತ್ತುತ್ತಿದ್ದದ್ದು ವಸ್ತುಸ್ಥಿತಿ. ಅವಕ್ಕೆ ಒಂದು ದರ್ಶನದ ಅಗತ್ಯವಿತ್ತು. ಶಾಂತಿ ಮತ್ತು ಅಹಿಂಸೆಯ ಮೌಲ್ಯಗಳನ್ನು ಆ ಪ್ರಭುತ್ವಗಳು ಸ್ವೀಕರಿಸಿದ್ದಕ್ಕೆ ಕಾರಣ ಅವುಗಳಲ್ಲಿ ನಿಷ್ಠೆ ಇದ್ದಿತೆಂಬುದಲ್ಲ; ಅವಿಲ್ಲದೆ ಪ್ರಭುತ್ವ ಸ್ಥಿರವಾಗಲಾರದೆಂಬ ತಿಳಿವಳಿಕೆ ಪ್ರಭುಗಳಿಗಿದ್ದಿತು! ಮಗಧ, ಕಾಶಿ, ಕೋಸಲ ಮುಂತಾದ ಪ್ರಭುತ್ವಗಳು ಬುದ್ಧನನ್ನು ಬೆಂಬಲಿಸಿ ಆದರಿಸಲು ಅದೇ ಕಾರಣ.

ಆದರೆ ಇದಷ್ಟೇ ದರ್ಶನವೆನಿಸಿಕೊಳ್ಳಲಿಲ್ಲ. ಉಪನಿಷತ್ತುಗಳ ಕಾಲದಲ್ಲೇ ಚಿಗುರೊಡೆದಿದ್ದ ದಾರ್ಶನಿಕ ಚಿಂತನೆಯು ಭಾರತದಲ್ಲಿ ವಿಪುಲವಾಗಿ ಬೆಳೆಯಿತು. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸಾ, ಎಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಉದ್ದಾಲಕನ ಪ್ರಾಕೃತಿಕ ಪರಂಪರೆಯಲ್ಲಿ ಮುಂದುವರೆದವು. ಆದರೆ ಉದ್ದಾಲಕನ ಕಾಲದ ವರ್ಗರಹಿತ ಸಮಾಜದ ಸ್ಥಾನದಲ್ಲಿ ವರ್ಗಾಧಾರಿತ ಪ್ರಭುತ್ವಗಳು ಅಸ್ತಿತ್ವಕ್ಕೆ ಬಂದಿದ್ದವಾದ್ದರಿಂದ ಹಿಂದಿನ ಪ್ರಾಕೃತಿಕ ಚಿಂತನೆಯು ಸ್ವಲ್ಪ ನಿಸ್ಸಾರಗೊಂಡಿತು; ಅದರಿಂದಾಗಿ ಹಿಂದಿನ ಪ್ರಖರತೆಯ ಜಾಗದಲ್ಲಿ ಅನುಕೂಲಸಿಂಧು ತತ್ವಗಳು ಮೆರೆದವು. ಇದಕ್ಕೆ ಅಪವಾದವಾಗಿ ಸ್ಥಿರವಾಗಿ ನಿಂತಿದ್ದು ಚಾರ್ವಾಕ ಚಿಂತನೆಯೊಂದೇ. ಅದು ತನ್ನ ಪ್ರಾಕೃತಿಕ ಚಿಂತನಾ ವಿಧಾನವನ್ನು ಮಸುಕುಗೊಳಿಸಲು ಸರ್ವಥಾ ನಿರಾಕರಿಸಿತು. ಸಾಮಾಜಿಕ-ಆರ್ಥಿಕ ಕ್ಷೇತ್ರದಲ್ಲಿನ ಬದಲಾವಣೆಯು ಚಿಂತನಾವಿಧಾನವನ್ನು ಮಂಕುಗೊಳಿಸ ಬೇಕಿಲ್ಲವೆಂಬುದಕ್ಕೆ ಅದೊಂದು ಅದ್ಭುತ ನಿದರ್ಶನ. ಈ ಪರಂಪರೆಗೆ ಚಾರ್ವಾಕರಂತೆ ಇನ್ನೂ ಅನೇಕರು ಬದ್ಧರಾಗಿಯೇ ಉಳಿದದ್ದು ಭಾರತದ ಇತಿಹಾಸದಲ್ಲಿ ಗಮನಾರ್ಹವಾದ ಸಂಗತಿ. ರಾಜಪ್ರಭುತ್ವಗಳು ಅಳಿದವು, ಉಳಿದವು, ಬದಲಾದವು. ಮೌರ್ಯರು, ಕುಶಾನರು, ಗುಪ್ತರು, ಹೀಗೆ ಅನೇಕ ಸಂತತಿಗಳು ಆಳ್ವಿಕೆ ನಡೆಸಿದವು. ಆದರೆ ಕೌಟಿಲ್ಯ ಮತ್ತು ವಾತ್ಸ್ಯಾಯನರಂತಹ ಚಿಂತಕರು ಪ್ರಭುತ್ವ ಹಾಗೂ ಸಮಾಜದ ಒಳಹೊರಗುಗಳನ್ನು ತಾರ್ಕಿಕ ವಸ್ತುನಿಷ್ಠ ನೆಲೆಯಿಂದಲೇ ಗುರುತಿಸಿದರು. ಕುಶಾನರ ಕಾಲದಲ್ಲಿ ಪ್ರಾಕೃತಿಕ ಚಿಂತನಾಪರಂಪರೆಗೆ ಧಕ್ಕೆಯುಂಟಾದ್ದು ವಾಸ್ತವ. ಆದರೆ ಗುಪ್ತರ ಹಾಗೂ ಹರ್ಷನ ಕಾಲದಲ್ಲಿ ಅದು ಪುನಶ್ಚೇತನ ಪಡೆಯಿತು. ಬೌದ್ಧರ ವಜ್ರಯಾನ ಅಥವಾ ಸಹಜಯಾನ, ೮೪ ಸಿದ್ಧಾಚಾರ್ಯರ ಜಾಡು, ಇವೆಲ್ಲಾ ಪ್ರಾಕೃತಿಕ ಚಿಂತನಾ ಪರಂಪರೆಯ ಮಾದರಿಯನ್ನು ಉಳಿಸಿಕೊಂಡವು.

ಈ ಮಾದರಿಯು ಪ್ರಾಚೀನ ಭಾರತದ ವೈಜ್ಞಾನಿಕ ಆವಿಷ್ಕಾರಗಳಿಗೆ ಭದ್ರವಾದ ಅಡಿಪಾಯವನ್ನೊದಗಿಸಿ ಕೊಟ್ಟಿತು. ಆ ಅಡಿಪಾಯವನ್ನು ಉಪೇಕ್ಷಿಸಿದಾಗ ವಿಜ್ಞಾನದ ಅವನತಿಯೂ ಆರಂಭಗೊಂಡಿತು. ಆಚಾರ್ಯ ಪ್ರಫುಲ್ಲ ಚಂದ್ರ ರಾಯ್ ಇದನ್ನು ತಮ್ಮ ೧೯೧೮ರ ಒಂದು ಉಪನ್ಯಾಸದಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ. ಅವರು ಭಾರತೀಯ ರಸಾಯನಶಾಸ್ತ್ರದ ಕ್ಷೇತ್ರದಲ್ಲಿ ಅಪ್ರತಿಮ ರೆಂಬುದು ಎಲ್ಲರಿಗೂ ತಿಳಿದ ವಿಷಯ. ಅವರ ಉಪನ್ಯಾಸದ ಕೆಲವು ಭಾಗಗಳನ್ನು ಮಾತ್ರವೇ ಇಲ್ಲಿ ಉದ್ಧರಿಸಲು ಅವಕಾಶವಿದೆ: ''ನಮ್ಮ ದೇಶದ ಬೌದ್ಧಿಕ ಬೆಳವಣಿಗೆಯ ಚರಿತ್ರೆಯಲ್ಲಿ ಮರೆತುಬಿಟ್ಟಿರುವ ಒಂದು ಅಧ್ಯಾಯವು ಪ್ರಾಯೋಗಿಕ ವಿಜ್ಞಾನದ ಅಭ್ಯಾಸಕ್ಕೆ ಸಂಬಂಧಿಸಿದೆ. ನಮ್ಮ ದೇಶದ ಜನ ಕನಸಿನ ಸಾಮ್ರಾಜ್ಯದಲ್ಲಿ ವಿಹರಿಸುವಂಥವರೆಂದು ಸಾಮಾನ್ಯವಾಗಿ ಭಾವಿಸಿಬಿಟ್ಟಿದ್ದಾರೆ. ಅವರಿಗೆ ಅಗೋಚರ ವಿಷಯದಲ್ಲಿ ಕಲ್ಪನೆಗಳನ್ನು ಕಟ್ಟಿಕೊಳ್ಳುವ ಹವ್ಯಾಸ ವಿಪರೀತವಾಗಿದೆಯೆಂದು ಹೇಳುವುದು, ಇಲ್ಲವೆ ಅವರು ಅಧ್ಯಾತ್ಮ ಪ್ರಿಯರು ಎನ್ನುವುದು, ಸರ್ವೇ ಸಾಮಾನ್ಯ. ಆದರೆ ಅವರು ಪ್ರಾಯೋಗಿಕ ವಿಜ್ಞಾನಗಳ ಕ್ಷೇತ್ರದಲ್ಲಿ ಪಳಗಿದ ಕೈಗಳವರೆಂಬುದನ್ನು ಗುರುತಿಸುವುದು ಈಚಿನ ದಿನಗಳಲ್ಲಿ ವಿರಳವಾಗಿಹೋಗಿದೆ. ವಿಜ್ಞಾನಕ್ಕೆ ಪ್ರಯೋಗಗಳು ಮತ್ತು ಅವಲೋಕನಗಳು ಮೂಲಭೂತ ಆಧಾರ. ನಮ್ಮ ದೇಶದ ರಸಾಯನಶಾಸ್ತ್ರದ ಇತಿಹಾಸದಲ್ಲಿ ಕೆಲವು ಗ್ರಂಥಗಳು ಗಮನಾರ್ಹವಾಗಿವೆ. ಅವು ಅಮೂಲ್ಯ ಗ್ರಂಥಗಳು, ನಿಷ್ಕೃಷ್ಟ ವಿಧಾನಗಳನ್ನು ವಿಧಿಸುವಂಥವು. ರಾಮಚಂದ್ರನ ರಸೇಂದ್ರ ಚಿಂತಾಮಣಿ ಮತ್ತು ಯಶೋಧರನ ರಸಪ್ರಕಾಶ ಸುಧಾಕರ ಎರಡೂ ಕ್ರಿ.ಶ. ೧೩ ಅಥವಾ ೧೪ನೆಯ ಶತಮಾನಕ್ಕೆ ಸೇರಿದವು. ಅವು ಉಲ್ಲೇಖಿಸುವ ವೈಜ್ಞಾನಿಕ ಪದ್ಧತಿ ಸಾರವತ್ತಾಗಿದೆ.''



ವಿಜ್ಞಾನವು ಸಹಜವಾಗಿಯೇ ಪ್ರಾಕೃತಿಕವಾದ್ದು. ಪ್ರಕೃತಿ ಇಲ್ಲದೆ ವಿಜ್ಞಾನವಿಲ್ಲ ಮತ್ತು ವಿಜ್ಞಾನವಿಲ್ಲದೆ ಪ್ರಕೃತಿಯ ಜ್ಞಾನ ಸಾಧ್ಯವಿಲ್ಲ. ಇದನ್ನು ಅತ್ಯಂತ ನಿಖರವಾಗಿ ಗುರುತಿಸಿದವರಲ್ಲಿ ಪಿ. ಸಿ. ರಾಯ್ ಪ್ರಮುಖರು. ಭಾರತೀಯ ವಿಜ್ಞಾನದ ಇತಿಹಾಸಕಾರರಲ್ಲಿ ಅವರು ಅಗ್ರಗಣ್ಯರು. ಅವರಿಗಿದ್ದ ಎದೆಗಾರಿಕೆ ಅಸಾಧಾರಣವಾದ್ದು. ಅವರು ಹೇಳಿದ್ದ ಈ ಮಾತುಗಳನ್ನು ಗಮನಿಸಬಹುದು: ''ನಮ್ಮಲ್ಲಿ ವೇದಾಂತ ದರ್ಶನವಿದೆ. ಅದನ್ನು ಶಂಕರ ಮಾರ್ಪಡಿಸಿದ, ವಿಶಾಲಗೊಳಿಸಿದ. ಭೌತಿಕ ಪ್ರಪಂಚವು ಅಸತ್ಯವೆಂದು ಆತನ ಅದ್ವೈತ ಪ್ರತಿಪಾದಿಸಿದೆ. ನಮ್ಮ ದೇಶದಲ್ಲಿ ಭೌತ ವಿಜ್ಞಾನವು ಅಪಯಶಸ್ಸಿಗೆ ಗುರಿಯಾಗಲು ಅದೂ ಒಂದು ಮಹತ್ವದ ಕಾರಣ. ಶಂಕರನು ಕಣಾದ ಮತ್ತು ಅವನ ತತ್ತ್ವಚಿಂತನೆಯನ್ನು ಅತ್ಯಂತ ಕಟುವಾಗಿ ಟೀಕಿಸಿದ್ದಾನೆ.'' ಪ್ರಾಚೀನ ಗ್ರೀಸಿನಲ್ಲಿ ಪ್ಲೇಟೊ ಎಂಬ ಭಾವನಾವಾದಿ ತತ್ತ್ವಶಾಸ್ತ್ರಜ್ಞನು ಡಿಮಾಕ್ರಿಟಸ್‌ನ ಅಣು ಸಿದ್ಧಾಂತವನ್ನು ಉಗ್ರವಾಗಿ ವಿರೋಧಿಸಿದ್ದುದನ್ನು ಇದು ನೆನಪಿಸುತ್ತದೆ. ಅಣುಸಿದ್ಧಾಂತವನ್ನು ಬಹಿಷ್ಕರಿಸಬೇಕೆಂದು ಪ್ಲೇಟೊ ಆಗ್ರಹಿಸಿದ್ದ ಪ್ರಾಚೀನ ಅಯೋನಿಯಾದಲ್ಲಿ ವಿಕಾಸಗೊಳಿಸಲಾಗಿದ್ದ ಪ್ರಕೃತಿ ವಿಜ್ಞಾನದ ದೀಪವನ್ನು ನಂದಿಸಲು ಅವನು ಹಾತೊರೆಯುತ್ತಿದ್ದ. ವಿಶ್ವವನ್ನು ಅಸತ್ಯವೆಂದು ಉಗ್ರವಾಗಿ ಪ್ರತಿಪಾದಿಸುವ ನಮ್ಮ ದೇಶದ ಭಾವನಾವಾದಿಗಳನ್ನು ರಾಯ್ ಟೀಕಿಸಿದ್ದು ಬಹುಮಟ್ಟಿಗೆ ಸರಿಯಾಗಿಯೇ ಇದೆ. ಆ ಭಾವನಾವಾದಕ್ಕೆ ಪುಷ್ಟಿ ದೊರೆತದ್ದು ಪ್ರಕೃತಿ ವಿಜ್ಞಾನದ ಪರಂಪರೆಯನ್ನು ತುಳಿದುಹಾಕುವ ಪ್ರಯತ್ನದಿಂದ. ಅದೊಂದು ಪ್ರಮುಖ ಸೈದ್ಧಾಂತಿಕ ಅಂಶ. ನಮ್ಮ ಸಾಂಸ್ಕೃತಿಕ ಇತಿಹಾಸದಲ್ಲಿ ಹೀಗೆ ವೈಜ್ಞಾನಿಕ ಸತ್ವವನ್ನು ಹೊಸಕಿಹಾಕುವ ಪ್ರಯತ್ನ ನಡೆದಿತ್ತು. ಅದಕ್ಕೆ ಇಂಬುಕೊಟ್ಟ ತತ್ತ್ವಶಾಸ್ತ್ರವು ದೈಹಿಕ ಶ್ರಮವನ್ನು ನಿಕೃಷ್ಟವಾಗಿ ಕಂಡಿತು ಮತ್ತು ವಿಜ್ಞಾನವನ್ನು ಅಲ್ಲಗಳೆಯಿತು. ನಮ್ಮ ದೇಶದ ಜಾತಿ ವ್ಯವಸ್ಥೆಯೂ ಅದಕ್ಕೆ ಅವಕಾಶ ಕಲ್ಪಿಸಿಕೊಟ್ಟಿತು. ಪ್ರಾಕೃತಿಕ ವಿಜ್ಞಾನವನ್ನು ತೊರೆದು ಶುದ್ಧಾತ್ಮನ ಗುಂಗಿನಲ್ಲಿ ಮೈಮರೆಯುವುದು ಒಂದು ಕ್ರೂರ ವಂಚನೆ. ಅದನ್ನೆಸಗುವವರು ಎಣಿಕೆಗೆ ಸಿಗುವಷ್ಟು ಮಂದಿ ಸಾಮಾಜಿಕ ಪರತಂತ್ರ ಜೀವಿಗಳು, ಆದರೆ ಅದರಿಂದ ಶೋಷಣೆಗೆ ಗುರಿಯಾಗುವುದು ಇಡೀ ಜನಸಮುದಾಯ. ಇದನ್ನು ಬೇರೆ ಮಾತುಗಳಲ್ಲಿ ಹೇಳಬಹುದಾದರೆ ಶುದ್ಧಾತ್ಮ, ಭಾವನಾವಾದ, ಪ್ರಕೃತಿಯನ್ನು ನಿರಾಕರಿಸುವ ತತ್ತ್ವಶಾಸ್ತ್ರ, ಇತ್ಯಾದಿ ಯಾವ ಪದಪ್ರಯೋಗ ಮಾಡಿದರೂ ಸರಿ, ಅದಕ್ಕೆ ನಿರ್ದಿಷ್ಟವಾದ ರಾಜಕೀಯ ಧೋರಣೆ ಉಂಟು. ವರ್ಗಸಮಾಜದಲ್ಲಿ ಇದು ಹಠಾತ್ತನೆ ಅಪ್ರಸ್ತುತವಾಗಿ ಬಿಡುವುದಿಲ್ಲ. ಆದರೆ ಆ ದಿಕ್ಕಿನಲ್ಲಿ ಪ್ರಜ್ಞಾವಂತ ಜನ ಚಿಂತಿಸುತ್ತಾರೆ, ಕ್ರಿಯಾಶೀಲರಾಗುತ್ತಾರೆ.

**ಪ್ರೊ|| ಒ. ಪಿ. ಜಯಸ್ವಾಲ್**
ನಿವೃತ್ತ ಇತಿಹಾಸ ಪ್ರಾಧ್ಯಾಪಕರು, ಪಾಟ್ನಾ ವಿಶ್ವವಿದ್ಯಾಲಯ
ಸದಸ್ಯರು, ಭಾರತೀಯ ಇತಿಹಾಸ ಸಂಶೋಧನಾ ಮಂಡಲಿ
ನಂ. ೬, ಮೈತ್ರಿ ಶಾಂತಿ ಭವನ, ಬಿ. ಎಂ. ದಾಸ್ ರಸ್ತೆ, ಪಾಟ್ನಾ - ೮೦೦ ೦೦೪



# ನೀತಿ

(ಜನಪದರ ಕ್ಷಮೆ ಕೋರಿ)

ಅತ್ತೀಯ ಮನಿಯಾಗ ಗತ್ತೀಲೆ ಇರಬೇಕು
ಅತ್ತೆಗೂ ಮೊದಲು ಉಣಬೇಕು। ನನ ಮಗಳ।
ಹೆತ್ತವ್ವನ ಹೆಸರು ಮೆರೀಬೇಕು ॥

ಅತ್ತೆ ಮಾವರನಂಜಿಸಿ ಸುತ್ತೇಳು ನೆರೆಯಂಜಿಸಿ
ಮತ್ತೆ ಆಳುವ ದೊರೆಯಂಜಿಸಿ। ನನ ಮಗಳ।
ಅತ್ತೀಯ ಮನಿಯಾಗ ಆಳವ್ವ ॥

ಅತ್ತೆ ಮಾವನ ಪಾದ ಭಾವ ಮೈದುನ ಪಾದ
ಮತ್ತೆ ಗಂಡನ ಕರಿಪಾದ। ನನ ಮಗಳ।
ಹಸ್ತದಿ ಎಂದೂ ಹಿಡಿಬ್ಯಾಡ ॥

ನೆರೆಮನೆಗೆ ಕರಿಮಾರಿ ನೀನಾಗು ಮಗಳೆ
ಮನಿಯಾಗ ಒಂದಾಗಿ ಇರಬ್ಯಾಡ। ನನ ಮಗಳ।
ತುಂಬಿರಲು ಮನೆಯ ಬಿಡಬ್ಯಾಡ ॥

ಅತ್ತೆ ಮನಿಗ್ಹೋಗುವ ಮುತ್ತೈದಿ ಮಗಳೀಗೆ
ಮತ್ತೊಂದ್ಹೇಳೂದ ಮರತೇನ। ನನ ಮಗಳ।
ಅತ್ತೆಯ ಮಾತು ಕೇಳಬ್ಯಾಡ ॥

* * *

ಜೂಜಾಡಿ ಕೌರವರು ರಾಜ್ಯವ ಗೆದ್ದರು
ಜೂಜಾಡಿ ಕಲಿಯು ಮರೆದನು। ನನ ಮಗನ।
ಜೂಜಿನ ಆಟ ಬಿಡಬ್ಯಾಡ ॥

ಆಡೆರೆ ಬಾ ಕಂದ ಅಂಗಾತ ಕೆಡಿವೇನ
ತೆಂಗಿನ ಗರಿಯ ಒಣ ಬಡಗಿ। ಮುರಕೊಂಡು।
ಮಂಡೀಯ ಕಾಲ ಮುರಿದೇನ ॥

ರೊಕ್ಕವ ಕೊಡು ಶಿವನೆ ಮತ್ತೊಂದ ನಾನೊಲ್ಲೆ
ಹತ್ತು ಮಂದ್ಯಾಗ ಮಿರಿಮಿರಿ। ಮಿರುಗುವ।
ಗತ್ತು ಗೈರತ್ತು ಕೊಡು ಶಿವನೆ ॥

**ಬಸವರಾಜ ವೈ. ಐನಾಪೂರ**
ಶಿಕ್ಷಕರು, ಸರ್ಕಾರಿ ಪ್ರಾಥಮಿಕ ಶಾಲೆ, ಬಳವಾಡ, ಅಥಣಿ ತಾಲೂಕು, ಬೆಳಗಾವಿ ಜಿಲ್ಲೆ

# ದಿನಕರ ದೇಸಾಯಿ ಕಾವ್ಯದಲ್ಲಿ ಜನಪರ ಚಿಂತನೆ

ಡಾ|| ಎಸ್. ಪ್ರಸಾದಸ್ವಾಮಿ



ವಿದ್ಯಾರ್ಥಿಯಾಗಿದ್ದಾಗಲೇ ಕವಿಯಾಗಿ ಹೆಸರಾದವರು ದಿನಕರ ದೇಸಾಯಿ. ಸ್ವಾತಂತ್ರ್ಯ ಪೂರ್ವದ ಕಾಲಘಟ್ಟ ಮತ್ತು ನಂತರದ ಅವಧಿ ಅವರ ಕವಿತೆಗಳ ವಸ್ತುವನ್ನು ಪ್ರಭಾವಿಸಿದೆ. ಸಮತಾವಾದ, ಸಮಾಜವಾದ, ಗಾಂಧೀವಾದ ಅವರ ಅಭಿವ್ಯಕ್ತಿಯಲ್ಲಿ ಕಾಣಿಸಿವೆ. ಅವರ ಮೊದಲ ಕವನ ಸಂಕಲನ 'ಕವನ ಸಂಗ್ರಹ'. ಉಳಿದವು ಹೂಗೊಂಚಲು, ದಾಸಾಳ, ಮಕ್ಕಳ ಗೀತಗಳು, ಮಕ್ಕಳ ಪದ್ಯ, ಮಕ್ಕಳ ಪದ್ಯಗಳು, ದಿನಕರನ ಚೌಪದಿ ಇತ್ಯಾದಿ.

ಕುವೆಂಪು, ಬೇಂದ್ರೆಯವರ ಪ್ರಭಾವದ ದಟ್ಟಣೆಯಿಂದ ದೇಸಾಯಿ ಭಿನ್ನರಾಗಲು ಯತ್ನಿಸಿರುವುದು ಗಮನಾರ್ಹ. ಹಾಗಾಗಿ ತಮ್ಮ ತಾತ್ವಿಕತೆಯನ್ನು, ಕವಿತೆಗಳ ರಾಚನಿಕ ಸ್ವರೂಪವನ್ನು, ಅವುಗಳ ಸಾಫಲ್ಯವನ್ನು ಕುರಿತು ಅವರೇ ಹೇಳಿಕೊಂಡಿರುವುದೂ ಉಂಟು. ಸ್ವಾತಂತ್ರ್ಯಪೂರ್ವಕಾಲದ ರಮ್ಯತೆ, ಸ್ವತಂತ್ರ ಹಂತದ ರಾಜಕೀಯ-ಸಾಮಾಜಿಕ ಅರಾಜಕತೆ, ಸಮಾಜದ ಅನಿಷ್ಟ ಆಚರಣೆ, ಆಧುನಿಕ ಶಿಕ್ಷಣ, ದುಡಿಮೆ, ಚೀನಾ-ರಷ್ಯಾಗಳ ಏಳಿಗೆ, ದೇಶೀಯತೆ, ಪ್ರಾದೇಶಿಕತೆ ಇವೆಲ್ಲವೂ ಅವರ ಕವಿತೆಗಳ 'ಭಿತ್ತಿ'ಗಳಾಗಿವೆ. ಸಾಹಿತ್ಯ ಪರಂಪರೆಯ ಪ್ರಭಾವವೂ ಅಲ್ಲಲ್ಲಿ ಕಾಣಿಸಿದೆ.

ತಮ್ಮ ಕವಿತೆಗಳ ಸ್ವರೂಪ ಹಾಗೂ ತಮ್ಮ ಮನೋಧರ್ಮ ಕುರಿತ ಅವರ ಈ ಮಾತು ಉಲ್ಲೇಖಾರ್ಹ : ''ಉದ್ದ ಕವನಗಳನ್ನು ರಚಿಸುವುದರಲ್ಲಿ ನನಗೆ ಬೇಸರ. ಕವನ ಚಿಕ್ಕದಾದಷ್ಟು ನನ್ನ ಮನಸ್ಸಿಗೆ ತೃಪ್ತಿ ಹೆಚ್ಚು. ಇದಕ್ಕೆ ನನ್ನ ಸ್ವಭಾವ ಗುಣವೂ ಕಾರಣವಾಗಿರಬಹುದು. ನನ್ನಲ್ಲಿ ಸಹನೆ ಕಡಿಮೆ. ನೋವು, ಅನ್ಯಾಯಗಳನ್ನು ಸಹಿಸುವುದು ನನಗೆ ಕಷ್ಟ. ಇಂದಿನ ವಿಧ್ವಂಸಕ ವಾತಾವರಣ, ಸಾಮಾಜಿಕ ಅನ್ಯಾಯಗಳಿಂದ ಉದ್ರೇಕಗೊಂಡ ಮನಸ್ಸಿನ ಅಭಿವ್ಯಕ್ತಿ ನನ್ನ ಕವನಗಳು. ಉದ್ರೇಕ ಉಗ್ರವಾದಂತೆ ಕವನದ ಶರೀರವೂ ಸಂಕುಚಿತವಾಗುತ್ತದೆ.''

ತಮ್ಮ ಶೈಲಿ ಕುರಿತ ಅವರ ಮಾತು: ''ಇಲ್ಲಿನ ಕವನಗಳ ವಸ್ತು ಇತ್ತೀಚಿನ ವಾತಾವರಣ. ಕೇವಲ ಒಂದು ತಾತ್ಕಾಲಿಕ ಸನ್ನಿವೇಶವನ್ನು ಪ್ರತಿಬಿಂಬಿಸುವ ಕಾವ್ಯ ಚಿರಕಾಲ ಬಾಳಲಾರದು. ಕವನದ ಸನ್ನಿವೇಶ ಮಾಯವಾದೊಡನೆ ಆ ಕವನವೂ ಸಾಯುವುದು. ಹೀಗೆ ಬೇಗನೆ ಸಾಯುವ ಕವನಗಳೂ ಇಲ್ಲಿವೆ.''

ಅಭಿವ್ಯಕ್ತಿ ವಿನ್ಯಾಸ ಕುರಿತ ಅವರ ಈ ವಿಶ್ಲೇಷಣೆಗೆ ಕುತೂಹಲಕರ: ''ಆಧುನಿಕ ಕವಿ ಎದುರಿಸಿರುವ ಮುಖ್ಯ ಗಂಡಾಂತರ 'ಕಾವ್ಯರೂಪ' ಕುರಿತದ್ದು. ರೂಪವನ್ನು ತಿರಸ್ಕರಿಸದೆ, ಹೇಳುವ ರೀತಿ, ವಾಕ್ಸರಣಿಯ ತಾತ್ಸಾರ, ವ್ಯತ್ಯಯ ಮಾಡುವುದು ಅಗತ್ಯ.''

ಕಾವ್ಯಕುರಿತ ಅವರ ನಂಬಿಕೆ : ''ನಿಜವಾದ ಕಾವ್ಯ ಎಂದಿಗೂ ಹಳತಾಗದು, ಅದು ಮಾಸದು : ಎಂದೂ ನವ್ಯ.''

ಮೇಲಿನ ದೀರ್ಘ ಉಲ್ಲೇಖಕ್ಕೆ ಕಾರಣ ಈ ಕವಿತೆಗಳ ರಾಚನಿಕ ಸ್ವರೂಪ ಕುರಿತ ಚರ್ಚೆಗೆ ಒಂದು ಚೌಕಟ್ಟು ಕಂಡುಕೊಳ್ಳುವುದು. ನಮ್ಮ ವಿಮರ್ಶಾಪರಂಪರೆ 'ಕಾವ್ಯ' ಎಂದು ಗುರುತಿಸಲು ಕೆಲವು ನಿರ್ದಿಷ್ಟ ಮಾನದಂಡಗಳನ್ನು ರೂಪಿಸಿಕೊಂಡಿದೆ. ಕೆಲವು ಕೃತಿಗಳು ಇದರಿಂದ ಹೊರ ತಾಗಿವೆ. ಜಿ. ಎಚ್. ನಾಯಕರು ಕುಸುಮಬಾಲೆ ಕುರಿತು 'ಬೇರೆ ಮಾನದಂಡಗಳನ್ನು ರೂಪಿಸಿಕೊಳ್ಳಬೇಕಾಗಿದೆ' ಎಂದದ್ದು ಗಮನಾರ್ಹ. ಕಾವ್ಯ ತನ್ನ ಅಲೌಕಿಕ, ಆಧ್ಯಾತ್ಮಿಕ ಮಾಂತ್ರಿಕತೆ ಬಿಟ್ಟುಕೊಟ್ಟು ಸಾಮಾಜಿಕವಾದೊಡನೆ ತೀವ್ರ ಅತೃಪ್ತಿ, ಕುತೂಹಲಕ್ಕೆ ಕಾರಣವಾಗುತ್ತದೆ.

'ತಾತ್ವಿಕತೆ' ಮುಖ್ಯ ಎನ್ನುವುದಾದರೆ 'ಒಂದು ಜನಾಂಗದ ಕಣ್ಣು ತೆರೆಸಿದ ಕವಿ' ಇಂದಿಗೆ ಸಲ್ಲರು. ವರ್ತಮಾನ ಮತ್ತು ಸಾಮಾಜಿಕ ಕಳಕಳಿ ಮಾತ್ರವೇ ಕಾವ್ಯದ ಭಿತ್ತಿಯಾದರೆ ಅದಕ್ಕೆ ಸಾಂಸ್ಕೃತಿಕ ಆಯಾಮ ದಕ್ಕಿ, ಕಾವ್ಯ ಪರಂಪರೆಯ ಸಾತತ್ಯ ಇಲ್ಲವಾಗುತ್ತದೆ. ಭಾವಗೀತೆ, ಚೌಪದಿ, ಚುಟುಕ, ಏಳೆ ಸೇರಿದಂತೆ ದೇಸಾಯಿ ಕೆಲವು ದೀರ್ಘ ಕವಿತೆಗಳನ್ನು ರಚಿಸಿದ್ದಾರೆ. ಷಟ್ಪದಿ, ರಗಳೆಗಳ ಛಂದಸ್ಸನ್ನು ಬಳಸಿ ಕೊಂಡಿರುವುದು ಕುತೂಹಲಕರ. ಇದು ಅವರ ಸಾಹಿತ್ಯಕ ಶ್ರದ್ಧೆಯ ಸೂಚಕವೂ ಹೌದು.

ಪ್ರೇಮ, ತುಂಟತನ, ಅಭಿಪ್ರಾಯ, ಪ್ರತಿಕ್ರಿಯೆ, ಕಟಕಿ, ತುಲನೆ, ವಿಮರ್ಶೆ ಕೆಲವು ಕವನದ 'ವಸ್ತು'ವಾಗಿವೆ. ವೈಚಾರಿಕತೆ, ಆದರ್ಶ, ಮುಗ್ಧತೆ, ಕುತೂಹಲ, ಪ್ರತಿಭಟನೆ, ಸಾಂತ್ವನ ಅಲ್ಲಲ್ಲಿ ಮಿಂಚಿವೆ. ಆಸ್ತಿಕತೆಯ ಒಲವು, ನಾಸ್ತಿಕತೆಯ ನಿಲುವೂ ಕಂಡು ಬರುತ್ತದೆ. ಬಹುತೇಕ ರಚನೆಗಳು ಅನಿಸಿಕೆ ಮಟ್ಟದಲ್ಲಿ ನಿಂತುಬಿಡುತ್ತವೆ ಎನಿಸಿದರೂ ಅವುಗಳ ಕಾವ್ಯಮಯತೆ, ಪ್ರಾಸ, ಪರಿಣಾಮಕಾರಿ ಅಂತ್ಯಗಳು 'ಆಸ್ಫೋಟಕ' ಗುಣದಿಂದ ಗಮನ ಸೆಳೆಯುತ್ತವೆ. ವಾಚ್ಯತೆ ಈ ರಚನೆಗಳ ದೋಷವೂ ಹೌದು, ಗುಣವೂ ಹೌದು.

ಕಾವ್ಯ ಪರಂಪರೆಯನ್ನು ಧಿಕ್ಕರಿಸಿದಂತೆ ಕಂಡರೂ, ದೇಶೀ ನಿರ್ವಚನ, ಸ್ಥಳೀಯತೆ, ಮುಕ್ತಛಂದ ವಿಶೇಷ ಎನಿಸುತ್ತದೆ. ಸಾಮಾಜಿಕ ಎಚ್ಚರ, ಕಳಕಳಿ, ಇಲ್ಲದವರ ಕುರಿತ ಮರುಕ, ಉಳ್ಳವರ ಕುರಿತ ಅಸಹನೆ, ಅನೈತಿಕ ಸಂಪತ್ತಿನ ಸಂಗ್ರಹ ಕುರಿತ ಆಕ್ರೋಶ, ಮೌಢ್ಯ ಕುರಿತ ಟೀಕೆ, ವಿಡಂಬನೆ ಸಹ್ಯವೆನಿಸುತ್ತದೆ. ರಾಚನಿಕ ಸಡಿಲತೆ, ನೀತಿಬೋಧೆ, ಸರಳ ಭಾಷೆ ಮೊದಲಾದ ಕೊರತೆಗಳು ವಿಷಾದ ವ್ಯಂಗ್ಯಗಳಿಂದಾಗಿ ಮರೆಯಾದಂತೆನಿಸುತ್ತವೆ.

ವ್ಯಕ್ತಿ ಸ್ವಭಾವಗಳ ಅನಾವರಣ, ಸಾಮಾಜಿಕ ಆಚರಣೆಯ ಖಂಡನೆ, ಪರ್ಯಾಯ ನಿಲುವು, ಸಾಮಾಜಿಕ ಅಸಮಾನತೆ ಕುರಿತ ಕೋಪ, ರಮ್ಯತೆಯಲ್ಲಿಯೇ ದೇಶದ ಬಡತನ ವಿಡಂಬಿಸುವ ಬಗೆ, ಸಂಸ್ಕೃತಿಯನ್ನು ಹೊಗಳುತ್ತಲೇ ಅದರ ಅನಿಷ್ಟ ಪದ್ಧತಿಗಳನ್ನು ಟೀಕಿಸುವ ಪರಿ ದೇಸಾಯಿಯವರ ಸಾಮಾಜಿಕ ಬದ್ಧತೆಯನ್ನು ಬಿಂಬಿಸಿವೆ. ಕೌಟುಂಬಿಕ ಚೌಕಟ್ಟಿನೊಳಗೆ ಕವಿ ರಸಿಕತೆ, ಒಲವು, ಸಾಮರಸ್ಯ ಮಿಂಚಿಸಿದ್ದಾರೆ. ಅಲ್ಲಲ್ಲಿ ಹಾಸ್ಯ, ಕರುಣೆ, ವಿಷಾದ ಮೊದಲಾದ 'ಭಾವ'ಗಳು ರಸಾರ್ದ್ರವಕ್ಕೆ ಕಾರಣವಾಗಿವೆ. ಅಂತಃಕರಣ ಕಲಕುವಂತಿವೆ. ಇವುಗಳೊಂದಿಗೆ ರಾಜಕೀಯ ಮೀಮಾಂಸೆ, ಸಾಮಾಜಿಕ ಜಿಜ್ಞಾಸೆ ಮೇಲುಗೈ ಸಾಧಿಸಿವೆ.

ನಿರುದ್ಯೋಗ, ದುಡಿಮೆ, ದುಡಿಮೆಯ ಮಹತ್ವ, ಜಾತಿ ಆಚರಣೆ ಕುರಿತ

ಕಟುಟೀಕೆ, ಅಹಿಂಸಾವಾದ ಕವಿಯನ್ನು ಉದ್ದೀಪಿಸಿವೆ. ವೈಚಾರಿಕತೆ, ಚುನಾವಣಾ ರಾಜಕೀಯ ಕುರಿತ ಟೀಕೆ, ವರ್ತಮಾನದ ಎಚ್ಚರಗಳಿಂದಾಗಿ ಕವಿ ಸಮಕಾಲೀನ ರೆನಿಸುತ್ತಾರೆ. 'ಧರ್ಮದ ಗಡಿಯನು ದಾಟಲು ಬೇಡಿ' ಎಂಬ ಸಾಲು ಮಾನವ ಧರ್ಮ ಮತ್ತು ವ್ಯಕ್ತಿ ಸಂಸ್ಕಾರ ಕುರಿತಾದದ್ದು. 'ಹುರಿಯಾಳುಗಳು ಬಂದು ಬಡಜನರ ಹಿತಕ್ಕಾಗಿ ಇಟ್ಟು ಹೋಗುವರೇನು ಕೈಲಿ ನೋಟು' ಎಂಬ ಪ್ರಶ್ನೆ ಇವತ್ತಿಗೂ ಪ್ರಸ್ತುತ!

'ಡಾಂಭಿಕತೆ' ರಾಜಕೀಯದಲ್ಲಿ ಮೇಲುಗೈ ಪಡೆದು ಮುಖ್ಯ ಅಸ್ತ್ರವಾಗಿರುವುದನ್ನು ಕವಿ ಬಹು ಹಿಂದೆಯೇ ವಿಡಂಬಿಸಿದ್ದಾರೆ. ಸಾವು ಕೂಡ ಆಚರಣೆ ಆಗುವುದು, ಆಗಿರುವುದು ಧ್ವನಿಪೂರ್ಣವಾಗಿ ಹೊಮ್ಮಿದೆ. 'ಲಂಚ ಕೊಡುವವರು ದೇವರ ಭಕ್ತರು' ಎಂಬ ಮಾತು ಕವಿಯ ತೀವ್ರ ನಿರೀಕ್ಷಣಾ ಸಾಮರ್ಥ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ; ಅದು ವ್ಯಂಗ್ಯ-ವಾಸ್ತವಗಳ ಸೆಲೆಯಾಗಿದೆ.

ತಮ್ಮ ಕಾವ್ಯರಚನೆಯ ಕಾಲಘಟ್ಟದ ಸಹಜ ಪ್ರತಿಕ್ರಿಯೆ ಎಂಬಂತೆ ದೇಸಾಯಿ ಶೋಷಿತರ ಪರ ದನಿಯಾಗಿರುವುದು ಗಮನಾರ್ಹ. ದಲಿತ ಬಂಡಾಯ ಪಂಥದ ತಾತ್ವಿಕತೆ - ಆಶಯ ಇಲ್ಲಿ ಧ್ವನಿಸಿರುವುದು ಕವಿಯನ್ನು ಪ್ರಸ್ತುತಗೊಳಿಸಿದೆ. 'ಬಡತನ ಅನುಭವಿಸುವುದಕ್ಕಿಂತಲೂ ಹೆಣವಾಗುವುದೇ ಲೇಸು' ಎಂಬ ಸಾಲು ಇಂದಿನ ರೈತರ ಸರಣಿ ಆತ್ಮಹತ್ಯೆಯನ್ನು ಅನುರಣಿಸಿದೆ.

ಶ್ರಮಿಕರು, ರೈತರು, ಬಡವರು, ದುಡಿಮೆ, ಕುರಿತು ಕವಿಗೆ ಅಪಾರ ಒಲವು. ಈ ಕುರಿತ ಕವಿತೆಗಳು ರಮ್ಯ; ಶ್ರಮ ಸಂಸ್ಕೃತಿಯ ಆಯಾಮ ಬಿಂಬಿಸುವಲ್ಲಿ ಕವಿ ಸಫಲರಾಗಿದ್ದಾರೆ. ಪ್ರತಿಫಲವಿಲ್ಲದ ದುಡಿಮೆ ಕುರಿತು ಕವಿಗೆ ವಿಷಾದವಿದೆ. 'ಹಗಲೂ ಇರುಳೂ ದುಡಿದು ಹೊಟ್ಟೆಗೆ ಸಿಗದವರು' ಎಂಬ ಸಾಲು ಇಂದಿನ ಅಪಾರ ಸಂಖ್ಯೆಯ ಅಸಂಘಟಿತ ಕೂಲಿಕಾರರನ್ನು ಸೂಚಿಸಿದೆ. 'ಹರನೂ ನೋಡಾ, ಹರಿಗೂ ಬೇಡಾ. ಹೆಸರಿಗೆ ಮಾತ್ರ ಹರಿಜನರೋ' ಮೊದಲಾದ ಸಾಲುಗಳು ತೀವ್ರ ವಿಷಾದ ಹುಟ್ಟಿಸುತ್ತವೆ.

ಗ್ರಾಮ ಬದುಕು ಕವಿಯನ್ನು ಆಕರ್ಷಿಸಿದಂತೆ, ಅವರ ಟೀಕೆಗೂ ಗುರಿಯಾಗಿದೆ. 'ಹಳ್ಳಿಗೋಡು, ದೀನ ಜನರ ಪಾಡು ನೋಡು' ಎಂಬ ಸಾಲು ಗ್ರಾಮ ಭಾರತದ ನೈಜ ದರ್ಶನವಾಗಿದೆ. ರಮ್ಯತೆ ಮೀರಿ ನಿಲ್ಲುವ ಈ ಕವಿಯ ಸಾಮಾಜಿಕ ಪ್ರಜ್ಞೆ, ಗ್ರಹಿಕೆ ಪ್ರಸ್ತುತವೆನಿಸುತ್ತದೆ. ಬದುಕು ಮುಖ್ಯ, ಆದರೆ ಬಡವರ ಬಾಳು ತೀರಾ ಘೋರ ಎಂಬ ಕಹಿ ವಾಸ್ತವ ಕವಿಯ ವಿವೇಕವೂ ಆಗಿದೆ.

ಕೇವಲ ವಾಸ್ತವವನ್ನೇ ಚಿತ್ರಿಸಿ, ಟೀಕಿಸಿ ಕವಿ ತಟಸ್ಥರಾಗಿಲ್ಲ, ಅವರಿಗೆ ಬದ್ಧತೆಯಿದೆ. ಭರವಸೆಯಿದೆ. ಪ್ರಗತಿಯನ್ನು ಅವರು ವಿಡಂಬಿಸಬಲ್ಲರು. 'ನಮಗೆ ನಾವೇ ಇನ್ನು ಮುಂದೆ ತಂದೆ' ಎಂದೂ ಹೇಳಬಲ್ಲರು. ಆ ಮೂಲಕ ಸ್ವಾವಲಂಬನೆ, ಆತ್ಮವಿಶ್ವಾಸ, ನೈತಿಕ ಬಲಗಳಿಗೆ ನೀರೆರೆದಿದ್ದಾರೆ.

ಸ್ವಾತಂತ್ರ್ಯ ಹೋರಾಟದ ಕಾಲ ಮತ್ತು ಸ್ವಾತಂತ್ರ್ಯ ಬಂದ ಮೊದಲ ದಶಕಗಳ ಕಾಲವನ್ನು ನಿರ್ವಹಿಸುವ ಕವಿತೆಗಳಲ್ಲಿ ಜನಪರ ಆಶಯ ದಟ್ಟೈಸಿದೆ. ಈ ಅವಧಿಯ ರಚನೆಗಳು ರೂಕ್ಷ, ವಾಚ್ಯ, ನೇರ, ಸಡಿಲ ಎನಿಸಿದರೂ ಕವಿಯ ಸಾಮಾಜಿಕ ಬದ್ಧತೆಯ ನಿದರ್ಶನಗಳಾಗಿವೆ. ನಂತರದ ರಚನೆಗಳು ರೊಚ್ಚಿನಿಂದ, ಉದ್ರೇಕದಿಂದ ಪಾರಾಗಿ ವ್ಯಂಗ್ಯ, ವಿನೋದ ಒಳಗೊಂಡಿವೆ.

ನಿಸರ್ಗಪ್ರೀತಿ, ದೇಶೀಯತೆ, ಪ್ರಾದೇಶಿಕತೆ ದೇಸಾಯಿಯವರಲ್ಲಿ ಭಿನ್ನವಾಗಿವೆ. ಮನುಷ್ಯ, ನಿಸರ್ಗಗಳ ಸಂಬಂಧ ಅವರಿಗೆ ಕೊಡು ಕೊಳ್ಳುವಿಕೆಯ ಆಯಾಮವಾಗಿ ಕಂಡಿದೆ. ಸ್ವರ್ಗಕ್ಕಿಂತಲೂ ಭೂಮಿಯೇ ಅಂದ ಎನ್ನುವ ನಿಲುವು ಆ ಕಾಲಕ್ಕೆ ಹೊಸದು ಹಾಗೆಯೇ ವಾಸ್ತವ ಗ್ರಹಿಕೆಯಿಂದ ಕೂಡಿದ್ದು.

ಪ್ರೇಮ, ತುಂಟತನ, ಅಭಿಪ್ರಾಯ, ಕಟಕಿ, ತುಲನೆ, ವಿಮರ್ಶೆ ಕೆಲವು ಕವನಗಳ 'ವಸ್ತು' ಆಗಿವೆ. ಇಂತಲ್ಲಿ ಕಾವ್ಯಶಿಲ್ಪ ಏಕತಾನತೆಗೆ ಈಡಾಗಿದೆ. ಪ್ರಾಸಪ್ರಿಯತೆ ಅತಿ ಎನಿಸಿದೆ. ನನ್ನ ದೇಹದ ಬೂದಿ ಹಳೆಯದನ್ನೇ ಹೇಳಿದರೂ ಕವಿಯ ಮನೋಧರ್ಮದ ನೈಜ ಅಭಿವ್ಯಕ್ತಿಯಾಗಿದೆ.

ಸಮಾಜವನ್ನು ಬಿಡುಗಣ್ಣಿನಿಂದ ವಿಶ್ಲೇಷಿಸಿರುವ ಕವಿಗೆ ಸಾಮಾಜಿಕ ಆಚರಣೆ, ಜಾತಿಭೇದ, ಬಣ್ಣದ ಮೋಹದ ಮೇಲ್ಮೈ ಕುರಿತ ತೀವ್ರ ಅಸಮಾಧಾನವಿದೆ. ಹಾಗಾಗಿ ಇಂತಹವು ವಿಡಂಬನೆಗೀಡಾಗಿವೆ. ಕುರುಡುನಂಬಿಕೆ, ತುಂಟತನ ಕಟಕಿಗೆ ಒಳಗಾಗಿವೆ. ಬಡತನ ಕಟು ವಿಶ್ಲೇಷಣೆಗೆ ಗುರಿಯಾಗಿದೆ. ರೈತ – ಕಾರ್ಮಿಕರ ದೈನ್ಯದ ಸ್ಥಿತಿ 'ಕೂಲಿಯ ಸುಖವೇ ಮಾನವ ಧರ್ಮ' ಎಂಬ ವ್ಯಂಗ್ಯದ ತಾತ್ವಿಕತೆ ರೂಪಿಸಿವೆ.

ದೇಸಾಯಿ ತಮ್ಮ ಕೆಲವು ಕವಿತೆಗಳಲ್ಲಿ ಪಾರಂಪರಿಕ ಅರ್ಥಕ್ಕಿಂತ ಭಿನ್ನವಾಗಿ ಧ್ವನಿಸಿದ್ದಾರೆ. 'ಕಾಣಿಕೆ' ಕವಿತೆ ತನ್ನ ವಿಶಿಷ್ಟ ಕಲ್ಪನೆಯಿಂದ ಗಮನಾರ್ಹ. ಇಲ್ಲಿ ಕವಿ ಸೃಜಿಸಿರುವ ಸ್ಥಾವರ ವಿನೂತನ, ವಿಶಿಷ್ಟ. 'ಮುಗಿಲು ಬಟ್ಟೆ, ಭೂಮಿ ತಟ್ಟೆ, ವಿಶ್ವ ಮೂರುತಿ' ಎಂಬ ಗ್ರಹಿಕೆ ಸುಂದರವಾಗಿದ್ದೂ, ವಾಸ್ತವವೆನಿಸುತ್ತದೆ. ಸೃಷ್ಟಿಯ ಈ ಕಾಣಿಕೆ 'ಮಗುವು ಭಾವಸ್ವಪ್ನದಲ್ಲಿ ನೆಯ್ದ ಮಾಲಿಕೆ' ಎಂಬ ನಿಶಿತ ಭಾವ ಕವಿಯ ಅರಿವು, ಪ್ರಬುದ್ಧತೆಗಳನ್ನು ಬಿಂಬಿಸಿದೆ. ಪ್ರಗತಿ ಬೇಕು ಆದರೆ ಅದು ಮಾನವ ಸಂಸ್ಕೃತಿಯ ನಾಶಕ್ಕೆ ಕಾರಣವಾಗಬಾರದು ಎಂಬ ವಿವೇಕವಿದೆ.

ದೇಸಾಯಿ ಲೌಕಿಕ ಕವಿ. ಬದುಕು, ಕುಟುಂಬ, ಶ್ರಮ ಅವರ ಮುಖ್ಯ ಆಸ್ಥೆ. 'ಪ್ರೇಮವೊಂದೆ ಜಗದ ಮೂಲತತ್ವ' ಎನ್ನುವ 'ನನ್ನ ರಂಗಿ' ಕವನ ಅತಿರಮ್ಯತೆಯಿಂದ ಪಾರಾಗಿರುವುದು ಗಮನಾರ್ಹ. ಮಕ್ಕಳ ನಿರ್ಮಲ ನಗೆಯಲ್ಲಿ ದೇವರಿದ್ದಾನೆ ಎಂಬ ಕಲ್ಪನೆ ಹಳೆಯದಾದರೂ ಸೊಗಸಾಗಿದೆ. ಸತಿ, ಪತಿ, ಮಗು, ಈ ಜಗ ಎಲ್ಲವೂ ದೇವರೇ ಎಂಬ ಭಾವ ಸ್ವಾಗತಾರ್ಹ. ಸ್ವರ್ಗ ಮತ್ತು ಭೂಮಿ ಕುರಿತ ಪಾರಂಪರಿಕ ಬಯಕೆಯನ್ನು ತಿರಸ್ಕರಿಸಿ ಇಹಕ್ಕೆ ಕವಿ ಒತ್ತು ನೀಡಿದ್ದಾರೆ.

ಹಸಿವು, ಕಾಮ, ಬಣ್ಣದ ಮೇಲ್ಮೆ, ದುಡಿಮೆ ಕವಿಯನ್ನು ಅತಿಯಾಗಿ ಕಾಡಿವೆ. 'ಕೋಟಿ ಜನ ಬಾಲಕರು ಹಸಿವಿನಿಂದ ಹುಟ್ಟಿದೊಡನೆ ಸಾಯುವರು' ಎಂಬ ವಾಸ್ತವ ಅರಿವು ಕವಿಗಿದೆ. ಪಾಪ ಪುಣ್ಯ ವೇದಾಂತ, ಬಡತನ ಸಿದ್ಧಾಂತ ಎಂಬ ನಿಲುವಿಗೆ ಬರುವ ಕವಿ 'ದೀನಗಿಂತ ದೇವ ಬಡವನೆಂದು ಬಗೆದೆಯ' ಎಂದು ಕೇಳಬಲ್ಲರು.

ಕಪ್ಪು ಬಣ್ಣದ ಯಮುನೆಯ ಕಣ್ಣ ಕಾಂತಿ, ಹೃದಯದ ಪ್ರೇಮ, ಶ್ರಮ, ಶಾಂತಿಪ್ರಿಯತೆ ಗುಣಗಳೆನ್ನುವ ಕವಿ ಆ ಮೂಲಕ ಸಾಮಾಜಿಕ ಹುಸಿ ನಂಬಿಕೆಯನ್ನು ನಿರಾಕರಿಸಿದ್ದಾರೆ. 'ಕಸಬರಿಗೆಯವರು ಪಂಚಮರು, ಪುಣ್ಯ ಪುರಾತನ ಪೂರ್ವಜರು' ಎಂಬ ಮಾತು ಸಾಮಾಜಿಕ ಆಚರಣೆ ಮೀರುವ ಕನಸಿನಿಂದ ಪ್ರೇರಿತವಾಗಿದೆ. 'ಸೀಮೋಲ್ಲಂಘನೆ ಮಾಡಿರಿ' ಎಂದು ಯುವಕರಿಗೆ ಕರೆ ನೀಡುವ ಕವಿ ಕುವೆಂಪು ಅವರನ್ನು ನೆನಪಿಸುತ್ತಾರೆ. ವಚನ-ಕೀರ್ತನೆಗಳ ಸಾರವೂ ಅಲ್ಲಲ್ಲಿ ಬಸಿದು ಬಂದು 'ಚರ್ಮದ ದೇಹವ ಸಾರ್ಥಕ ಮಾಡಿ' ಎಂಬ ರೂಪದಲ್ಲಿ ಕರೆಯಾಗಿದೆ. ಅಷ್ಟಕ್ಕೇ ನಿಲ್ಲದ ಕವಿ 'ಹಿಂದಿನ ಕಾಲ ಹಿಂದಕೆ ಅನ್ನಿ' ಎನ್ನುವ ಮೂಲಕ ದರ್ಶನವೊಂದನ್ನು ನೀಡಿದ್ದಾರೆ. ಮುಂದೆ ಅದು 'ಮಾನವ ಧರ್ಮದ ದಸರೆಯ ಮಾಡಿ' ಎಂಬ ಧ್ವನಿಗೆ ಕಾರಣವಾಗಿದೆ. ನಾಡಿನ ಸಾಹಿತ್ಯ-ಸಂಸ್ಕೃತಿ-ಇತಿಹಾಸಗಳ ಅರಿವು ಯುವಜನತೆಗಿರಲಿ ಎಂಬ ಆಸೆಯ ಜೊತೆ, 'ಇಂದಿನ ದಸರೆ ಬರಿ ಹೆಸರೆ' ಎಂಬ ವಾಸ್ತವ ಗ್ರಹಿಕೆಯಲ್ಲಿ ವ್ಯಂಗ್ಯವೂ ಅಡಗಿದೆ.

ಅಪರೂಪದ ಹೃದಯ ವೈಶಾಲ್ಯ ಈ ಕವಿಯದು. ಚಪ್ಪಲಿ ಅನಿವಾರ್ಯವಾದರೂ ಹೊರಗೇಕೆ ಎಂದು ಕೇಳುತ್ತಲೇ, ಮುಂದಿನ ಜನ್ಮದಲ್ಲಿ ನನ್ನ ಬಾಳು ಚಪ್ಪಲಿಯಂತೆ ಸೇವೆ ಸಲ್ಲಿಸಲಿ ಎಂದು ಕೋರಬಲ್ಲರು. ಅರಸರ ಮೈಸೂರು, ಕವಿಗೆ ಜನಪದ ಮೈಸೂರು. ಟಿಪ್ಪು ಕುರಿತ ನಿಲುವು ಕಾಲಾತೀತ. ಇವು ಕವಿಯ ಜಾತ್ಯತೀತ ಮನೋಭಾವದ ನಿದರ್ಶನ. ಭಿಕ್ಷುಕ, ಮೀನುಗಾರ, ಸೂಳೆ, ಬಡವ, ರೈತ, ವಿದ್ಯಾರ್ಥಿ ಎಲ್ಲರೂ ಕವಿಯ ಗೆಳೆಯರೆ! 'ಸೂಳೆಯ ಮನೆಯಲಿ ಕಾಣದು ಭೇದ, ಧರ್ಮದ ಹುಚ್ಚು ಜಾತಿಯ ವಾದ' ಎಂಬ ವ್ಯಂಗ್ಯ ವಾಸ್ತವವನ್ನು ಧ್ವನಿಸಿದೆ.

ಕವಿ ಲೋಕವನ್ನು ಗ್ರಹಿಸಿದಂತೆ ಸಂಸಾರವನ್ನು ನೋಡಬಲ್ಲರು. ಗಂಡನೇ ಶೋಷಕನಾಗಬಲ್ಲ, ಹೆಣ್ಣು ಅಮಾಯಕಿ, ದೇವರು, ಭಕ್ತಿ ಎಡೆ ಲಾಭದಾಯಕ ಎಂದೂ ಹೇಳಬಲ್ಲರು. ದೇವರ ಮೊಲೆಯಲಿ ದೊರೆವುದೆ ಹಾಲು ಎಂದು ಕೇಳಬಲ್ಲರು. ಬಡವರ ಕೌದಿ ನೆಮ್ಮದಿಯ, ಆಸರೆಯ, ಬಂಧನದ, ಪ್ರೀತಿಯ ಸಂಕೇತ ಎನ್ನುತ್ತಾರೆ. ಹೆಣ್ಣಿನ ಸೀರೆ ಗಂಡಿನ ಧೋತ್ರ ಎರಡೂ ಕೂಡಲು ಕೌದಿಯ ಗಾತ್ರ ಎಂಬ ಸಾಲು ಕೌಟುಂಬಿಕ ಸಾಮರಸ್ಯ ಮತ್ತು ಸಂಸಾರದ ಸಾರವನ್ನು ಬಿಂಬಿಸಿದೆ.

ಸಾಮಾಜಿಕ ಆಕ್ರೋಶ ದೈವನಿಂದೆಯಾಗಬಲ್ಲದು. ಕವಿ, 'ದೇವ, ನೀನು ಸತ್ತರೇನು ?' ಎಂದು ಕೇಳುತ್ತಾರೆ. 'ನೀನು ಸತ್ತರೇನು ಕುತ್ತು ?' ಎಂದೂ ಪ್ರಶ್ನಿಸುತ್ತಾರೆ. 'ದೇವ, ನೀನು ಸತ್ತು ನೋಡು', ಎನ್ನುತ್ತಾರೆ. ಸಮಾಜದ ಕಹಿ ಅನುಭವ ಕವಿಯನ್ನು ಇಲ್ಲಿ ಉದ್ದೀಪಿಸಿದೆ. ಬಾಳಿನ ಗೋಳು ಆಕ್ರೋಶವಾಗಿ ಪರಿಣಮಿಸಿದೆ. ತನ್ನದಲ್ಲದ ಗೋಳಿಗೆ ಕವಿ ಇಲ್ಲಿ ಸ್ಪಂದಿಸಿದ್ದಾರೆ. 'ದೇವನಾದರೆ ಮಿಂಡ, ಯಾರು ನಿರ್ಮಲ ಗಂಡ', ಎನ್ನುತ್ತಾರೆ.

ನಗರ ಬದುಕಿನ, ಶ್ರಮಜೀವಿಯ ಅಸಹಾಯಕತೆ ಕವಿಯನ್ನು ಕಾಡಿದೆ. 'ಬಾಳುವೆ ಖಾದಿ, ನಾರುವ ಬೀದಿ, ಹರಿವ ಗಟಾರಿನ ಅತ್ತರವು, ಸೊಳ್ಳೆ ಕಡಿತದ ನೆತ್ತರವು' ಎಂಬ ಸಾಲು ವಾಸ್ತವ ಸ್ಥಿತಿಯ ಪ್ರತಿಬಿಂಬ. ಆದರೂ ಬೆವರಿನ ಕ್ರಾಂತಿ, ವಿಶ್ವದ ಶಾಂತಿ ಎಂಬ ಭರವಸೆ ಹೊಂದುವ ಕವಿಯ ಜೀವಪರ ನಿಲುವು ಸ್ತುತ್ಯ. 'ದುಡಿಯುವ ಹಕ್ಕು ಮನುಜನಿಗೆಲ್ಲೋ' ಎಂದು ಹಲುಬುವ ಕವಿ ಜಾಗತೀಕರಣದ ಅಪಾಯಗಳನ್ನು ಕಂಡರಿಸಿದಂತೆ ಭಾಸವಾಗುತ್ತದೆ. ಇಷ್ಟಾದರೂ ಕವಿಗೆ ನಿರಾಸೆಯಿಲ್ಲ, ಪ್ರೇಮವೊಂದೇ ಸತ್ಯ, ಉಳಿದುದೆಲ್ಲಾ ಮಿಥ್ಯ, ಪ್ರೇಮಿಗಳ ಸಂಸಾರ ಜಗದ ಮೂಲಾಧಾರ ಎನ್ನುವ ಮೂಲಕ ಬದುಕಿನ ಬದ್ಧತೆ ಅಭಿವ್ಯಕ್ತಿಸಿದ್ದಾರೆ.

ಹುಣ್ಣಿಮೆಯ ಚಂದಿರ ಹೊಲೆಯನಿಗೂ ಮುತ್ತಿಡುತ್ತಾನೆ ಎಂಬ ಕಲ್ಪನೆ ರಮ್ಯವಾಗಿದೆ. ಗಾಂಧಿ ಕುರಿತ ಗೌರವ, ಏಸು, ಬುದ್ಧರ ಕುರಿತ ಪ್ರೀತಿ, ಬಾಳಿನ ಆದರ್ಶ ಕವಿಯನ್ನು ಅಲ್ಲಲ್ಲಿ ರಮ್ಯ, ಸೌಮ್ಯ ಅಭಿವ್ಯಕ್ತಿಗೆ ಪ್ರೇರೇಪಿಸಿವೆ. ಬೇಂದ್ರೆಯವರ ಪ್ರಭಾವ 'ಮುಂಜಾವ ಹೂವುಗಳು' ಕವಿತೆಯಲ್ಲಿ ಢಾಳಾಗಿ ಕಾಣುತ್ತದೆ. 'ನೇಗಿಲ ಯೋಗಿಯ ಕರ್ಮರಹಸ್ಯ, ಸ್ವರ್ಗದ ಮೇಲೂ ಕಾಣದ ದೃಶ್ಯ' ಎಂಬ ಮೋಹಕ ಕಲ್ಪನೆ ಕವಿಯ ಆತ್ಮವಿಶ್ವಾಸ, ದುಡಿಮೆ ಬಗೆಗಿನ ಭರವಸೆ, ಸಾಮಾಜಿಕ ವಿವೇಕಗಳನ್ನು ಧ್ವನಿಸಿದೆ. ಸೌಮ್ಯ ಸ್ವಭಾವದ ಕವಿ ಅಲ್ಲಲ್ಲಿ ಬಿರುಸಾಗುತ್ತಾರೆ; 'ಬಿರುಗಾಳಿ ಬಂದು ನರನಿಗೆ ಗೆಲುವು ತರಲಿ' ಎಂದು ಹಾರೈಸುತ್ತಾರೆ. 'ದೇವನು ಇಂದಿಗೆ ಭೂಮಿಗೆ ಬಂದರೆ ಆತನಿಗೂ ಕ್ಲೇಶ' ಎಂದು ಸತ್ಯ ನುಡಿಯುತ್ತಾರೆ. 'ಪಾಪ ಕರ್ಮವೂ ಪುಣ್ಯವಾಗುವುದು ದೇವರ ಗುಡಿಯಲ್ಲಿ' ಎಂಬ ನಿಲುವು ಗಮನಾರ್ಹ.

ಸಮಾನತೆ, ಪ್ರೀತಿ, ದುಡಿಮೆ ಕವಿಗೆ ಬಲು ಇಷ್ಟ. 'ನೇಗಿಲಿನ ಸ್ಪರ್ಶವೇ ಮಾನವನ ಇತಿಹಾಸ' ಎಂಬ ಬಹುದೊಡ್ಡ ಅರ್ಥ ಹೇಳುವ ಮೂಲಕ ಕವಿ ಕರ್ಮ ಸಿದ್ಧಾಂತವನ್ನು ತಿರಸ್ಕರಿಸುತ್ತಾರೆ. ಗಾಂಧೀಜಿಯ ಸಾವಿನ ಅರ್ಥ ಮನದಲ್ಲಿ ನಿಲ್ಲಬೇಕು ಎನ್ನುವ ಮೂಲಕ ಅಹಿಂಸೆಯನ್ನು ಸಮರ್ಥಿಸುತ್ತಾರೆ. ಗತವೈಭವದ ಬಗ್ಗೆ ಅವರಿಗೆ ಒಲವಿಲ್ಲ; ವಾಸ್ತವ ಮುಖ್ಯ. ವಿಜ್ಞಾನವೂ ಆಪತ್ತಿಗೆ ಕಾರಣವಾಗಬಲ್ಲದೆಂಬ ಆತಂಕ ಕವಿಯನ್ನು ಕಾಡಿದೆ. 'ಸುರಲೋಕ, ಪರಲೋಕ ಕಾಣಲಿಕೆ ಚೊಕ್ಕ, ನಮ್ಮ ಭೂಲೋಕವೇ ಬಾಳುವೆಗೆ ತಕ್ಕ' ಎಂಬ ಸತ್ಯ, ವಾಸ್ತವದ ಅರಿವಿದೆ ಕವಿಗೆ. 'ದೇವರ ಕಿಮ್ಮತ್ತು ಪೂಜಾರಿಗೆ ಗೊತ್ತು' ಎಂಬ ವ್ಯಂಗ್ಯ ಧ್ವನಿಯುಕ್ತ. ಪ್ರಾಣಿ ದಯೆ ಕವಿಯಿಂದ ತಪ್ಪಿಸಿಕೊಂಡಿಲ್ಲ; 'ನೀರು ಕುಡಿದರೂ ಹಾಲು ಕೊಡುವ ಎಮ್ಮೆ ಮಂತ್ರಿಯಾಗಲಿ' ಎಂಬ ಆಸೆ ಗಮನಾರ್ಹ.

ಭೂಮಿಯೇ ಮಾನವನ ಬಾಳ ಹಣತೆ ಎಂಬ ಅವರ ಲೌಕಿಕ ನಿಲುವು ಅವರನ್ನು ಜನಪರ ಕವಿಯನ್ನಾಗಿಸಿದೆ. 'ಬುದ್ಧ ದೇವನ ಹೃದಯ, ಏಸುವಿನ ಉದಯ ದೇವಲೋಕಕ್ಕಿಂತ ಮಿಗಿಲು' ಎಂಬ ವಿವೇಕ ಅವರನ್ನು ಪ್ರಸ್ತುತರನ್ನಾಗಿಸಿದೆ. 'ದಸರೆಯ ದರ್ಬಾರು ಇದ್ದರೂ ರೈತನಿಗೆ ಉಳಿವುದು ಕೊನೆಗೆ ಹರಕು ಕಂಬಳಿ' ಎಂಬ ವಾಸ್ತವಜ್ಞಾನ ಅವರ ಆರ್ಥಿಕ, ಸಾಮಾಜಿಕ ನಿಲುವನ್ನು ಸಮಕಾಲೀನಗೊಳಿಸಿದೆ. ಯುದ್ಧ ಸರಕಾರಿ ಕೊಲೆ ಎಂಬ ಮಾತು ಅವರ ದೂರದರ್ಶಿತ್ವಕ್ಕೆ ಸಾಕ್ಷಿಯಾಗಿದೆ.

ಅವರ ರಾಜಕೀಯ ಗ್ರಹಿಕೆಗೆ ಈ ಕವಿತೆ ನಿದರ್ಶನವಾಗಿದೆ;

*ಬೆಂಗಳೂರಿಗೆ ಹೋಗಿ ಏನೇನು ತಂದೆ ?*
*ಮಂತ್ರಿಗಳು ಸಿಗಲಿಲ್ಲ ಹಾಗೆಯೇ ಬಂದೆ*
*ನಿನ್ನ ಸಂಗಡ ಹನುಮ ಇರಲಿಲ್ಲವೇನು*
*ಜೊತೆಯಲ್ಲಿ ಯಾರಿಲ್ಲ, ಒಬ್ಬನೇ ನಾನು.*
*ನೆನಪಿಲ್ಲವೇ ಮೊನ್ನೆ ಹೇಳಿದ್ದು ಅಜ್ಜ*
*ಹನುಮ ಬೇಕೇ ಬೇಕು, ಇದು ರಾಮರಾಜ್ಯ*

ರಾಜಕಾರಣದ ಫಲವನ್ನು ಕವಿ ಸರಿಯಾಗಿ ಗ್ರಹಿಸಿದ್ದಾರೆ :

*ಕಂಪನಿಯ ದುಡ್ಡು*
*ಸಚಿವರಿಗೆ ಬ್ರೆಡ್ಡು*
*ಅಳಿಯನಿಗೆ ಹುದ್ದೆ*
*ಕುರ್ಚಿಯಲಿ ನಿದ್ದೆ*

ಜಗದ ಗೊಂದಲದಲ್ಲಿ ಮುಳುಗಿದ ಕವಿ ತನ್ನ ಪರಿಸರವನ್ನು ಹೀಗೆ ನೆನಪಿಸಿಕೊಳ್ಳುತ್ತಾರೆ :

*ಅಷ್ಟರಲಿ ನೆನಪಾಯ್ತು ಹಸಿ ಮೀನು ಪಳದಿ*
*ಅಲ್ಲಿಂದಲೇ ಮನೆಗೆ ಮರಳಿದೆನು, ಕೆಳದಿ*

ರೈತಬಾಳು, ಸಾಮಾಜಿಕ ವಾಸ್ತವ ಅವರನ್ನು ಕಾಡಿದ್ದು ಹೀಗೆ :

*ಕೂಳಿಲ್ಲದೆ ಬಡ ರೈತನ ಹೊಟ್ಟೆ*
*ಬೆನ್ನಿಗೆ ತಾಗಿ ಆಗಿದೆ ತಟ್ಟೆ.*
*ತೊಗರಿಯ ಸಾರದು ಭಟ್ಟರಿಗೆ*
*ನೇಗಿಲ ಭರವೆ ದಿಟ್ಟರಿಗೆ*

ಕಾವ್ಯ ಎನಿಸಿಕೊಳ್ಳದ ಈ ಕವಿತೆಗಳಲ್ಲಿ ತೀವ್ರ ರಾಜಕೀಯ ಪ್ರಜ್ಞೆ, ವಿಡಂಬನೆಗಳು ಸಾಮಾಜಿಕ ವಿಷಮತೆಗೆ ಹಿಡಿದ ಕನ್ನಡಿಯಾಗಿದೆ. ಬಂಡಾಯ ಪ್ರಜ್ಞೆ, ದಲಿತ ಸಂವೇದನೆ ಆ ಕಾಲದಲ್ಲಿಯೇ ಈ ಕವಿತೆಗಳಲ್ಲಿ ಒಡಮೂಡಿರುವುದು ಗಮನಾರ್ಹ. ಸಡಿಲಬಂಧ, ವಾಚ್ಯತೆ, ಪ್ರತಿಕ್ರಿಯೆ ಎಂದು ಇವನ್ನು ಕರೆಯಬಹುದಾದರೂ ಕವಿಯ ಸಾಮಾಜಿಕ ಪ್ರಜ್ಞೆಯ ದ್ಯೋತಕವಾಗಿ ಇವು ಓದಬಹುದಾದ ರಚನೆಗಳು. ಕವಿಯ ಜನಪರ ಚಿಂತನೆ ಅಮೋಘ ಕಾವ್ಯವಾಗದಿದ್ದರೂ ಗಂಭೀರ ಕಾಳಜಿಯಂತೂ ಆಗಿದೆ.

**ಡಾ॥ ಎಸ್. ಪ್ರಸಾದಸ್ವಾಮಿ**
ನಂ. ೩, 'ನುಡಿ', ೧ನೇ 'ಎ' ಮುಖ್ಯರಸ್ತೆ, ಮುನೇಶ್ವರ ಬಡಾವಣೆ,
೪ನೇ ಬ್ಲಾಕ್, ಡಿ.ಬಿ.ಸಂದ್ರ. ಬೆಂಗಳೂರು - ೫೬೦ ೦೯೭

## ಸುಡಲಾರದ ಬಗೆ

ಧ್ಯಾನಸ್ಥ ಮೌನದಲ್ಲಿ ಅರಿವ ಪಡೆದ ಬುದ್ಧ
ಶೋಷಿತರ ಅಜ್ಞಾನ, ಬವಣೆಯನ್ನು ಕೆರೆಗೆರೆಚಿ,
ಅವರ ಬಾಳ ದಾರಿಗೆ ಬೆಳಕ ತೋರಿ
ಕಾರ್ಗತ್ತಲೆಯ ಗಾಢ ಮೌಢ್ಯತೆಯ ತೊರೆದವನಿಗೆ
ದೇಶವ ಬಿಟ್ಟು ಓಡಿಸಿದೀ ದೇಶದಲಿ ಆತನನ್ನು
ಆತನ ಆ ವಿಚಾರಗಳೊಂದಿಗೆ ಜೀವಸಮಾಧಿ ಮಾಡಿದರು.

ಆ ಮಹಾ ಪರಿನಿರ್ವಾಣದ ಬಯಲಲ್ಲಿಯ
ನಿಟ್ಟುಸಿರಿನೊಳಗಿನ ಬಿಕ್ಕಳಿಕೆಯ ಬಿಸಿಯುಸಿರಾವಿಯಾಗಿ,
ಹನಿಗಟ್ಟಿ ಮೋಡವಾಗಿ ಸುರಿದ ವರ್ಷಧಾರೆಯಲ್ಲಿ
ಉದಯಿಸಿದ ಮಿಂಚು ನಮ್ಮ ಬಸವ.

ಮತ್ತದೆ ಮೌಢ್ಯತೆ-ಜಾತೀಯತೆ-ಅಸಮಾನತೆ-ಅಮಾನವೀಯತೆಗೆ
ಬಸವನ ಮನಮಿಡಿದು ಬಂದ ವಚನಗಳು
ಪಚನವಾಗಲಿಲ್ಲ ನಮ್ಮವರಿಗೆ,
ಬಸವನ ಘರ್ಷಿತ ಬಂಡಾಯದ ವಿಚಾರಗಳೊಂದಿಗೆ
ಭಾವಗಳು - ಅನುಭಾವಗಳು ಕೂಡಿ ಕೂಡಲಸಂಗಮವಾಗಲಿಲ್ಲ,
ಆ ದಿವ್ಯ ಚೇತನವನ್ನವರು ಲಿಂಗೈಕ್ಯ ಮಾಡಿದರು.

ಬಂಡಾಯದ ಭಾವಸಮಾಧಿಯಲ್ಲಿ ಬುಸುಗುಡುತ್ತಿದ್ದ ಜೀವ
ಭೂ ತಾಯಿಯ ಒಡಲ ಕಿಚ್ಚಾಗಿ ಅತ್ತಾಗ, ಆ
ಕಣ್ಣೀರ ಸಮುದ್ರದಲ್ಲಿ ಜ್ವಾಲಾಮುಖಿಯಾಗಿ
ಪ್ರಜ್ವಲಿಸಿದ ಬೆಳಗುವ ಸೂರ್ಯ ಅಂಬೇಡ್ಕರ.

ಆತನ ವಿಚಾರ, ಭಾವನೆಗಳನ್ನು
ಸುಡಲಾರರಿವರು, ಬದಲಾಗಿ ಹೀಗೆ
ಹಿಡಿಯಲು, ಸುಡಲು ಬಂದವರೇ ಸುಟ್ಟರು.
ಯಾಕೆಂದರೆ, ಆತ
ಬರೀ ಧ್ಯಾನಸ್ಥನಾಗಲಿಲ್ಲ,
ವಚನಗಳ ನುಡಿಯಲಿಲ್ಲ
ಆತ ಆಡಳಿತದ ಪ್ರಗತಿಯ ಚಕ್ರಕ್ಕೆ ನೀಡಿದ್ದ
''ಕಾಯಕಲ್ಪವ''.



ಆತ ಬುದ್ಧ, ಬಸವರ ಪ್ರೇರಣೆಯಿಂದ
ಅಜ್ಞಾನ, ಅಸಮಾನತೆಯ ಸುಡುವ ಅಕ್ಷರವಾಗಿ
ಸಾವಿಲ್ಲದ ಕಾನೂನು ವ್ಯವಸ್ಥೆಗೆ ಸಾಕ್ಷಿಯಾಗಿ
ಶೋಷಿತರನ್ನು ಎಂದಿಗೂ 'ಸುಡಲಾರದ ಬಗೆ'ಯಲ್ಲಿ
ಪ್ರಗತಿಯ ಸೂರ್ಯನಾದಾತ.

**ವೆಂಕಟೇಶ ಕೆ. ಜನಾದ್ರಿ**
ಲೆಕ್ಕಪತ್ರ ಅಧೀಕ್ಷಕ, ಕೇಂದ್ರ ಕಛೇರಿ, ಈ.ಕ.ರ.ಸಾ. ನಿಗಮ, ಗುಲಬರ್ಗಾ

■ ಡಿ. ಟಿ. ಲೋಹಿತ್




# ಹುಟ್ಟು - ಸಾವುಗಳ ನಡುವಿನ ಸೇತುವೆ ಆಸ್ಪತ್ರೆಯೇ ?

ಹಿರಿಯ ಗೆಳೆಯ ನಟರಾಜನ್ ಅನಿರೀಕ್ಷಿತವಾಗಿ ಮನೆಗೆ ಬಂದಿದ್ದರು. ಕಾಫಿಯಾದ ನಂತರ ಲೋಕಾಭಿರಾಮವಾಗಿ ಮಾತಾಡುತ್ತಾ ಕುಳಿತಿದ್ದೆವು.

''ಮೊನ್ನೆ ಏನಾಯಿತು ಗೊತ್ತೇ ?'' ಎಂದು ಅವರು ಮೊದಲು ಮಾಡಿದಾಗಲೇ ಅವರ ಸ್ವಭಾವವನ್ನು ಚೆನ್ನಾಗಿ ಅರಿತಿದ್ದ ನಾನು, ಉದ್ದ ಕಥೆಯನ್ನು ಕೇಳಲು ಮನಸ್ಸಿನಲ್ಲೇ ತಯಾರಿ ಮಾಡಿಕೊಂಡೆ. ಮತ್ತೇನೂ ಕೆಲಸವಿಲ್ಲದೇ ಕುಳಿತಿದ್ದ ನನಗೆ ಅವರು ಹೇಳುವ ಕಥೆಯನ್ನು ಕೇಳುವುದರಲ್ಲಿ ಏನೂ ಅಭ್ಯಂತರವಿರಲಿಲ್ಲ.

''ನಮ್ಮ ಮನೆಯ ಪಕ್ಕದಲ್ಲಿ ಇದ್ದಾರಲ್ಲಾ, ಆ ತೆಲುಗು ಫ್ಯಾಮಿಲಿ, ಅವರ ಮನೆಯಲ್ಲಿರುವ ಆ ಅಜ್ಜಿಯ ಬಗ್ಗೆ ಮೊನ್ನೆ ಹೇಳಿದ್ದೆನಲ್ಲಾ...''

ನನಗೆ ಅವರ ಪಕ್ಕದ ಮನೆಯಲ್ಲಿ ಮಲಯಾಳಿ ಫ್ಯಾಮಿಲಿ ಇತ್ತೋ, ತೆಲುಗು ಫ್ಯಾಮಿಲಿ ಇತ್ತೋ... ನೆನಪಿರಲಿಲ್ಲ. ಅಲ್ಲದೆ ಅಲ್ಲಿ ಇರುವ ಅಜ್ಜಿಯ ಬಗ್ಗೆ ಮುಂಚೆನೇ ಗೊತ್ತಿರಲಿಲ್ಲ. ಕೈ ಕಾಲಾಡಿಸುತ್ತಾ, ಬಹಳ ಸ್ವಾರಸ್ಯವಾಗಿ ಆ ತೆಲುಗು ಫ್ಯಾಮಿಲಿ ಅಜ್ಜಿಯ ಬಗ್ಗೆ ಕೊರೆತ ಶುರು ಮಾಡಿದರು. ಗೋಣು ಆಡಿಸುತ್ತಾ ಕುಳಿತೆ. ಪರಿಸ್ಥಿತಿಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ ನನ್ನ ಪತ್ನಿ ಎರಡನೆಯ ಬಾರಿ ಕಾಫಿ ಲೋಟ ತಂದು ಬಡಿದಳು. ಸೊರಸೊರನೆ ಬಿಸಿ ಕಾಫಿ ಹೀರುತ್ತಾ ತಮ್ಮ ಕಥೆಯನ್ನು ಮುಂದುವರಿಸಿದರು ನಟರಾಜನ್.

ಕಥೆಯ ಸಾರಾಂಶ ಇಷ್ಟು. ಅವರ ಪಕ್ಕದ ಮನೆಯ ಅಜ್ಜಿಗೆ ೬೨ ವರ್ಷ ವಯಸ್ಸು. ಜೀವನದಲ್ಲಿ ಎಲ್ಲ ರೀತಿಯ ಕಷ್ಟ-ಸುಖಗಳನ್ನೂ ಅನುಭವಿಸಿ ಪಕ್ವವಾದ ಆಕೆಗೆ ತನ್ನ ಮಗನ ಮನೆಯಲ್ಲೇ ಕೊನೆಯುಸಿರೆಳೆಯ ಬೇಕೆಂಬ ಆಸೆ. ಮೂಗು, ಬಾಯಿಗಳಲ್ಲಿ ತೂರಿಸಿದ ಪ್ಲಾಸ್ಟಿಕ್ ಟ್ಯೂಬು ಗಳೊಡನೆ, ಬೀಪ್ ಬೀಪ್ ಎಂದು ಶಬ್ದ ಮಾಡುವ ಕೆಲವಾರು ಮಿನುಗುಟ್ಟುವ ಮಷೀನುಗಳ ಸಂಪರ್ಕ ಕಲ್ಪಿಸುವ ವಯರುಗಳೊಡನೆ ಆಸ್ಪತ್ರೆಯಲ್ಲಿ ಸಾಯುವುದು ಆಕೆಗೆ ಸುತರಾಂ ಇಷ್ಟವಿರಲಿಲ್ಲ. ತನ್ನ ಆಸೆಯನ್ನು ತಮ್ಮ ಮಕ್ಕಳಿಗೆ ಸ್ಪಷ್ಟವಾಗಿ ತಿಳಿಸಿಯೂ ಇದ್ದರು. ಹಾಗಾಗಿ, ಕೊನೆಗಾಲ ಸಮೀಪಿಸಿದೆ ಎನಿಸಿದಾಗ, ಮಕ್ಕಳು, ಮೊಮ್ಮಕ್ಕಳೆಲ್ಲರೂ ಹತ್ತಿರದಲ್ಲಿ ಇದ್ದು, ಮನೆಯಲ್ಲಿಯೇ ಅವರ ಅಂತ್ಯವನ್ನು ಎದುರುನೋಡುತ್ತಿದ್ದರು.

ಈ ಮಧ್ಯೆ ನಮ್ಮ ನಟರಾಜನ್ ಅವರ ಪ್ರವೇಶವಾಯಿತು.

''ಏನು ? ಅಜ್ಜಿಗೆ ಮೈ ಸರಿಯಿಲ್ಲವೇ ?''

''ಹೌದು'', ಹಿರಿಯ ಮಗನ ಉತ್ತರ.

''ಡಾಕ್ಟರಿಗೆ ತೋರಿಸಿದಿರಾ ?'' ಮೌನ. ಅಲ್ಲಿದ್ದ ಯಾರಿಗೂ ಇವರ ಪ್ರಶ್ನೆಗೆ ಉತ್ತರ ಕೊಡುವ ಮನಸ್ಸಿರಲಿಲ್ಲ.

''ಅಯ್ಯಯ್ಯೋ, ಇದೇನಿದು, ಅಜ್ಜಿಗೆ ಸರಿಯಾಗಿ ಉಸಿರಾಡಲೂ ಆಗುತ್ತಿಲ್ಲವಲ್ಲಾ? ಕೂಡಲೆ ಡಾಕ್ಟರನ್ನು ಕರೆಸಬೇಕಲ್ಲವೇ ?''

ಮತ್ತೇ... ಮೌನ. ಈ ವ್ಯಕ್ತಿ ಈಗ ಏಕೆ ಬಂದರಪ್ಪಾ ಎಂಬ ಇರುಸು ಮುರಿಸು. ಆದರೆ ನಟರಾಜನ್ ಬಿಡಬೇಕಲ್ಲ!

''ಅದೇಕೆ ಸುಮ್ಮನೆ ಕುಳಿತಿದ್ದೀರಿ ? ಅಜ್ಜಿಯನ್ನು ಆಸ್ಪತ್ರೆಗಾದರೂ ಸೇರಿಸಿ, ಇಲ್ಲ, ಮನೆಗೆ ಡಾಕ್ಟರನ್ನಾದರೂ ಕರೆಸಿ.''

ಒಂದು ಜೀವಿಯ ಜನನವಾದ ಮೇಲೆ ಮರಣವು ಖಾತ್ರಿಯಾದ್ದರಿಂದ, ಜನನದಿಂದ ಆರಂಭಿಸಿ ಮರಣದವರೆಗಿನ ಜೀವಿತಾವಧಿಯಲ್ಲಿ ಬರುವ ಹಲವಾರು ಸಂದರ್ಭಗಳಲ್ಲಿ ಡಾಕ್ಟರರ, ಆಸ್ಪತ್ರೆಯ ಅವಶ್ಯಕತೆ ಇದ್ದೇ ಇರುತ್ತದೆ. ಜನನದಿಂದ ಮರಣಕ್ಕೆ ಅದೊಂದು ಸೇತುವೆಯೇ ಎನ್ನಬಹುದು. ಆದರೆ ಈ ಪವಿತ್ರವಾದ ವೈದ್ಯ ವೃತ್ತಿಯಲ್ಲಿ ಇರುವ ಜನರು, ಹಾಗೂ ಹೂಡಿಸಿದ ಹಣವು ಹತ್ತರಷ್ಟು ಹಿಂದಕ್ಕೆ ಬರಬೇಕು ಎಂದು ಆಶಿಸುವ ಆಸ್ಪತ್ರೆಗಳ ಮಾಲೀಕರು, ಮಾನವತೆ ಮತ್ತು ತಮ್ಮ ವೃತ್ತಿಯ ಪಾವಿತ್ರ್ಯತೆಯನ್ನು ಎತ್ತಿ ಹಿಡಿಯುವಲ್ಲಿ ಆದ್ಯತೆ ತೋರಿದರೆ ಜನಜೀವನ ಇಷ್ಟೊಂದು ದುರ್ಭರವಾಗದೆ ಇದ್ದೀತು.

''ಹಾಗಲ್ಲ, ಆಸ್ಪತ್ರೆ ಎಂದರೆ ಅಜ್ಜಿಗೆ ಇಷ್ಟವಿಲ್ಲ'', ಹಿರಿಯ ಮಗ ಉತ್ತರಿಸಿದರು.

''ಸರಿ ಹಾಗಾದರೆ, ನನಗೆ ಗೊತ್ತಿರುವ ಒಳ್ಳೆಯ ಡಾಕ್ಟರ್ ಒಬ್ಬರು ಹತ್ತಿರದಲ್ಲೇ ಇದ್ದಾರೆ. ರಿಕ್ವೆಸ್ಟ್ ಮಾಡಿಕೊಂಡರೆ ಮನೆಗೆ ಬಂದು ನೋಡುತ್ತಾರೆ. ನಾನು ಅವರಿಗೆ ಫೋನ್ ಮಾಡುತ್ತೇನೆ, ಹಾಂ, ಫೋನ್ ಎಲ್ಲಿದೆ ಹೇಳಿ.'' ನಟರಾಜನ್ ಕುಳಿತಲ್ಲಿಂದ ಎದ್ದು ಫೋನಿಗಾಗಿ ಸುತ್ತಲೂ ನೋಡಿದರು.

''ಹಾಗಲ್ಲ, ಅಜ್ಜಿಯ ಕೊನೆಯ ಆಸೆ...'', ಎಂದು ಏನನ್ನೋ ಹೇಳಲು ಹೊರಟ ಹಿರಿಯ ಮಗನನ್ನು ಮಾತನಾಡಲು ಬಿಡಲೇ ಇಲ್ಲ ನಟರಾಜನ್. ಒಡನೆಯೇ ಫೋನಿನ ಬಳಿಗೆ ಧಾವಿಸಿ ಡಾಕ್ಟರಿಗೆ ಫೋನ್ ಮಾಡಿಯೇಬಿಟ್ಟರು. ಅಜ್ಜಿಯ ಮನೆಯವರ ದುರಾದೃಷ್ಟಕ್ಕೆ ಆ ಡಾಕ್ಟರೂ ಸಿಕ್ಕಿ, ಮನೆಗೆ ಕೂಡಲೇ ಬರಲೂ ಒಪ್ಪಿಕೊಂಡುಬಿಡಬೇಕೇ! ಅಂತೂ ಹತ್ತು ನಿಮಿಷದೊಳಗೆ ಡಾಕ್ಟರ್ ಬಂದದ್ದೂ ಆಯಿತು, ಅರೆಪ್ರಜ್ಞೆಯಲ್ಲಿ ನಿಶ್ಚೇಷ್ಟಿತವಾಗಿದ್ದ ಅಜ್ಜಿಯ ನಾಡಿ, ಶ್ವಾಸಕೋಶಗಳ ಪರೀಕ್ಷೆ ಮಾಡಿದ್ದೂ ಆಯಿತು, ಮುಚ್ಚಿದ್ದ ಕಣ್ಣಿನ ರೆಪ್ಪೆಯನ್ನು ಬಲವಂತವಾಗಿ ಹಿಗ್ಗಳಿಸಿ ನೋಡಿದ್ದೂ ಆಯಿತು. ಕನ್ನಡಕ ತೆಗೆದು ಸಿನಿಮಾದಲ್ಲಿ ಮಾಡುವಂತೆ ಅಡ್ಡಡ್ಡವಾಗಿ ತಲೆಯಾಡಿಸಿ, ''ಇಮ್ಮೀಡಿಯೆಟ್ ಆಗಿ ಆಸ್ಪತ್ರೆಗೆ ಸೇರಿಸುವುದು ಒಳ್ಳೆಯದು, ಈಗಾಗಲೇ ಕೋಮಾ ಸೆಟ್ ಆಗುವ ಪರಿಸ್ಥಿತಿ ಬಂದಿದೆ'', ಎಂದು ಆಜ್ಞೆ ಸಲಹೆ ನೀಡಿದ್ದೂ ಆಯಿತು. ಇನ್ನು ನಟರಾಜನ್ ಅವರನ್ನು ತಡೆಯುವವರಾರು? ಒಂದು ಕ್ಷಣವನ್ನೂ ವ್ಯರ್ಥಮಾಡದೆ, ಅಲ್ಲಿದ್ದ ಯಾರ ಅನುಮತಿಯನ್ನೂ ಕೇಳದೆ, ಆಂಬ್ಯುಲೆನ್ಸ್‌ಗೆ ಕರೆ ಮಾಡಿಯೇಬಿಟ್ಟರು. ಐದೇ ನಿಮಿಷಗಳಲ್ಲಿ 'ಪೂಂ ಪ್ಯಾಂ' ಎಂದು ಚೀರುತ್ತಾ ಒಂದು ಬಿಳಿಯ ಆಂಬ್ಯುಲೆನ್ಸ್ ಮನೆ ಬಾಗಿಲ ಮುಂದೆ ಬಂದು ನಿಂತೇಬಿಡ್ತು. ಬಹು ಮುಖ್ಯ ವಿಷಯ ಏನನ್ನೋ ಹೇಳಲು ತವಕಪಡುತ್ತಿದ್ದ ಅಜ್ಜಿಯ ಹಿರಿಯ ಮಗನಿಗೆ ಬಾಯಿ ತೆರೆಯಲು ಅವಕಾಶವನ್ನೇ ಕೊಡದ ನಟರಾಜನ್ ತಾವೇ ಖುದ್ದಾಗಿ ಮಗನ ಸ್ಥಾನದಲ್ಲಿ ಮುಂದೆ ನಿಂತು, ಅಜ್ಜಿಯನ್ನು ನಗರದ ಅತಿ ದೊಡ್ಡ ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗೆ ಸೇರಿಸಿಯೆಬಿಟ್ಟರು.

ಉಳಿದದ್ದೆಲ್ಲಾ ಮಾಮೂಲಿ. ಅರ್ಧ ಮೂರ್ಛಾವಸ್ಥೆಯಲ್ಲಿ ಇದ್ದ ಅಜ್ಜಿಯನ್ನು ಕಂಡು ಕೇಳರಿಯದ ಹಲವಾರು ಟೆಸ್ಟ್‌ಗಳಿಗೆಲ್ಲಾ ಒಳಪಡಿಸಲಾಯಿತು. ನಂತರ 'ಐ.ಸಿ.ಯು.'ನಲ್ಲಿ ಮಲಗಿಸಿ, ಒಂದಷ್ಟು ಟ್ಯೂಬುಗಳನ್ನು ಮೂಗು ಬಾಯಿಗಳಲ್ಲಿ ತೂರಿಸಿ ಅದೇನೇನೋ ಔಷಧಿಗಳನ್ನೆಲ್ಲಾ ಅವುಗಳ ಮೂಲಕ ದೇಹದೊಳಗೆ ಕಳಿಸಿದ್ದಾಯಿತು. ಮೈಯಿನ ಹಲವಾರು ಭಾಗಗಳಿಗೆ ಅನೇಕ ಮಷೀನುಗಳನ್ನು ವಯರುಗಳ ಮೂಲಕ ಜೋಡಿಸಲಾಯಿತು. ಪಾಪ! ಅಜ್ಜಿಗೆ ತಾನೆಲ್ಲಿದ್ದೇನೆಂಬ ಅರಿವೇ ಇರಲಿಲ್ಲವೇನೋ. ಹಲವಾರು ಇಂಜೆಕ್ಷನ್‌ಗಳನ್ನು ತೋಳು, ಸೊಂಟಕ್ಕೆ ಚುಚ್ಚಿದಾಗ ಮಾತ್ರ ನೋವಿನಿಂದ ಮುಖ ಕಿವಿಚುವುದು ಕಾಣಿಸುತ್ತಿತ್ತು. ಐ.ಸಿ.ಯು. ಆದ್ದರಿಂದ ಒಳಗೆ ಯಾರನ್ನೂ ಬಿಡುತ್ತಿರಲಿಲ್ಲ. ದಿನಕ್ಕೆ ಎರಡು ಬಾರಿ ಮಾತ್ರ ಒಬ್ಬರು ಎರಡು ನಿಮಿಷ ಮಾತ್ರ ಒಳಗೆ ಹೋಗಲು ಅವಕಾಶವಿತ್ತು. ಒಳಗೆ ಹೋದವರು ನಿರ್ಜೀವಿಯಂತೆ ಮಲಗಿದ್ದ ಅಜ್ಜಿಯನ್ನು ನೋಡಿ, ಸಪ್ಪೆ ಮುಖ ಮಾಡಿಕೊಂಡು ಹೊರಗೆ ಬರುತ್ತಿದ್ದರು. ಏನಾಗುತ್ತಿದೆ, ಅಜ್ಜಿ ಬದುಕುಳಿಯುತ್ತಾರೆಯೇ, ಇನ್ನೆಷ್ಟು ದಿನ ಐ.ಸಿ.ಯು.ನಲ್ಲಿ ಇರಬೇಕಾಗಬಹುದು, ಯಾರಿಗೂ ಏನೂ ಗೊತ್ತಿಲ್ಲ. ಡಾಕ್ಟರನ್ನು ಕೇಳಿದರೆ, ''ಈಗಲೇ ಏನೂ ಹೇಳಲು ಬರುವಂತಿಲ್ಲ, ಅವರನ್ನು ಆಬ್ಸರ್‌ವೇಶನ್‌ನಲ್ಲಿ ಇಟ್ಟಿದ್ದೇವೆ'', ಎಂದಿಷ್ಟು ಮಾತ್ರವೇ ಜವಾಬು ಬರುತ್ತಿತ್ತು. ಈ ಮಧ್ಯೆ ಶ್ರೀಮಾನ್ ನಟರಾಜನ್ ಬಂದು, ಐ.ಸಿ.ಯು.ನ ಹೊರಗಡೆ ಕಾದು ಕಾದು ಸತ್ತು ಸುಣ್ಣವಾಗಿದ್ದ ಅವರ ಮಕ್ಕಳು ಮೊಮ್ಮಕ್ಕಳಿಗೆ ಸಾಂತ್ವನ ಹೇಳಿಹೋಗಿಯೂ ಆಯಿತು.

ಅಂತೂ ಈ ನರಕವಾಸದ ಐದನೆಯ ದಿನದ ಸಂಜೆ ಆರು ಘಂಟೆಯ ಸಮಯಕ್ಕೆ ಡಾಕ್ಟರು ಐ.ಸಿ.ಯು.ನ ಹೊರಗೆ ಬಂದು, ''ಈ ಅಜ್ಜಿಯ ಪೈಕಿ ಜನ ಯಾರು?'' ಎಂದು ಕೇಳಿದರು. ಅಲ್ಲೇ ಇದ್ದ, ಅಜ್ಜಿಯ ಹಿರಿಯ ಮಗ ಡಾಕ್ಟರ ಬಳಿಗೆ ಓಡಿ ಹೋಗಿ ವಿಧೇಯನಾಗಿ ನಿಂತು ವಿಷಯ ಏನೆಂದು ಕೇಳಿದರು. ಡಾಕ್ಟರ್ ಮಹಾಶಯರು ಹೇಳಿದುದು ಇಷ್ಟೇ: ''ನೋಡಿ, ನಾವು ಮಾಡುವ ಪ್ರಯತ್ನವನ್ನೆಲ್ಲಾ ಮಾಡಿ ಆಯಿತು. ನಿಮ್ಮ ತಾಯಿಯವರು ತೀರಿಕೊಂಡಿದ್ದಾರೆ. ಇನ್ನು ಅವರ ಬಾಡಿಯನ್ನು ತೆಗೆದುಕೊಂಡು ಹೋಗಬಹುದು.'' ತಾಯಿಯ ಶವವನ್ನು ತೆಗೆದುಕೊಂಡು ಹೋಗಲು ತಯಾರಿ ಮಾಡುತ್ತಿರುವಾಗ ಮಗನಿಗೆ ದೊಡ್ಡ ಆಘಾತವೇ ಕಾದಿತ್ತು. ಆಸ್ಪತ್ರೆಯ ಪೂರ್ತಿ ಬಿಲ್ ಕಟ್ಟಿದ ನಂತರವೇ ಬಾಡಿಯನ್ನು ರಿಲೀಸ್ ಮಾಡುತ್ತಾರಂತೆ ಎಂಬ ವಿಷಯ ತಿಳಿಯಿತು. ಅಕೌಂಟ್ಸ್ ವಿಭಾಗಕ್ಕೆ ಹೋದಾಗ ಅರ್ಧ ಘಂಟೆ ಕಾಯಿಸಿ ಬಿಲ್ಲನ್ನು ಕೈಗೆ ಕೊಟ್ಟರು. ಬಿಲ್ ಮೊತ್ತ ಕೇವಲ ಎರಡು ಲಕ್ಷ ಎಂಭತ್ತು ಸಾವಿರದ ನಾನೂರ ಮೂವತ್ತೆರಡು ರೂಪಾಯಿಗಳು. ಪುತ್ರನಿಗೆ ಪ್ರೀತಿಯ ತಾಯಿಯ ಅಗಲಿಕೆಗಿಂತ ಬಿಲ್ ಕಟ್ಟುವ ಶೋಕ ದೊಡ್ಡದಾಗಿ ಕಂಡಿತು. ಅಂತೂ ಎಲ್ಲ ಮಕ್ಕಳೂ ಮೊಮ್ಮಕ್ಕಳೂ ಸೇರಿ, ಇದ್ದ ಬದ್ದ ಹಣವನ್ನೆಲ್ಲಾ ಒಟ್ಟುಗೂಡಿಸಿ, ಬಿಲ್ ಕಟ್ಟಿ ಅಜ್ಜಿಯ ಶವವನ್ನು ಮನೆಗೆ ತಂದರು. ಅಂತ್ಯ ಸಂಸ್ಕಾರದ ಸಮಯದಲ್ಲೂ ಸಂಪ್ರದಾಯದ ಬಗ್ಗೆ ಉಪದೇಶಿಸಲು ಮುಂದಾದ ಶ್ರೀಮಾನ್ ನಟರಾಜನ್ ಅವರನ್ನು ದೂರದಲ್ಲಿಯೇ ಇಟ್ಟು, ಸ್ವಲ್ಪ ಗಟ್ಟಿಯಾಗಿಯೇ ಗದರಿಸಿ, ಅಜ್ಜಿಯ ಇಚ್ಛೆಯಂತೆ ಸರಳವಾಗಿ ಸಂಸ್ಕಾರವನ್ನು ಮಾಡಿಮುಗಿಸಿದರು.

ಈ ಕಥೆ ಹೇಗೇ ಇರಲಿ, ನಟರಾಜನ್ ಅವರ ಅಭಿಪ್ರಾಯವೇ ಬೇರೆ :

''ನೋಡಿ, ಆ ಸಂಸಾರದವರಿಗೆ ಸ್ವಲ್ಪವಾದರೂ ಸೆನ್ಸ್ ಬೇಡವೇ? ಮೈ ಸರಿಯಿಲ್ಲದೆ ನರಳುತ್ತಿರುವ ಮುದುಕಿಯನ್ನು ಮನೆಯಲ್ಲಿಯೇ ಇಟ್ಟುಕೊಂಡು, ಡಾಕ್ಟರಿಗೆ ತೋರಿಸದೆ, ನೋವು ಅನುಭವಿಸಲು ಬಿಟ್ಟುಬಿಟ್ಟಿದ್ದರಲ್ಲಾ, ಇದು ಸರಿಯೇ ನೀವೇ ಹೇಳಿ. ನಾನು ಮಧ್ಯಪ್ರವೇಶ ಮಾಡಿದ್ದರಿಂದ ಪರಿಸ್ಥಿತಿ ಸ್ವಲ್ಪವಾದರೂ ಸುಧಾರಿಸಿತು. ಇಲ್ಲದಿದ್ದರೆ ಪಾಪ ಆ ಮುದುಕಿಯ ಗತಿ ಏನು?''

''ಹಾಯಾಗಿ ಅವರ ಆಸೆಯಂತೆ ಮನೆಯಲ್ಲಿಯೇ ನೆಮ್ಮದಿಯಿಂದ ಪ್ರಾಣ ಬಿಡುತ್ತಿದ್ದರು. ಅನಾವಶ್ಯಕವಾಗಿ ಆಸ್ಪತ್ರೆಯಲ್ಲಿ ಮಾಡಿದ ಮೂರು ಲಕ್ಷ ರೂಪಾಯಿ ಖರ್ಚಾದರೂ ಉಳಿಯುತ್ತಿತ್ತು.'' ನಾಲಿಗೆಯ ತುದಿಯಲ್ಲಿದ್ದ ಮಾತುಗಳನ್ನು ಕಷ್ಟಪಟ್ಟು ಅದುಮಿಕೊಂಡೆ.

ತಾವು ಮಾಡಿದ ಘನಕಾರ್ಯದ ಬಗ್ಗೆ ಹೆಮ್ಮೆಪಡುತ್ತಾ ನಟರಾಜನ್ ಅವರೇನೋ ಪಾದ ಬೆಳೆಸಿದರು. ಆದರೆ ಈ ಇಡೀ ಘಟನೆಯು ನನ್ನ ಮನಸ್ಸಿನಾಳದಲ್ಲಿ ಹುದುಗಿ ಕುಳಿತಿದ್ದ ಹಲವಾರು ಆಲೋಚನೆಗಳನ್ನು ಬಡಿದೆಬ್ಬಿಸಿತು.

ನಟರಾಜನ್ ಮಾಡಿದುದನ್ನು ಹೊಗಳಬೇಕೋ, ತೆಗಳಬೇಕೋ ತಿಳಿಯದು. ಅಜ್ಜಿಯ ಮಕ್ಕಳ ಮನಸ್ಸಿನಲ್ಲಿ ಇದ್ದುದನ್ನು ಮಾಡಲು ಅವಕಾಶ ಕೊಡದೆ, ಅಜ್ಜಿಯ ಕೊನೆಯಾಸೆಯನ್ನೂ ತೀರಿಸಲು ಬಿಡದೆ, ತನ್ನದೇ ಅಭಿಪ್ರಾಯವನ್ನು ಅವರ ಮೇಲೆ ಹೇರಿದ್ದು ಸರಿಯೇ? ತನ್ನ ಕೊನೆಗಾಲದಲ್ಲಿ ಆಸ್ಪತ್ರೆಗೆ ಸೇರದೆ, ತನ್ನ ಮಕ್ಕಳ ಮನೆಯಲ್ಲೇ ನೆಮ್ಮದಿಯಿಂದ ಸಾಯಲು ಇಷ್ಟಪಟ್ಟ ಅಜ್ಜಿಗೆ ಅಷ್ಟೂ ಸ್ವಾತಂತ್ರ್ಯ ಇಲ್ಲವೇ? ನಟರಾಜನ್ ಅವರ ಪ್ರವೇಶದಿಂದ ಆದ ಮಹತ್ ಸಾಧನೆ ಎಂದರೆ ಹಾಯಾಗಿ ತನ್ನ ಮಕ್ಕಳ ಕಣ್ಣೆದುರಿಗೆ ಕೊನೆಯುಸಿರೆಳೆಯುತ್ತಿದ್ದ ಅಜ್ಜಿಯ ಸಾವನ್ನು ಐದು ದಿನಗಳವರೆಗೆ ಮುಂದೂಡಿದುದು, ಅಷ್ಟೆ. ಆದರೆ ಅದಕ್ಕೆ ಆದ ಖರ್ಚು ಎಷ್ಟು? ಸುಮಾರು ಮೂರು ಲಕ್ಷ ಖರ್ಚು ಮಾಡಿ ಅಜ್ಜಿ ಆಸ್ಪತ್ರೆಯಲ್ಲಿ ನರಕ ಅನುಭವಿಸಿ, ಐದು ದಿನ ಅತ್ತ ಬದುಕದೆ ಇತ್ತ ಸಾಯದೆ ಸುಮ್ಮನೆ ಉಳಿದುದರಿಂದ ಯಾರಿಗೆ ಪ್ರಯೋಜನವಾಯಿತು? ಈ ರೀತಿ ಆಗಬಾರದೆಂದೇ ಅಲ್ಲವೇ ಅಜ್ಜಿ ಆಸೆ ಪಟ್ಟದ್ದು? ''ನಾನು ಜೀವನದಲ್ಲಿ ಎಲ್ಲ ರೀತಿಯ ಕಷ್ಟಸುಖಗಳನ್ನೂ ಅನುಭವಿಸಿ ಆಗಿದೆ. ಮಕ್ಕಳು ಮೊಮ್ಮಕ್ಕಳನ್ನು ನೋಡಿ ಆಗಿದೆ. ನೆಮ್ಮದಿಯಿಂದ ತೀರಿಕೊಳ್ಳುವ ಆಸೆ ಮಾತ್ರ ತೀರಿದರೆ ಸಾಕು. ನನ್ನ ಕೊನೆ ಕಾಲ ಬಂದರೆ ದಯವಿಟ್ಟು ಆಸ್ಪತ್ರೆಗೆ ಸೇರಿಸಬೇಡಿ. ಮನೆಯಲ್ಲೇ, ನನ್ನ ಮಕ್ಕಳು ಮೊಮ್ಮಕ್ಕಳ ಎದುರಿನಲ್ಲೇ ಸಾಯಲು ಬಿಡಿ'' ಎಂದು ಕೇಳಿಕೊಂಡ ಅಜ್ಜಿಯ ಕೊನೆಯ ಆಸೆಯನ್ನು ತೀರಿಸಲು ಅವರ ಮಕ್ಕಳಿಗೆ ನಟರಾಜನ್ ಅಡ್ಡಿಯಾದರು. ಆದರೆ ತಾನು ಮಾಡಿದುದು ಮಾತ್ರ ಮಹತ್ಕಾರ್ಯ ಎಂಬ ಭಾವನೆ ನಟರಾಜನ್ ಅವರಲ್ಲಿ ಇದೆ. ಅವರ ದೃಷ್ಟಿಯಲ್ಲಿ ಮಕ್ಕಳು ಮೊಮ್ಮಕ್ಕಳು ಅಜ್ಜಿಯ ಬಗ್ಗೆ ತಾತ್ಸಾರದ ಮನೋಭಾವ ತೋರಿದರು; ತಾವು ಮಾಡಬೇಕಾದ ಕರ್ತವ್ಯದಲ್ಲಿ ಮಹಾಲೋಪ ಮಾಡಿದರು.




ನನ್ನ ತಾಯಿ ತನ್ನ ೮೮ನೇ ವಯಸ್ಸಿನಲ್ಲಿ ತೀರಿಕೊಂಡಾಗಲೂ ಹೆಚ್ಚು ಕಡಿಮೆ ಇದೇ ರೀತಿಯ ವಾತಾವರಣ ಇದ್ದಿತು. ಹಲವಾರು ವರುಷಗಳ ಮುಂಚಿತವಾಗಿಯೇ ನನ್ನನ್ನು ಹತ್ತಿರ ಕರೆದು, ಆಕೆ ಹೇಳಿದ ಮಾತುಗಳು ಚೆನ್ನಾಗಿ ನೆನಪಿದೆ : ''ನೋಡು, ನಾನು ಜೀವನದಲ್ಲಿ ನೋಡಬೇಕಾದದ್ದನ್ನೆಲ್ಲಾ ನೋಡಿ ಆಗಿದೆ. ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳನ್ನೂ ನೋಡಿ ಆನಂದಿಸಿ ಆಯಿತು. ಹಲವಾರು ಕಷ್ಟಕಾರ್ಪಣ್ಯಗಳನ್ನೂ ಅನುಭವಿಸಿ ಆಯಿತು. ಬದುಕುಳಿದಿರುವ ಒಬ್ಬನೇ

ಮಗನಾದ ನೀನು ನನ್ನ ಕೆಲವು ಕಡೆಯ ಆಸೆಗಳನ್ನು ನೆರವೇರಿಸಬೇಕು. ಎಲ್ಲಕ್ಕಿಂತ ಮುಖ್ಯವಾದುದೆಂದರೆ ನನಗೆ ಆಸ್ಪತ್ರೆಯಲ್ಲಿ ಸಾಯುವುದು ಇಷ್ಟವಿಲ್ಲ. ಮೈಯಲ್ಲಿ ಹಲವಾರು ಪ್ಲಾಸ್ಟಿಕ್ ಟ್ಯೂಬುಗಳೊಡನೆ, ಇಂಜೆಕ್ಷನ್ ಚುಚ್ಚಿಸಿಕೊಂಡು ಕೊನೆಯುಸಿರೆಳೆಯುವುದಕ್ಕಿಂತ ಅತೀವ ನೋವು ಅನುಭವಿಸಿದರೂ ಚಿಂತೆಯಿಲ್ಲ, ನನ್ನ ಆತ್ಮೀಯರೆದುರು ಮನೆಯಲ್ಲಿಯೇ ಸಾಯುತ್ತೇನೆ. ಕೊನೆಗಾಲದಲ್ಲಿ ಎಷ್ಟೇ ಕಷ್ಟವಾದರೂ ಪರವಾಗಿಲ್ಲ, ನನ್ನನ್ನು ಆಸ್ಪತ್ರೆಗೆ ಸೇರಿಸಬೇಡ. ಯಾವ ಡಾಕ್ಟರನ್ನೂ ಮನೆಗೆ ಕರೆಸಬೇಡ. ಮನೆಯಲ್ಲಿಯೇ ಸಾಯಲು ಬಿಡು.

''ಮತ್ತೊಂದು ವಿಷಯ. ನಾನು ಸತ್ತ ಒಡನೇ ಯಾರಿಗೂ ತಿಳಿಸಬೇಡ. ತಿಳಿದರೆ ಬೇರೆ ಊರುಗಳಲ್ಲಿರುವ ನನ್ನ ಒಡಹುಟ್ಟಿದವರು ಮತ್ತೆ ಕೆಲವು ನೆಂಟರು, ಹಿತೈಷಿಗಳು ಬಂದು ನೋಡಲು ಆಸೆ ಪಡಬಹುದು. ಅವರಲ್ಲಿ ಅನೇಕರಿಗೆ ಸಾಕಷ್ಟು ವಯಸ್ಸಾಗಿದೆ. ಅವರು ಅಷ್ಟು ದೂರ ಪ್ರಯಾಣ ಮಾಡಿ ನನ್ನ ಹೆಣವನ್ನು ನೋಡಲು ಬರುವುದು ಬೇಡ. ಅವರಿಗೆಲ್ಲಾ ತುಂಬ ಶ್ರಮವಾಗುವುದಕ್ಕಿಂತ ಅವರ ಮನಸ್ಸಿನಲ್ಲಿ ನಾನು ಬದುಕಿರುವಾಗಿನ ಸಿಹಿ ನೆನಪುಗಳು ಉಳಿಯಲಿ. ನನ್ನ ದೇಹವನ್ನು ಸುಟ್ಟ ನಂತರ ಎಲ್ಲರಿಗೂ ತಿಳಿಸು. ಮರಣದ ನಂತರ ಮಾಡುವ ಅಂತ್ಯಕ್ರಿಯೆಗಳಲ್ಲಿ ನನಗೆ ಯಾವ ನಂಬಿಕೆಯೂ ಇಲ್ಲ. ಆದ್ದರಿಂದ ಈ ೯ನೇ ದಿವಸದಿಂದ ಆರಂಭಿಸಿ ೧೩ನೇ ದಿವಸದ ತನಕ ಮಾಡುವ ಯಾವ ಕ್ರಿಯೆಗಳನ್ನೂ ಮಾಡಬಾರದು. ಮಾಸಿಕ ಮತ್ತು ಪ್ರತಿವರುಷ ಮಾಡುವ ತಿಥಿ ಮುಂತಾದ ಯಾವ ವಿಧಿಗಳನ್ನೂ ಮಾಡಬಾರದು. ಅವೆಲ್ಲವನ್ನೂ ಮಾಡಲೇಬೇಕೆಂದು ಕೆಲವು ಹಿರಿಯರು ಒತ್ತಾಯ ತರುತ್ತಾರೆ. ಇವೆಲ್ಲಾ ಈ ಕಾಲದಲ್ಲಿ ಪ್ರಸ್ತುತ ಎಂದು ನನಗೆ ಅನಿಸುವುದಿಲ್ಲ. ಅವು ಕೇವಲ ಪುರೋಹಿತರ ಜೇಬು ತುಂಬುವ ಸಂಪ್ರದಾಯಗಳಷ್ಟೆ. ನಿನಗೆ ಒಪ್ಪಿಗೆಯಾದರೆ ನಾನು ಸತ್ತ ದಿನದಂದು ಯಾವುದಾದರೂ ಅನಾಥಾಲಯದಲ್ಲೋ, ಆಸ್ಪತ್ರೆಯಲ್ಲೋ ಒಂದಷ್ಟು ಅನ್ನ ದಾನವನ್ನೋ, ವಸ್ತ್ರ ದಾನವನ್ನೋ ಮಾಡು.'' ನಾನು ಇವೆಲ್ಲಕ್ಕೂ ತಲೆದೂಗಿದೆ. ಆಕೆಯ ಚಿಂತನೆಯನ್ನು ಮೆಚ್ಚಿದೆ. ನನಗಿಂತ ಒಂದು ತಲೆಮಾರು ಹಿಂದಿನ, ಸಂಪ್ರದಾಯಸ್ಥ ವಾತಾವರಣದಲ್ಲಿ ಬೆಳೆದು ಬಾಳಿದ, ನನ್ನ ತಾಯಿಯ ಬಾಯಿಂದ ಇಂತಹ ವಿವೇಕದ ಮಾತುಗಳನ್ನು ಕೇಳಿ ನನಗೆ ತುಂಬ ಸಂತೋಷವೇ ಆಗಿತ್ತು.

ನನ್ನ ತಾಯಿಯ ಮುಂದಾಲೋಚನೆ ನನಗೆ ತುಂಬ ಹಿಡಿಸಿತು. ಆಕೆ ಬರೆದ ಆ ಕಾಗದ (ಅದನ್ನು 'ವಿಲ್' ಎಂದೇ ಹೇಳಬಹುದು) ಅವರ ಊಹೆಯಂತೆಯೇ ನನಗೆ ತುಂಬ ಉಪಯೋಗಕ್ಕೆ ಬಂದಿತು. ಆ ವಿಲ್ ಇಲ್ಲದಿದ್ದರೆ ಆಕೆಯ ಕೊನೆ ಆಸೆಯನ್ನು ಪೂರೈಸಲು ಕೆಲವು ಹಿರಿಯ ಸಂಪ್ರದಾಯಸ್ಥರಿಂದ ನನಗೆ ಸಾಕಷ್ಟು ಅಡ್ಡಿ-ಆತಂಕಗಳು ಎದುರಾಗುತ್ತಿದ್ದುವು ಎಂದು ಇಲ್ಲಿ ವಿಶೇಷವಾಗಿ ಬೇರೆ ಹೇಳಬೇಕಾಗಿಲ್ಲ.

ಈಚಿನ ದಿನಗಳಲ್ಲಿ ಜನನವಾಗಲೀ ಮರಣವಾಗಲೀ ಮನೆಗಳಲ್ಲಿ ಆಗುವುದೇ ಇಲ್ಲ. ಎಲ್ಲರಿಗೂ ಎಲ್ಲಕ್ಕೂ ಆಸ್ಪತ್ರೆಯೇ ಆಗಬೇಕು. ಸಹಜ ಜನನವಾಗಲೀ, ಮರಣವಾಗಲೀ ತೀರ ಅಪರೂಪ. ಇಳಿವಯಸ್ಸಿನಿಂದ ಸಹಜವಾಗಿ, ಡಾಕ್ಟರರ ಪ್ರವೇಶವಿಲ್ಲದೆ, ಮನೆಯಲ್ಲಿಯೇ ಕೊನೆಯುಸಿರು ಎಳೆಯುವ ವ್ಯಕ್ತಿಗಳು ಲಕ್ಷಕ್ಕೆ ಒಬ್ಬರಿದ್ದರೂ ಹೆಚ್ಚೇ. ಅಂತೆಯೇ ಮನೆಯಲ್ಲಿಯೇ ಮಗುವನ್ನು ಹೆರುತ್ತೇನೆ ಎಂದು ಯಾರಾದರೂ ಹೆಣ್ಣುಮಗಳು ಆಸೆಪಟ್ಟರೂ, ಮನೆಗೆ ಬಂದು ಹೆರಿಗೆ ಮಾಡಿಸಲು ತಯಾರಿರುವ ಡಾಕ್ಟರು ಅಥವಾ ದಾದಿ (ಮಿಡ್‌ವೈಫ್) ಈ ಕಾಲದಲ್ಲಿ ಎಲ್ಲೂ ಸಿಗುವುದಿಲ್ಲ. ಹೆರಿಗೆ ಆಸ್ಪತ್ರೆಗೆ ಸೇರಿ ಅಲ್ಲಿ ಪ್ರಸವಿಸುವುದು ಬಿಟ್ಟರೆ ಬೇರೆ ದಾರಿಯಿಲ್ಲ. ಆಸ್ಪತ್ರೆ ಅಥವಾ ನರ್ಸಿಂಗ್ ಹೋಂಗೆ ಸೇರಿದ ಗರ್ಭಿಣಿಯರಲ್ಲಿ ಕಡೇಪಕ್ಷ ಶೇ. ೭೫ ಮಹಿಳೆಯರಿಗೆ ಸಿಜೇರಿಯನ್ ಶಸ್ತ್ರಚಿಕಿತ್ಸೆಯ ಮೂಲಕವೇ ಹೆರಿಗೆ ಆಗುತ್ತದೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಹಾಗಾದರೆ ಇದರರ್ಥ ಈ ಕಾಲದ ಹೆಣ್ಣುಮಕ್ಕಳು ಮಗುವನ್ನು ಸಹಜವಾಗಿ ಹೆರಲು ಅಸಮರ್ಥರೆಂದೇ ? ಸಾಮಾನ್ಯವಾಗಿ ೨೮೦ ದಿನಗಳ ಗರ್ಭಧಾರಣೆಯ ನಂತರ ಶಿಶುವು ಹುಟ್ಟುವುದು ಪ್ರಕೃತಿ ಸಹಜ. ಡಾಕ್ಟರ ಸಲಹೆಯ ಮೇರೆಗೆ ನರ್ಸಿಂಗ್ ಹೋಂಗೆ ಸರಿಯಾದ ಸಮಯಕ್ಕೆ ಹೋಗಿ ಸೇರಿದ ಗರ್ಭಿಣಿಯರಲ್ಲಿ ಸಂಪೂರ್ಣ ಆರೋಗ್ಯಕರವಾಗಿದ್ದ ಕೆಲವರಿಗೆ, ಕಡೆಯ ನಿಮಿಷದಲ್ಲಿ ಅವಸರ ಅವಸರವಾಗಿ ಸಿಜೇರಿಯನ್ ಮಾಡಿ ಮಗುವನ್ನು ಹೊರತೆಗೆದ ದಾಖಲೆಗಳು ಅನೇಕವಿವೆ.

ಒಂದು ಜೀವಿಯ ಜನನವಾದ ಮೇಲೆ ಮರಣವು ಖಾತ್ರಿಯಾದ್ದರಿಂದ, ಜನನದಿಂದ ಆರಂಭಿಸಿ ಮರಣದವರೆಗಿನ ಜೀವತಾವಧಿಯಲ್ಲಿ ಬರುವ ಹಲವಾರು ಸಂದರ್ಭಗಳಲ್ಲಿ ಡಾಕ್ಟರರ, ಆಸ್ಪತ್ರೆಯ ಅವಶ್ಯಕತೆ ಇದ್ದೇ ಇರುತ್ತದೆ. ಜನನದಿಂದ ಮರಣಕ್ಕೆ ಅದೊಂದು ಸೇತುವೆಯೇ ಎನ್ನಬಹುದು. ಆದರೆ ಈ ಪವಿತ್ರವಾದ ವೈದ್ಯ ವೃತ್ತಿಯಲ್ಲಿ ಇರುವ ಜನರು, ಹಾಗೂ ಹೂಡಿಸಿದ ಹಣವು ಹತ್ತರಷ್ಟು ಹಿಂದಕ್ಕೆ ಬರಬೇಕು ಎಂದು ಆಶಿಸುವ ಆಸ್ಪತ್ರೆಗಳ ಮಾಲೀಕರು, ಮಾನವತೆ ಮತ್ತು ತಮ್ಮ ವೃತ್ತಿಯ ಪಾವಿತ್ರ್ಯತೆಯನ್ನು ಎತ್ತಿ ಹಿಡಿಯುವಲ್ಲಿ ಆದ್ಯತೆ ತೋರಿದರೆ ಜನಜೀವನ ಇಷ್ಟೊಂದು ದುರ್ಭರವಾಗದೆ ಇದ್ದೀತು.

''ವೈದ್ಯೋ ನಾರಾಯಣೋ ಹರಿ'' ಎಂದು ಆರೋಗ್ಯತಜ್ಞನನ್ನು ಗೌರವಿಸುವ ನಾವು :

''ಜನನವು ನಮ್ಮ ಕೈಯಲ್ಲಿಲ್ಲ
ಮರಣವು ಯಾರಿಗೂ ತಪ್ಪಿದುದಲ್ಲ
ಹುಟ್ಟುಸಾವಿನ ನಡುವೆ ಜೀವನವೆಂಬ ಈ ರೋಗ-ರುಜಿನಗಳ ಪಯಣದಲ್ಲಿ
ಮನುಜರೆಂದು ಪರಿಗಣಿಸಿ ಕಾಪಾಡು ಎಮ್ಮನು ಹರ ಹರಾ ನೀನೇ ಗತಿ ವೈದ್ಯೇಶ್ವರಾ !!''
– ಎಂದು ವೈದ್ಯಗಣವನ್ನು ಪ್ರಾರ್ಥಿಸೋಣವೆ ?

**ಡಿ. ಟಿ. ಲೋಹಿತ್**
೬-೧-೧೩೨/೧೨, 'ಸ್ಕಂದಗಿರಿ', ಪದ್ಮರಾವ್ ನಗರ, ಸಿಕಂದರಾಬಾದ್ - ೫೦೦ ೦೬೧

## ಸುದ್ದಿ ಚಿತ್ರ



(ಎ. ಬಲಕ್ಕೆ) ಶ್ರೀ ಟಿ. ಆರ್. ಅನಂತರಾಮು, ಶ್ರೀ ಸಿ. ಆರ್. ಕೃಷ್ಣರಾವ್, ಪ್ರೊ॥ ಅಡ್ಯನಡ್ಕ ಕೃಷ್ಣ ಭಟ್, ಪ್ರೊ॥ ಸಿ. ವಿ. ವಿಶ್ವೇಶ್ವರ, ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್ ಮತ್ತು ಶ್ರೀ ಆರ್. ಎಸ್. ರಾಜಾರಾಮ್



ಈ ಗ್ರಂಥದ ಪೂರ್ವ ತಯಾರಿಯ ಯೋಜನೆಯಲ್ಲಿ ಭಾಗವಹಿಸಿದವರು.

ದಿನಾಂಕ ೨೨-೫-೨೦೧೧ ಭಾನುವಾರ, ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ 'ನವಕರ್ನಾಟಕ ವಿಜ್ಞಾನ-ತಂತ್ರಜ್ಞಾನ ಪದಸಂಪದ' ಗ್ರಂಥದ ಲೋಕಾರ್ಪಣೆ ಸಮಾರಂಭ ನಡೆಯಿತು. ಪ್ರೊ॥ ಅಡ್ಯನಡ್ಕ ಕೃಷ್ಣ ಭಟ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಪ್ರೊ॥ ಸಿ. ವಿ. ವಿಶ್ವೇಶ್ವರ ಕೃತಿ ಅನಾವರಣ ಮಾಡಿದರು. ಕೃತಿಯ ಸಂಪಾದಕರಾದ ಶ್ರೀ ಕೆ. ಎಲ್. ಗೋಪಾಲಕೃಷ್ಣ ರಾವ್, ಶ್ರೀ ಟಿ. ಆರ್. ಅನಂತರಾಮು ಮತ್ತು ಶ್ರೀ ಸಿ. ಆರ್. ಕೃಷ್ಣರಾವ್ ಉಪಸ್ಥಿತರಿದ್ದರು. ಹೆಚ್ಚು ಸಂಖ್ಯೆಯ ವಿಜ್ಞಾನ ಸಾಹಿತ್ಯಾಸಕ್ತರು ಭಾಗವಹಿಸಿದ್ದರು.

# ಸುತ್ತೂರಿನಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ೨೨ನೇ ಅಧಿವೇಶನ

ಅಖಿಲ ಭಾರತ ವೀರಶೈವ ಮಹಾಸಭೆಗೆ ಒಂದು ಶತಮಾನದ ಐತಿಹಾಸಿಕ ಪರಂಪರೆ ಇದೆ. ಮೊಟ್ಟಮೊದಲ ಅಧಿವೇಶನ ೧೯೦೪ರಲ್ಲಿ ಸಿರಸಂಗಿ ಲಿಂಗರಾಜ ಸರದೇಸಾಯಿಯವರ (೧೮೬೧-೧೯೦೬) ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ನಡೆಯಿತು. ಬೆಳಗಾವಿ ಜಿಲ್ಲೆಯ ಸಿರಸಂಗಿ ಸಂಸ್ಥಾನದ ದತ್ತುಪುತ್ರರಾಗಿದ್ದ ಲಿಂಗರಾಜ ಅವರು ತಮ್ಮ ಸಂಸ್ಥಾನದ ಒಡೆತನದ ಬಗ್ಗೆ ಒಂದು ಕೋರ್ಟ್ ಕಲಹದಲ್ಲಿ ತೊಳಲಾಡಿದರು. ತಮ್ಮ ದತ್ತು ತಾಯಿ ತೀರಿಕೊಂಡ ನಂತರ ಅವರ ಅರಮನೆವಾಸ ಸೆರೆಮನೆಯೇ ಆಯಿತು. ಅಂತ್ಯದಲ್ಲಿ ಲಿಂಗರಾಜ ಅವರಿಗೆ ಜಯ ಪ್ರಾಪ್ತಿಯಾಗಿ ವೀರಶೈವ ಮಹಾಸಭೆಯ ಸೇವೆಯಲ್ಲಿ ತೊಡಗಿದರು. ೧೯೦೫ರಲ್ಲಿ ಬೆಂಗಳೂರಿನಲ್ಲಿ ನಡೆದ ಎರಡನೇ ಅಖಿಲ ಭಾರತ ವೀರಶೈವ ಮಹಾಸಭೆಯ ಅಧಿವೇಶನಕ್ಕೂ ಅವರನ್ನೇ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ೧೯೦೬ರಲ್ಲಿ ಲಿಂಗೈಕ್ಯರಾಗುವ ಮುನ್ನ ಲಿಂಗರಾಜ ಅವರು ಬ್ರಿಟಿಷ್ ಜಿಲ್ಲಾಧಿಕಾರಿಗಳ ಮುಂದೆ ಒಂದು ಇಚ್ಛಾಪತ್ರ ಬರೆದರು. ಅವರಿಗೆ ಮಕ್ಕಳಿಲ್ಲದ ಕಾರಣ ತಮ್ಮ ಸಮಸ್ತ ಆಸ್ತಿಯನ್ನು ಸಮಾಜಕ್ಕೆ ಸಮರ್ಪಿಸಿದರು.

ಅಖಿಲ ಭಾರತ ವೀರಶೈವ ಮಹಾಸಭೆಯ ಅಧಿವೇಶನಗಳು ಕರ್ನಾಟಕದ ಬೇರೆ ಬೇರೆ ನಗರಗಳಲ್ಲಿ ನಡೆದಿವೆ. ಕರ್ನಾಟಕದ ಹೊರಗೆ ಸೊಲ್ಲಾಪುರ, ಕುಂಭಕೋಣಂ ಮತ್ತು ಮುಂಬೈನಂತಹ ನಗರಗಳಲ್ಲೂ ನಡೆದಿವೆ. ೧೯೯೨ರಲ್ಲಿ ಬೆಳಗಾವಿಯಲ್ಲಿ ೨೧ನೇ ಸಮ್ಮೇಳನ ನಡೆದ ೧೯ ವರ್ಷಗಳ ನಂತರ ಇತ್ತೀಚೆಗೆ ಏಪ್ರಿಲ್ ೧೭, ೧೮ ಮತ್ತು ೧೯ರಂದು ಭೀಮಣ್ಣ ಖಂಡ್ರೆ ಅವರ ಅಧ್ಯಕ್ಷತೆಯಲ್ಲಿ ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ಸುತ್ತೂರಿನಲ್ಲಿ ನಡೆದ ಸಮ್ಮೇಳನ ತುಂಬಾ ಅದ್ದೂರಿಯಾಗಿತ್ತು.

ಖಂಡ್ರೆ ಅವರು ಬೀದರಿನ ಒಂದು ಶ್ರೀಮಂತ ರೈತ ಕುಟುಂಬದಲ್ಲಿ ಜನಿಸಿ ತಮ್ಮ ವಿದ್ಯಾರ್ಥಿದೆಸೆಯಲ್ಲಿ ಗಾಂಧೀಜಿ ಅವರ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿ ಹೋರಾಡುತ್ತಲೇ ೧೯೪೯ರಲ್ಲಿ ಉಸ್ಮಾನಿಯಾ ವಿಶ್ವವಿದ್ಯಾನಿಲಯದಲ್ಲಿ ಎಲ್‌ಎಲ್.ಬಿ. ಪಾಸು ಮಾಡಿ ಭಾಲ್ಕಿಯಲ್ಲಿ ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ೧೯೬೨ರಲ್ಲಿ ಪ್ರಜಾ ಸಮಾಜವಾದಿ ಪಕ್ಷದ ಅಭ್ಯರ್ಥಿಯಾಗಿ ರಾಜ್ಯ ವಿಧಾನಸಭೆಗೆ ಸ್ಪರ್ಧಿಸಿ ಆಯ್ಕೆಯಾದರು. ನಂತರ ೧೯೬೭, ೧೯೭೮, ೧೯೮೫ರಲ್ಲಿ ಕಾಂಗ್ರೆಸ್ ಪಕ್ಷದಿಂದ ರಾಜ್ಯ ವಿಧಾನಸಭೆಗೆ ಸ್ಪರ್ಧಿಸಿ ಆಯ್ಕೆಯಾದರು. ಒಮ್ಮೆ ಸಾರಿಗೆ ಸಚಿವರೂ ಆಗಿದ್ದರು. ೧೯೯೬ರಿಂದ ವೀರಶೈವ ಮಹಾಸಭೆಯ ಅಧ್ಯಕ್ಷರಾಗಿರುವ ಅವರು ಬೆಂಗಳೂರಿನಲ್ಲಿ ಒಂದು ವೀರಶೈವ ಲಿಂಗಾಯತ ಭವನವನ್ನು ಕಟ್ಟಿಸಿದ್ದಾರೆ.

ಸುತ್ತೂರಿನಲ್ಲಿ ನಡೆದ ಮಹಾ ಅಧಿವೇಶನದಲ್ಲಿ ಸುಮಾರು ೧೨೦೦೦ ಪ್ರತಿನಿಧಿಗಳು ಭಾಗವಹಿಸಿದ್ದರು. ಅವರಿಗೆ ಮೂರು ದಿನ ಊಟ ಮತ್ತು ವಸತಿಯನ್ನು ಏರ್ಪಡಿಸಲಾಗಿತ್ತು. ಅಲ್ಲದೆ ಪ್ರತಿದಿನ ಸುಮಾರು ಎರಡು ಲಕ್ಷ ಜನ ಸಮಾವೇಶದಲ್ಲಿ ಭಾಗವಹಿಸುತ್ತಿದ್ದರು ಎಂದು ಅಂದಾಜು ಮಾಡಲಾಗಿದೆ. ಅವರಿಗೆಲ್ಲಾ ಊಟದ ವ್ಯವಸ್ಥೆಯನ್ನು ಮಾಡಲಾಗಿತ್ತು. ಮೈಸೂರು, ಚಾಮರಾಜನಗರ, ಕೊಡಗು ಮತ್ತು ಮಂಡ್ಯ ಜಿಲ್ಲೆಗಳಿಂದ ಬಂದು ಹೋಗುವವರಿಗಾಗಿ ವಿಶೇಷ ಬಸ್ ವ್ಯವಸ್ಥೆಯನ್ನು ಮಾಡಲಾಗಿತ್ತು.

ಸುತ್ತೂರು ಅಧಿವೇಶನದ ಉದ್ಘಾಟನೆಯ ಒಂದು ವಿಶೇಷವೇನೆಂದರೆ, ಪಂಚಪೀಠಾಧೀಶ್ವರರು, ತುಮಕೂರು ಸಿದ್ಧಗಂಗಾ ಮಠದ ಡಾ॥ ಶಿವಕುಮಾರ ಸ್ವಾಮಿಗಳು, ಸಿರಿಗೆರೆ ಮತ್ತು ಸುತ್ತೂರು ಸ್ವಾಮೀಜಿಯವರುಗಳು ವೇದಿಕೆಯನ್ನು ಅಲಂಕರಿಸಿದ್ದರಲ್ಲದೆ, ೧೫೦೦ಕ್ಕೂ ಹೆಚ್ಚು ಇತರೆ ಸ್ವಾಮಿಗಳು ಅಧಿವೇಶನದಲ್ಲಿ ಭಾಗವಹಿಸಿದ್ದರು.

ಎರಡನೇ ದಿನ ಸಮಾಜ ಸೇವೆಯನ್ನು ಕುರಿತು ನಡೆದ ಒಂದು ಸಮಾವೇಶವನ್ನು ಉದ್ಘಾಟನೆ ಮಾಡಿದ ಹಿರಿಯ ಪತ್ರಕರ್ತರಾದ ಪಾಟೀಲ ಪುಟ್ಟಪ್ಪನವರು ಅಲ್ಲಿ ನೆರೆದಿದ್ದ ವೀರಶೈವ ಲಿಂಗಾಯತ ಸಮುದಾಯಕ್ಕೆ ತಮ್ಮ ಬಿರುಸಾದ ಕಿಡಿ ನುಡಿಗಳಿಂದ ಚಾಟಿ ಪ್ರಹಾರವನ್ನು ಮಾಡುತ್ತಾ ಹೋದರು. ಬಸವಣ್ಣನವರ ಅನುಯಾಯಿಗಳು ಎಂದು ಹೇಳಿಕೊಳ್ಳುವ ನಾವು ಕೆಳವರ್ಗದವರ ಮನೆಗಳಲ್ಲಿ ಉಂಡವರೆಷ್ಟು ಹೇಳಿ, ಎಂದು ಪ್ರಶ್ನಿಸಿದರು. ಅಂದರೆ ಬಸವ ಪೂರ್ವದಲ್ಲಿ ಇದ್ದ ಜಾತಿ ಮತ ಭೇದಗಳು ಇಂದೂ ಆಚರಣೆಯಲ್ಲಿ ಮುಂದುವರಿಯುತ್ತಿವೆ.




'ಇವನಾರವ, ಇವನಾರವನೆಂದೆನಿಸದಿರಯ್ಯ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯ' ಎಂಬ ಬಸವಣ್ಣನ ನುಡಿಮುತ್ತುಗಳು ವೇದಿಕೆಯಲ್ಲಿ ಮಾತ್ರ ಕೇಳಿಬರುತ್ತವೆಯೇ ಹೊರತು ಆಚರಣೆಯಲ್ಲಿಲ್ಲ.




**ಪ್ರೊ॥ ಬಿ. ವಿ. ವೀರಭದ್ರಪ್ಪ**

ವೀರಶೈವ, ಲಿಂಗಾಯತ, ಆರಾಧ್ಯ ಪದಗಳ ಬಳಕೆಯ ಇತಿಹಾಸದತ್ತ ಸ್ವಲ್ಪ ಗಮನಹರಿಸೋಣ. ಬಸವಣ್ಣನವರ ಪೂರ್ವದಲ್ಲಿ ಕನ್ನಡ ನಾಡಿನಾದ್ಯಂತ ಅನೇಕ ಶೈವ ಮತ ಪಂಥಗಳಿದ್ದುವು. ಶೈವಮತೀಯರು ತ್ರಿಮೂರ್ತಿ ಶಿವನ ಆರಾಧಕರು, ಉಗ್ರ ಭಕ್ತಿ ಪರಂಪರೆಯವರು ಮತ್ತು ಶಿವ ಸರ್ವೋತ್ತಮತೆಯನ್ನು ಸಾರುವವರು. ಲಕುಲೀಶ, ಕಾಳಾಮುಖ, ಪಾಶುಪತ ಮುಂತಾದುವು ಶೈವ ಧರ್ಮದ ಪ್ರಭೇದಗಳು. ಪಾಶುಪತದ ಒಂದು ಅಂಗ ಮಹಾಪಾಶುಪತ, ಅದುವೇ ವೀರಶೈವ ಧರ್ಮ ಎಂದು ಪ್ರತಿಪಾದಿಸಲಾಗಿದೆ.

ಖಚಿತವಾದ ಆಕರಗಳ ಕೊರತೆಯಿಂದ ವೀರಶೈವ ಧರ್ಮದ ಉಗಮ ಗೊಂದಲಮಯವಾಗಿದೆ. ಅನಾದಿಕಾಲದಲ್ಲಿ ಲಿಂಗೋದ್ಭವರಾದ ರೇಣುಕಾದಿ ಪಂಚಾಚಾರ್ಯರು ವೀರಶೈವ ಮತಸ್ಥಾಪಕರೆಂದು ಹೇಳಲಾಗುತ್ತದೆ. ಶಿವಾಗಮಗಳಲ್ಲಿ, ಸಿದ್ಧಾಂತ ಶಿಖಾಮಣಿಯಲ್ಲಿ ವೀರಶೈವ ಧರ್ಮವನ್ನು ಕುರಿತ ವಿವರಗಳು ಇವೆ. ಆದರೆ ಅವುಗಳ ಕಾಲ ನಿರ್ಣಯ ವಾಗಿಲ್ಲ. ವೀರಶೈವ ಧರ್ಮವೇ ಬೇರೆ ಲಿಂಗಾಯತ ಧರ್ಮವೇ ಬೇರೆ ಎಂದು ಕೆಲವರು ವಾದಿಸುತ್ತಾರೆ. ಅದಕ್ಕೆ ಪ್ರತಿಯಾಗಿ ಎರಡು ಗುಂಪುಗಳನ್ನು ಒಟ್ಟುಗೂಡಿಸಲು ಕೆಲವರು 'ವೀರಶೈವ ಲಿಂಗಾಯತ' ಎಂಬ ಸಂಯುಕ್ತ ಪದಪುಂಜವನ್ನು ಬಳಸಲು ಪ್ರಾರಂಭಿಸಿದ್ದಾರೆ. ಸುತ್ತೂರಿನಲ್ಲಿ ನಡೆದ 'ಮಹಾ ಅಧಿವೇಶನ'ದ ಆಮಂತ್ರಣ ಪತ್ರಿಕೆಯಲ್ಲಿ ಸಹ 'ವೀರಶೈವ ಲಿಂಗಾಯತ' ಎಂಬ ಜೋಡಿಪದವನ್ನೇ ಬಳಸಲಾಗಿದೆ. ಅವುಗಳ ಜೊತೆಗೆ 'ಲಿಂಗಾಯತ ಆರಾಧ್ಯರು' ಎಂಬ ಪದಪುಂಜವೂ ಇದೆ.

ಲಿಂಗಾಯತ ಆರಾಧ್ಯರನ್ನು ಅಯ್ಯನವರು, ಒಡೆಯರು, ಶಾಸ್ತ್ರಿಗಳು, ಮಹೇಶ್ವರರು, ಆರಾಧ್ಯ ಬ್ರಾಹ್ಮಣರು, ಲಿಂಗಿ ಬ್ರಾಹ್ಮಣರು, ಜಂಗಮರು ಎಂದೂ ಕರೆಯುತ್ತಾರೆ. ಈ ಪದಗಳು ಭಿನ್ನ ಪ್ರಾದೇಶಿಕ, ಸಾಮಾಜಿಕ ಸಂದರ್ಭ ಗಳಲ್ಲಿ, ಭಿನ್ನ ಪರಿಸರಗಳಲ್ಲಿ ಬಳಕೆಯಾಗಿವೆ. ಪ್ರಾಚೀನ ಭಾರತದಲ್ಲಿ ಪ್ರಚಲಿತವಾಗಿದ್ದ ಶೈವ ಧರ್ಮ ವಿವಿಧ ಶಾಖೆಗಳನ್ನು ಹೊಂದಿತ್ತು. ಅವುಗಳಲ್ಲಿ ಕಾಶ್ಮೀರ 'ಶೈವ', ಕರ್ನಾಟಕ, ಆಂಧ್ರ ಪ್ರದೇಶಗಳಲ್ಲಿ 'ವೀರಶೈವ' ಮತ್ತು ತಮಿಳುನಾಡಿನಲ್ಲಿ 'ಶೈವಸಿದ್ಧಾಂತ'ಗಳು ಪ್ರಮುಖವಾಗಿದ್ದವು. ಪ್ರಾರಂಭದಲ್ಲಿ ಶೈವ ಧರ್ಮವು ವೇದ, ಆಗಮಗಳನ್ನು ಆಕರವಾಗಿ ಹೊಂದಿತ್ತು. ಅದರಿಂದ ವೀರಶೈವ ಧರ್ಮದ ಉಗಮವಾಯಿತು. ಪ್ರಾರಂಭದ ವೀರಶೈವ ಧರ್ಮದಲ್ಲಿ ವೇದಗಳ ಕರ್ಮಕಾಂಡಗಳಿಗೆ ವಿವಿಧ ಪೂಜಾನುಷ್ಠಾನ, ಹೋಮ, ಹವನಗಳಿಗೆ ಹೆಚ್ಚು ಪ್ರಾಮುಖ್ಯತೆ ಇತ್ತು. ಈ ಮೂಲ ಲಕ್ಷಣಗಳು ಆ ಸಮಾಜದ ಒಂದು ಅಂಗ ವಾಗಿರುವ ಲಿಂಗಾಯತ ಆರಾಧ್ಯರಲ್ಲಿ ಇಂದೂ ಪರಂಪರೆಯಾಗಿ ಉಳಿದುಕೊಂಡು ಬಂದಿವೆ.

ಆಂಧ್ರದ ಪಂಡಿತಾರಾಧ್ಯರು ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿದ್ದರೂ ಅವರ ಅನುಯಾಯಿಗಳಾದ ಆರಾಧ್ಯರಿಗೆ ಜನಿವಾರದ ಜೊತೆಗೆ ಲಿಂಗಧಾರಣೆಯೂ ರೂಢಿ ಯಾಯಿತು. ಈ ಸಂಪ್ರದಾಯದವರು ಕರ್ನಾಟಕಕ್ಕೆ ವಲಸೆ ಬಂದು ಬಸವ ಸಂಪ್ರದಾಯದ ಲಿಂಗಾಯತರ ಪ್ರಭಾವಕ್ಕೆ ಒಳಗಾಗಿ ಜನಿವಾರವನ್ನು ತ್ಯಜಿಸಿ ಲಿಂಗಧಾರಿ ಆರಾಧ್ಯರೆಂದು ಹೆಸರಾದರು.

ಶ್ರೀ ನೀಲಕಂಠ ಶಾಸ್ತ್ರಿಗಳು ಆರಾಧ್ಯ ಬ್ರಾಹ್ಮಣರನ್ನು ಅರ್ಧ ವೀರಶೈವರು, ಅರ್ಧ ಸ್ಮಾರ್ತ ಬ್ರಾಹ್ಮಣರೆಂದು ಕರೆದಿದ್ದಾರೆ. ಈ ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳು ವುದಕ್ಕಾಗಿ ಐತಿಹಾಸಿಕ ಸಾಕ್ಷ್ಯಗಳಾಗಿ ಬಸವಣ್ಣ, ಹರಿಹರ ಮತ್ತು ರಾಘವಾಂಕ ಇವರು ಆರಾಧ್ಯ ಬ್ರಾಹ್ಮಣರಾಗಿದ್ದರು ಎಂಬುದನ್ನು ಹೇಳಿದ್ದಾರೆ. ಶಾಸ್ತ್ರಿಗಳು ಇವರನ್ನು 'ಆರಾಧ್ಯ ಬ್ರಾಹ್ಮಣರೆಂದೂ, ಲಿಂಗೀ ಬ್ರಾಹ್ಮಣರೆಂದೂ, ಲಿಂಗಧಾರಿ ಶೈವ ಬ್ರಾಹ್ಮಣರೆಂದೂ' ಕರೆದಿದ್ದಾರೆ. ಆರಾಧ್ಯ ಬ್ರಾಹ್ಮಣರನ್ನು ಶುದ್ಧ ವೀರಶೈವರೆಂದೂ, ವಿಶೇಷ ವೀರಶೈವರೆಂದೂ, ಜಂಗಮರೆಂದೂ ಗುರುತಿಸಲಾಗುತ್ತಿದೆ. ಈ ವಿಶೇಷ ವೀರಶೈವರು ಸಿದ್ಧಾಂತ ಶಿಖಾಮಣಿ, ಶ್ರೀಕರ ಭಾಷ್ಯ ಮತ್ತು ಶಿವಾಗಮಗಳನ್ನು ಒಲ್ಲೈಸುತ್ತಾರೆ. ಇವರು ತಮ್ಮ ಭಕ್ತರಿಗೆ ಲಿಂಗದೀಕ್ಷೆಯಿಂದ ಲಿಂಗೈಕ್ಯದವರೆಗೆ ಅನೇಕ ಕ್ರಿಯಾವಿಧಿ ಗಳನ್ನು ವೈದಿಕ ಪದ್ಧತಿಯ ಆಚರಣೆಗಳ ಮೂಲಕ ನಡೆಸಿಕೊಡುವ ಗುರುಸ್ಥಲದವರಾಗಿದ್ದಾರೆ.

ಲಿಂಗಾಯತ ಆರಾಧ್ಯರ ಮೂಲ ಮಠಗಳೆಂದರೆ ಪಂಚಾಚಾರ್ಯ ಮಠಗಳು. ಇವರು ವಚನ ಪರಂಪರೆ ಗಿಂತ ವೈದಿಕ ಪರಂಪರೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿದ್ದಾರೆ. ಇವರು ಕೆಂಪು ಪಂಚೆ ಧರಿಸಿ ದೇಹದ ವಿವಿಧ ಅಂಗಗಳ ಮೇಲೆ ಭಸ್ಮ ಧಾರಣೆ ಮಾಡಿಕೊಂಡು ರುದ್ರಾಕ್ಷಿ, ಕರಡಿಗೆಗಳನ್ನು ಕೊರಳಿಗೆ ಹಾಕಿಕೊಂಡಿರುತ್ತಾರೆ. ಇಲ್ಲಿನ ಆರಾಧ್ಯರು ಪಂಚ ಕಲಶ, ಹೋಮ, ಹವನ, ಜಾತ್ರೆ ಗಳಲ್ಲಿ, ಸ್ಥಾವರಲಿಂಗ ಪೂಜೆ, ವೇದ ಪಠಣ, ಉತ್ಸವಗಳನ್ನು ನಡೆಸುವ ಪರಂಪರೆಯನ್ನು ಹೊಂದಿರುತ್ತಾರೆ. ಇವರು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ.

ವೀರಶೈವರು ವೈದಿಕರ ಧಾರ್ಮಿಕ ಸಂಪ್ರದಾಯ ಗಳನ್ನು ಒಪ್ಪುತ್ತಾರೆ. ಶಿವ ದೇವಾಲಯಗಳನ್ನು ಕಟ್ಟಿಸಿ ಸ್ಥಾವರ ಲಿಂಗಗಳನ್ನು ಸ್ಥಾಪಿಸಿ ಪೂಜಿಸುತ್ತಾರೆ. ಹೋಮ, ಹವನಗಳಂತಹ ವೈದಿಕ ಸಂಪ್ರದಾಯಗಳನ್ನು ಅನುಕರಣೆ ಮಾಡುತ್ತಾರೆ. ಇದು ಬಸವಣ್ಣನ ಆಚರಣೆ ಮತ್ತು ಬೋಧನೆಗೆ ಭಿನ್ನವಾಗಿದೆ. ೧೯೦೪ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆ ಅಸ್ತಿತ್ವಕ್ಕೆ ಬರುವ ಪೂರ್ವದಲ್ಲಿ ಯಾವುದೇ ಸಂಸ್ಥೆ ತನ್ನ ನಾಮಧೇಯದಲ್ಲಿ 'ವೀರಶೈವ' ಎಂಬ ಪದವನ್ನು ಹೊಂದಿರಲಿಲ್ಲ.



ಬಸವಣ್ಣನವರ ಷಟ್‌ಸ್ಥಲ ವಚನಗಳಲ್ಲಿ ಲಿಂಗವಂತ ಪದ ಮಾತ್ರ ಬಳಕೆಯಾಗಿದೆ. ಅವರ 'ಇತರ ಹೆಚ್ಚಿನ ವಚನಗಳು' ಎಂಬ ವಿಭಾಗದಲ್ಲಿ ಒಂದೆರಡು ಕಡೆ ಮಾತ್ರ 'ವೀರಶೈವ', 'ಲಿಂಗವಂತ' ಎಂಬ ಎರಡು ಪದಗಳು ಬಳಕೆಯಾಗಿವೆ.

ಸಮ್ಮೇಳನದಲ್ಲಿ ಕೈಗೊಂಡ ತೀರ್ಮಾನಗಳಲ್ಲಿ ಗಮನಾರ್ಹವಾದ ಒಂದು ತೀರ್ಮಾನ ಎಂದರೆ 'ಯಾವುದೇ ರಾಜಕೀಯ ಪಕ್ಷದ ವೀರಶೈವ ಮುಖಂಡರಿಗೆ ತೊಂದರೆ, ಅನ್ಯಾಯವಾದರೆ ವೀರಶೈವ ಮಠಗಳು, ಸಂಘ-ಸಂಸ್ಥೆಗಳು, ಸಮಾಜ ಹಾಗೂ ಮಹಾಸಭೆ ಸಂಘಟಿತವಾಗಿ ಅದನ್ನು ತಡೆಗಟ್ಟಬೇಕು' (ಏಪ್ರಿಲ್ ೨೦, ೨೦೧೧ ಪ್ರಜಾವಾಣಿ) ಎಂಬುದಾಗಿದೆ. ಅಂದರೆ ವೀರಶೈವ ರಾಜಕೀಯ ಮುಖಂಡರು ಹಾಗೂ ವೀರಶೈವ ಮಠಗಳು, ಸಂಘ-ಸಂಸ್ಥೆಗಳಲ್ಲಿ ಪರಸ್ಪರಾವಲಂಬಿತ ಸಂಬಂಧ ಇರಬೇಕು ಎಂಬುದನ್ನು ಸಾರ್ವಜನಿಕವಾಗಿ ಘೋಷಣೆ ಮಾಡಲಾಗಿದೆ. ರಾಜಕೀಯ ಮತ್ತು ಧರ್ಮಗಳು ಪರಸ್ಪರ ಕೈ ಜೋಡಿಸು ವುದು ಪ್ರಜಾಪ್ರಭುತ್ವದ ಆಳ್ವಿಕೆಯಲ್ಲಿ ಎಷ್ಟರಮಟ್ಟಿಗೆ ಸರಿ? ನಮ್ಮ ಸಂವಿಧಾನದಲ್ಲಿ ಭಾರತವು ಸ್ವತಂತ್ರ, ಸಮಾಜವಾದಿ, ಧರ್ಮಾತೀತ/ಧರ್ಮನಿರಪೇಕ್ಷಕ, ಪ್ರಜಾ ಸತ್ತಾತ್ಮಕ ಗಣರಾಜ್ಯವಾಗಿದೆ ಎಂದು ಉದ್ಘೋಷಿಸಲಾಗಿದೆ.

ಹೀಗಿರುವಾಗ ನಮ್ಮ ಮುಖ್ಯಮಂತ್ರಿಗಳು, ಮಠ ಮಾನ್ಯಗಳ ಜೊತೆ ಸೇರಿ ನಡೆದುಕೊಳ್ಳುವ ರೀತಿ ನಮ್ಮ ಸಂವಿಧಾನಕ್ಕೆ ಮಸಿ ಬಳಿಯುವ ಕ್ರಿಯೆಯಾಗಿದೆ. ಇದನ್ನೆಲ್ಲಾ ನೋಡಿದರೆ ನಮ್ಮ ಶಾಸಕರಿಗೆ ಮತ್ತು ರಾಜಕಾರಣಿಗಳಿಗೆ ಭಾರತೀಯ ಸಂವಿಧಾನದ ಅ ಆ ಇ ಈಗಳ ಪರಿಚಯ ವಾದರೂ ಇದೆಯೇ ಎಂಬ ಸಂದೇಹ ಉಂಟಾಗುತ್ತದೆ. ಈ ಹಿನ್ನೆಲೆಯಲ್ಲಿ ಶಾಸನಸಭೆ ಹಾಗೂ ಸಂಸತ್ ಸಭೆಗಳ ಚುನಾವಣೆಗಳಲ್ಲಿ ಸ್ಪರ್ಧಿಸುವ ಅರ್ಹತೆಯನ್ನು ಪಡೆಯ ಬೇಕಾದರೆ ಭಾರತೀಯ ಸಂವಿಧಾನವನ್ನು ಕುರಿತ ಒಂದು ಪರೀಕ್ಷೆಯಲ್ಲಿ ಉತ್ತೀರ್ಣನಾಗಿರಬೇಕು ಎಂಬ ನಿಯಮವನ್ನು ಜಾರಿಗೆ ತರಬೇಕಾದ ಅವಶ್ಯಕತೆ ತುಂಬ ಇದೆ. ಭಾರತೀಯ ಸಂವಿಧಾನದ ಅರಿವು ಇದ್ದಾಗಲೇ ಶಾಸಕ ಅಥವಾ ಸಂಸತ್ ಸದಸ್ಯ ತಾನು ಮಾಡಬೇಕಾದ ಕಾರ್ಯಕ್ರಮಗಳ ಪಟ್ಟಿ ಯನ್ನು ತಯಾರಿಸಿಕೊಂಡು ಅದಕ್ಕಾಗಿ ಶ್ರಮಿಸಲು ಸಾಧ್ಯ.

ಲಿಂಗಧಾರಿಗಳು ದೇವಾಲಯಗಳಲ್ಲಿ ಸ್ಥಾಪಿತವಾದ ಸ್ಥಾವರ ಲಿಂಗಪೂಜೆಯಿಂದ ದೂರ ಸರಿದು ಇಷ್ಟ ಲಿಂಗಾರ್ಚನೆಯನ್ನು ಮೈಗೂಡಿಸಿಕೊಂಡರು. ದೇವರ ಗುಡಿಗಳೊಳಗೆ ಪ್ರವೇಶಿಸದ ಶೂದ್ರರು, ಅಸ್ಪೃಶ್ಯರು ಮತ್ತು ಬಸವಣ್ಣನವರ ಅನುಯಾಯಿಗಳಾದ ಸವರ್ಣೀಯರೇ ಪ್ರಾರಂಭದಲ್ಲಿ ಎದೆಯ ಮೇಲೆ ಇಷ್ಟ ಲಿಂಗವನ್ನು ಧರಿಸ ಲಾರಂಭಿಸಿದರು. ಈ ರೀತಿ ಬಸವಣ್ಣನವರು ಸಮಾಜದ ಕೆಳಸ್ತರದಲ್ಲಿದ್ದ ದೀನದಲಿತರನ್ನು ಮತ್ತು ಪ್ರಜ್ಞಾವಂತರಾದ ಮೇಲಂತಸ್ತಿನವರನ್ನು ಒಂದುಗೂಡಿಸಿದರು. ಹೀಗೆ ಅವರಿಂದ ಹೊಸ ಸಮಾಜವೊಂದು ಸೃಷ್ಟಿಯಾಗ ತೊಡಗಿತು. ಮನುವಾದಿ ವೈದಿಕ ಸಮಾಜದಲ್ಲಿ ಯಾರನ್ನು ತಮ್ಮ ಸಾಕುಪ್ರಾಣಿಗಳಿಗಿಂತ ಕೆಳಗಿಟ್ಟು ತಿರಸ್ಕಾರದಿಂದ ಕಾಣಲಾಗುತ್ತಿತ್ತೋ ಅಂಥವರೊಡನೆ ಕೂಡುವುದನ್ನೇ ಬಸವಣ್ಣನವರು 'ದಯೆಯೇ ಧರ್ಮದ ಮೂಲವಯ್ಯ' ಎಂದು ಹೊಸ ಹಾದಿಯನ್ನು ಹಾಕಿಕೊಟ್ಟರು. ಬಸವಣ್ಣ ನವರಿಂದ ಮೂಡಿದ ಹೊಸ ವಾತಾವರಣದಲ್ಲಿ

ಸಂಭ್ರಮಗೊಂಡ ದೀನ ದಲಿತರು ಸ್ವಾಭಿಮಾನದಿಂದ ದುಡಿದು ಬದುಕುವುದನ್ನು ಕಲಿತರು. ಕಾಯಕ ಮತ್ತು ಚಿಂತನಶೀಲತೆಯನ್ನು ಮೈಗೂಡಿಸಿಕೊಂಡರು.

ಇಷ್ಟಲಿಂಗವು ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸ್ತ್ರೀ ಪುರುಷ ಲಿಂಗ ಸಮಾನತೆಯನ್ನು ಸಾರುವ ಒಂದು ಸಾಂಸ್ಕೃತಿಕ ಪ್ರತೀಕವಾದುದು. ಇಷ್ಟಲಿಂಗ ದೀಕ್ಷೆಯನ್ನು ತೆಗೆದುಕೊಂಡವರ ಮೂಲ ಕೆದಕುವಂತಿಲ್ಲ. ಅವರು ದಾಸಿಪುತ್ರರಾದರೂ ಸರಿಯೇ, ವೇಶ್ಯಾಪುತ್ರರಾದರೂ ಸರಿಯೆ, ಲಿಂಗವಂತರೆಲ್ಲಾ ಶಿವಸ್ವರೂಪಿಗಳೇ ಆಗಿರುತ್ತಾರೆ ಎಂಬುದು ಬಸವಣ್ಣನವರ ನಿಲುವು. ಇಷ್ಟಲಿಂಗಧಾರಿಗಳು ದೇವಾಲಯಗಳಿಗೆ ಹೋಗಬೇಕಾಗಿಲ್ಲ ಮತ್ತು ಸ್ಥಾವರಲಿಂಗವನ್ನು ಪೂಜಿಸಬೇಕಾಗಿಲ್ಲ.

ಗುಡಿಗಳಿಗೆ ಹೋಗಿ ಸ್ಥಾವರ ಲಿಂಗಪೂಜೆ ಮಾಡುವವರು ಅಥವಾ ಮಾಡಿಸುವವರು ಪರೋಕ್ಷವಾಗಿ ವೈದಿಕ ಪರಂಪರೆಗೆ ಬಲಿಯಾಗಿರುತ್ತಾರೆ. ಇಷ್ಟಲಿಂಗವು ಅವೈದಿಕ ಪದ್ಧತಿಯಾದ ಶಿವಯೋಗ, ಶಿವಧ್ಯಾನ ಮತ್ತು ಲಿಂಗೈಕ್ಯ ಸ್ಥಿತಿಯನ್ನು ಹೊಂದುವ ಶಿವತಪಸ್ಸಾಗಿರುತ್ತದೆ. ಇಷ್ಟಲಿಂಗ ದೇವನೇ ಶರಣರ ಶಿವ, ಎಲ್ಲಾ ಶರಣರ ವಚನಾಂಕಿತಗಳ ಮೂಲ ಸ್ವರೂಪವೇ ಇಷ್ಟಲಿಂಗ ದೇವ. 'ದೇವನೊಬ್ಬ ನಾಮ ಹಲವು' ಎಂದು ಬಸವಣ್ಣನವರೇ ಹೇಳುವಂತೆ ನಿರಾಕಾರನೂ ನಿರ್ಗುಣನೂ ಆದ ದೇವನನ್ನು ನೂರೆಂಟು ಹೆಸರುಗಳಿಂದ ಆರಾಧನೆ ಮಾಡಲಾಗುತ್ತಿದೆ. ಇಷ್ಟಲಿಂಗ ಪೂಜೆ ಅಂದರೆ ತಮ್ಮ ಅಂತರಂಗದಲ್ಲಿ ಅಡಗಿರುವ ಸುಪ್ತಪ್ರಜ್ಞೆಯನ್ನು ಜಾಗೃತಗೊಳಿಸಿ ಅದಕ್ಕೆ ಸ್ಪಂದಿಸುವುದೇ ಆಗಿದೆ. ವ್ಯಕ್ತಿಯು ಇಷ್ಟಲಿಂಗ ಪೂಜೆಯ ನಂತರ ತನ್ನ ಕಾಯಕದಲ್ಲಿ ನಿರತನಾಗಿ ತಾನು ಗಳಿಸಿದುದನ್ನು ಪ್ರಸಾದ ಮತ್ತು ದಾಸೋಹ ರೂಪದಲ್ಲಿ ಇತರರೊಡನೆ ಹಂಚಿಕೊಂಡು ಸೇವಿಸುವುದು ಲಿಂಗವಂತ ತತ್ವವಾಗಿದೆ.

ಲಿಂಗವಂತ ಧರ್ಮ ಪ್ರಸಾರ ಕಾರ್ಯವನ್ನು ನಾಲ್ಕು ಘಟ್ಟಗಳಲ್ಲಿ ವಿಂಗಡಿಸಬಹುದು. ಅವು ಹೀಗಿವೆ : ಬಸವ ಪೂರ್ವ ಯುಗ, ಬಸವ ಯುಗ, ಬಸವೋತ್ತರ ಯುಗ ಮತ್ತು ಸಮಕಾಲೀನ ವಚನಗಳ ಕಾಲ. ಇಲ್ಲಿ ಬಸವ ಯುಗವನ್ನು, ಅದರಲ್ಲೂ ಮಹಿಳಾ ವಚನಕಾರ್ತಿಯರ ಬಗ್ಗೆ, ಸ್ವಲ್ಪ ಗಮನ ಹರಿಸೋಣ.

ವೇದ ಉಪನಿಷತ್ತುಗಳ ಕಾಲದಲ್ಲಿ ಗಾರ್ಗಿ ಮೈತ್ರೇಯಿಯರಂತಹ ಮಹಿಳೆಯರು ಅಧ್ಯಾತ್ಮ ವಿದ್ಯೆಯಲ್ಲಿ ಪುರುಷರಿಗೆ ಸರಿಸಾಟಿಯಾಗಿದ್ದರು. ಆದರೆ, ಪುರುಷ ಪ್ರಧಾನ ಧರ್ಮಶಾಸ್ತ್ರಗಳು ಎದ್ದುನಿಂತ ನಂತರ ವೈದಿಕ ಧರ್ಮದಲ್ಲಿ ಸ್ತ್ರೀಯರಿಗೆ ಪ್ರಾತಿನಿಧ್ಯವೇ ಇಲ್ಲದಂತಾಯಿತು. ಅವರಿಗೆ ಆಧ್ಯಾತ್ಮಿಕ, ಸಾಮಾಜಿಕ, ಆರ್ಥಿಕ ಪ್ರಾತಿನಿಧ್ಯವೇ ಇಲ್ಲದಂತಾಯಿತು. ಈ ಹಿನ್ನೆಲೆಯಲ್ಲಿ ಭಿನ್ನ ಸಾಮಾಜಿಕ ವರ್ಗಗಳ ಸ್ತ್ರೀಯರೆಲ್ಲಾ ಒಟ್ಟಿಗೆ ಸೇರಿ ಸಾಮಾಜಿಕ ಹಾಗೂ ಆಧ್ಯಾತ್ಮಿಕ ಚಿಂತನೆಗಳಲ್ಲಿ ತೊಡಗಿ ಅವುಗಳನ್ನು ವಚನರೂಪಗಳಲ್ಲಿ ದಾಖಲಿಸಿಟ್ಟಿದ್ದಾರೆ. ಅವರಲ್ಲಿ ಅಕ್ಕಮಹಾದೇವಿ, ಗೊಗ್ಗವ್ವೆ, ಬೊಂತಾದೇವಿಯರು ವೈರಾಗ್ಯದ ಶಿಖರಕ್ಕೇರಿ ಶಿವನೇ ಪತಿ ಎಂದು ನಂಬಿ ತಮ್ಮ ವಚನಗಳಲ್ಲಿ ತೋಡಿಕೊಂಡಿದ್ದಾರೆ.

ಮೋಳಿಗೆ ಮಹಾದೇವಿ, ಹಡಪದ ಲಿಂಗಮ್ಮನ ವಚನಗಳಲ್ಲಿ ತಾತ್ವಿಕ ಬೋಧನೆಗಳಿದ್ದರೆ, ಅಕ್ಕಮ್ಮ,



ಆಮುಗೆ ರಾಯಮ್ಮ, ಉರಿಲಿಂಗ ಪೆದ್ದಿಗಳ ಪುಣ್ಯ ಸ್ತ್ರೀ ಕಾಳವ್ವೆ, ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀಯರ ವಚನಗಳಲ್ಲಿ ಸಾಮಾಜಿಕ ವಿಮರ್ಶೆ ಎದ್ದು ಕಾಣುತ್ತದೆ. ನೀಲಮ್ಮ, ಅಕ್ಕನಾಗಮ್ಮ, ಗಂಗಾಂಬಿಕೆಯರ ವಚನಗಳಲ್ಲಿ ಆತ್ಮಾವಲೋಕನ ಮತ್ತು ಬಸವಸ್ತುತಿ ಕಂಗೊಳಿಸುತ್ತದೆ.

ತನ್ನನ್ನು ವರಿಸಲು ಬಂದ ಕೌಶಿಕನಿಗೆ ಅಕ್ಕಮಹಾದೇವಿ ನೀಡುವ ಉತ್ತರ ಸಾವಿಲ್ಲದ, ಕೇಡಿಲ್ಲದ, ಚೆಲುವಂಗಾನೊಲಿದೆನವ್ವ... ಅದು ಕಾರಣ ಚೆನ್ನಮಲ್ಲಿಕಾರ್ಜುನನೆ ಗಂಡನೆನಗೆ, ಈ ಸಾವ ಕೆಡುವ ಗಂಡರನೊಯ್ದು, ಒಲೆಯೊಳಗಿಕ್ಕು' ಎಂಬುದು ತನ್ನ ಆಧ್ಯಾತ್ಮಿಕ ಬೆಳವಣಿಗೆಯ ಹಂತವನ್ನು ಎತ್ತಿ ಹಿಡಿಯುತ್ತದೆ. ಹಡಪದ ಲಿಂಗಮ್ಮ 'ಕನಿಷ್ಠದಲಿ ಹುಟ್ಟಿದೆ ಉತ್ತಮದಲ್ಲಿ ಬೆಳೆವ ಸತ್ಯ ಶರಣರ ಪಾದವಿಡಿದೆ... ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ ಹರಿಯಿತು' ಎನ್ನುತ್ತಾಳೆ. ಈ ವಚನ ಅವಳ ಆಧ್ಯಾತ್ಮಿಕ ಬೆಳವಣಿಗೆಗೆ ಕನ್ನಡಿ ಹಿಡಿಯುತ್ತದೆ. ಅಕ್ಕ ನಾಗಮ್ಮ 'ನಿಜವ ನಿರ್ವಯಲ ಬಾಗಿಲ ತೋರಿದಾತ' ಎಂದು ಬಸವಣ್ಣನನ್ನು ನೆನೆದರೆ, ನೀಲಮ್ಮ 'ಆನು ಅನುಭವ ಶೀಲವನರಿತು', 'ಮುಕ್ತ್ಯಾಂಗನೆಯಾದೆನಯ್ಯಾ ಬಸವ' ಎನ್ನುತ್ತಾಳೆ.

ಶರಣಧರ್ಮದಲ್ಲಿ ಸಂಸಾರ ತ್ಯಾಜ್ಯವಾಗಬೇಕಾಗಿಲ್ಲ. ಸನ್ಯಾಸತ್ವ ಶ್ರೇಷ್ಠವೆಂದೇನೂ ಅಲ್ಲ, ಇಂದ್ರಿಯ ಸುಖ ವ್ಯಕ್ತಿಯ ಸಾಧನೆ ಸಿದ್ಧಿಗಳಿಗೆ ಆತಂಕಕಾರಿಯಲ್ಲ ಎಂಬುದು ಎದ್ದು ಕಾಣುತ್ತದೆ. ಗಜೇಶ ಮಸಣಯ್ಯನ ಹೆಂಡತಿ 'ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು, ಹೆಣ್ಣಿಗೆಯೂ ಲಿಂಗಕ್ಕೆಯೂ ವಿರುದ್ಧವೇ ?' ಎಂದು ಪ್ರಶ್ನಿಸುತ್ತಾಳೆ. ಶರಣರಲ್ಲಿ 'ಸತಿಪತಿಗಳೊಂದಾದ ಭಕ್ತಿ', ಹಿತಸಾಧನೆಯ ಸೀಮೆ ತಲುಪಿದಾಗ ಸತಿ-ಪತಿ ಭಾವ ಅಳಿದು 'ಶರಣಸತಿ-ಲಿಂಗಪತಿ' ಭಾವ ಉಂಟಾಗುತ್ತದೆ.

ವಚನಕಾರರು ತಮ್ಮ ವಚನಗಳಲ್ಲಿ ತಮ್ಮ ಆಂತರಿಕ ಸುಖ ದುಃಖ, ಕೋಪ ತಾಪಗಳನ್ನು ಮತ್ತು ಸಮಾಜದ ಬಗ್ಗೆ ತಮಗೆ ಅನಿಸಿದ್ದನ್ನು, ಆಧ್ಯಾತ್ಮಿಕವಾಗಿ ತಾವು ಅನುಭವಿಸಿದ ಅನುಭವಗಳನ್ನು ಮುಚ್ಚುಮರೆ ಇಲ್ಲದೆ ಸರಳವಾದ ಕಾವ್ಯ ಭಾಷೆಯಲ್ಲಿ ತೆರೆದಿಟ್ಟಿದ್ದಾರೆ. ವಚನಕಾರರ ಆಂದೋಲನದಲ್ಲಿ ಬಸವಣ್ಣ, ಅಲ್ಲಮ ಪ್ರಭು, ಸಿದ್ಧರಾಮಣ್ಣ, ಚನ್ನಬಸವಣ್ಣನವರು ನಾಯಕ ಪಾತ್ರವನ್ನು ನಿರ್ವಹಿಸಿದ್ದರೆ, ಅವರ ಸಮೀಪವರ್ತಿಗಳಾಗಿ ಕಿನ್ನರಿ ಬೊಮ್ಮಯ್ಯ, ಹಡಪದ ಅಪ್ಪಣ್ಣ, ಅಂಬಿಗರ ಚೌಡಯ್ಯ, ನೀಲಲೋಚನೆ, ಅಯ್ದಕ್ಕಿ ಮಾರಯ್ಯ, ಅಕ್ಕ ನಾಗಮ್ಮ ಮುಂತಾದವರು ಶರಣ ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ಅವರೊಡನೆ ಜನಪದ ಕಲಾವಿದರು, ಹಾಡುಗಾರರು, ಬಹುರೂಪಿಗಳು ತಮ್ಮ ಪಾಲಿನ ಜನಾಂದೋಲನ ಕಾರ್ಯದಲ್ಲಿ ತಲ್ಲೀನರಾಗಿರುವುದನ್ನು ನಾವು ಗಮನಿಸಬಹುದು.

ಪ್ರಾಚೀನ ಕಾಲದಲ್ಲಿ ಮಾನವರೆಲ್ಲಾ ಯಾವ ಭೇದ ಭಾವವೂ ಇಲ್ಲದೆ ತಮ್ಮ ಶಕ್ತ್ಯಾನುಸಾರ ದುಡಿದು ಅದರಿಂದ ಬಂದ ಫಲವನ್ನು ತಮ್ಮ ಅವಶ್ಯಕತೆಗೆ ತಕ್ಕಂತೆ ಹಂಚಿಕೊಂಡು ಸೇವಿಸುತ್ತಿದ್ದರು. ಅದೇ ಮುಂದೆ ಕಾಯಕ, ದಾಸೋಹ ಎಂಬ ಪದ್ಧತಿಯಾಗಿ ಬೆಳೆದು ಬಂದಿತು. ಬಸವ ಕಲ್ಯಾಣದ ಅನುಭವ ಮಂಟಪದ ಪರಿಸರದಲ್ಲಿ 'ಅರಿವಿನ ಮನೆ' ಮತ್ತು 'ಮಹಾಮನೆ' ಎಂಬ ಎರಡು ಆವರಣಗಳಿದ್ದವು. ಅರಿವಿನ ಮನೆ ಎಂಬುದು ತಮ್ಮ ಅಂತರಂಗದ ಜಗತ್ತನ್ನು ಮತ್ತು ಮಹಾಮನೆ ಎಂಬುದು ತಮ್ಮ ಹೊರಜಗತ್ತನ್ನು ಸೂಚಿಸುವ ಪದಗಳಾಗಿವೆ. ಅಂದರೆ ಇಷ್ಟಲಿಂಗದ ಮೂಲಕ ನಮ್ಮ ಒಳಗಿನ ಅರಿವು ಅಂತಃಸಾಕ್ಷಿಯ ಪೂಜೆಯಾಗಬೇಕು. ಜೊತೆಗೆ ಸೃಷ್ಟಿಕರ್ತನ ಸೃಷ್ಟಿಯೇ ಆಗಿರುವ ವಿಶ್ವವೆಂಬ ಮಹಾಮನೆಯಲ್ಲಿ ಕಾಯಕ, ಪ್ರಸಾದ ಮತ್ತು ದಾಸೋಹಗಳ ಮೂಲಕ ಸಮಾಜವೆಂಬ ಜಂಗಮ ಲಿಂಗದ ಪೂಜೆಯಾಗಬೇಕು. ಅರಿವು ಮತ್ತು ಆಚರಣೆಗಳ ಸಮ್ಮಿಳನವೇ ಬಸವಣ್ಣನವರ ಕೂಡಲಸಂಗಮ.

ಪ್ರೊ|| ಬಿ. ವಿ. ವೀರಭದ್ರಪ್ಪ
ಬಿ-೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫



# ಮೂರು ಗ್ರಹಣಗಳು

ನಭಾವಲೋಕನ

**ತಿಂ**ಗಳ ಆರಂಭದ ದಿನವೇ ಪಾರ್ಶ್ವ ಗ್ರಹಣ; ಅಂದಮೇಲೆ ಕೊನೆಯ ತಾರೀಖಿಗೂ ಗ್ರಹಣ ಇರಲೇಬೇಕು ಎನ್ನಬಹುದು. ಏಕೆಂದರೆ ಗ್ರಹಣಕ್ಕೆ ಕಾರಣವಾದ ಕೇತು ಎಂಬ ಬಿಂದುವು ಒಂದು ತಿಂಗಳೊಳಗೆ ಬಹಳ ಪಕ್ಕಕ್ಕೆ ಸರಿದಿರುವ ಸಾಧ್ಯತೆ ಇಲ್ಲ. ತಿಂಗಳ ಮೊದಲ ಗ್ರಹಣ ಉತ್ತರ ಧ್ರುವ ನಿವಾಸಿಗಳಿಗೆ; ಎರಡನೆಯದು ದಕ್ಷಿಣ ಧ್ರುವದವರಿಗೆ. ನಮಗೆ ಏನೂ ಇಲ್ಲ. ಕೇತು ಎಂಬ ಈ ಕಾಲ್ಪನಿಕ ಬಿಂದುವನ್ನು ದಾಟಿ ಹೊರಟ ಚಂದ್ರನಿಗೆ ಹದಿನೈದು ದಿನಗಳಲ್ಲಿ ರಾಹು ಎದುರಾಗಲೇಬೇಕು. ಆದ್ದರಿಂದ ೧೫ರಂದು ಚಂದ್ರಗ್ರಹಣ ಉಂಟು. ಇದು ನಮಗೆ ಕಾಣುತ್ತದೆ. ಹೀಗೆ ಮೂರು ಗ್ರಹಣಗಳು ೩೦ ದಿನಗಳ ಒಳಗೇ ಬರುವುದು ಬಹಳ ಸಾಮಾನ್ಯ. ಆ ಸಂದರ್ಭದಲ್ಲಿ ಎರಡು ಸೂರ್ಯಗ್ರಹಣಗಳು ಪಾರ್ಶ್ವ ಗ್ರಹಣಗಳಾಗಿರುತ್ತವೆ. ಪೂರ್ಣ ಸೂರ್ಯಗ್ರಹಣವಾದಾಗ ಅದರ ಹಿಂದೆ ಅಥವಾ ಮುಂದೆ ಚಂದ್ರಗ್ರಹಣವಾಗುವುದು. ಸಾಮಾನ್ಯವಾಗಿ ಹೀಗೆ ಎರಡು ಅಥವಾ ಮೂರು ಗ್ರಹಣಗಳು ಬೇರೆ ಬೇರೆ ಕ್ಯಾಲೆಂಡರ್ ತಿಂಗಳುಗಳಲ್ಲಿ ಉಂಟಾಗುವುದರಿಂದ (ಉದಾ : ಜುಲೈ ೪ ಮತ್ತು ಆಗಸ್ಟ್ ೪) ಸಾಮಾನ್ಯರು ಗಮನ ಕೊಟ್ಟಿರುವುದಿಲ್ಲ. ಹಾಗೆಯೇ ಜೂನ್ ೧ ಮತ್ತು ಜುಲೈ ೧ ಬೇರೆ ಬೇರೆ ಪುಟಗಳಲ್ಲಿರುವುದರಿಂದ ಹೆಚ್ಚಿನ ಜನ ಗಮನ ಕೊಟ್ಟಿರುವುದಿಲ್ಲ. ಕಳೆದ ವರ್ಷ ಹೀಗೆ ಒಂದು ಕ್ಯಾಲೆಂಡರ್ ತಿಂಗಳಲ್ಲಿ ಮೂರು ಗ್ರಹಣಗಳ ಅವಕಾಶ ದೊರೆತಾಗ ಕೆಲವರು ಮಹಾಭಾರತದ ಯಾವುದೋ ಉಲ್ಲೇಖದ ಆಧಾರದ ಮೇಲೆ ಪ್ರಳಯ ಉಂಟಾಗಲಿದೆ ಎಂದು ಗುಲ್ಲೆಬ್ಬಿಸಿದ್ದುದು ನೆನಪಿರಬೇಕು.

ಸೂರ್ಯಗ್ರಹಣಗಳೆರಡೂ ನಮಗೆ ಕಾಣದಿದ್ದರೂ ಚಂದ್ರಗ್ರಹಣದ ನೋಟ ಇದೆ. ಸಂಜೆ ಉದಯಿಸುವಾಗ ಪ್ರಕಾಶಮಾನವಾಗಿ ಕಾಣುವ ಚಂದ್ರ ಮಧ್ಯರಾತ್ರಿಗೆ ಕುಂದಿದಾಗ ಸುತ್ತಲಿನ ಆಕಾಶಗಂಗೆಯ ಅದ್ಭುತ ನೋಟ ನೋಡಲು ಸಿಗುತ್ತದೆ. ಜ್ಯೇಷ್ಠಾ ನಕ್ಷತ್ರವನ್ನು ಒಳಗೊಂಡ ವೃಶ್ಚಿಕ, ಅದರ ಪಕ್ಕದ ಧನು ನಡುವೆ ಒಫಿಯೂಕಸ್ ಅಥವಾ ಉರಗಧರ - ಇವೆಲ್ಲವನ್ನೂ ಗುರುತಿಸಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಕಂದು ಅಥವಾ ತಿಳಿಗೆಂಪು ಬಣ್ಣದ ಚಂದ್ರನ ನೋಟವೇ ಸುಂದರವಾಗಿ ಕಾಣುವುದು.

ಸಂಜೆಯ ಆಕಾಶದಲ್ಲಿ ಕಾಣುವ ಶನಿಯ ಹೊರತಾಗಿ ಉಳಿದ ಮೂರೂ ಗ್ರಹಗಳು ಮುಂಜಾವಿನಲ್ಲಿ ಕಾಣುತ್ತವೆ. ಬುಧ ಗ್ರಹ ತಿಂಗಳ ಮೊದಲಲ್ಲಿ ರೋಹಿಣಿ ನಕ್ಷತ್ರವನ್ನು ಹಾದುಹೋಗುತ್ತದೆ. ಆಮೇಲೆ ನೋಡಲು ಸಿಗುವುದಿಲ್ಲ. ಸೂರ್ಯನನ್ನು ಹಾದು ಸಂಜೆಯ ಆಕಾಶಕ್ಕೆ ಬರಲಿದೆ. ಮಂಗಳ ಮತ್ತು ಗುರುಗ್ರಹಗಳನ್ನು ತಿಂಗಳ ಕೊನೆಗೆ ಸ್ಪಷ್ಟವಾಗಿ ಗುರುತಿಸಬಹುದು. ಗುರುಗ್ರಹ ಮೇಷ ರಾಶಿಯ ಮೂರು ಪ್ರಖರ ನಕ್ಷತ್ರಗಳ ಪಕ್ಕದಲ್ಲಿಯೇ ಕಾಣುವುದು. ಮಂಗಳ ವೃಷಭ ರಾಶಿಯ ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳ ನಡುವೆ ಕಾಣುವುದು. ೨೯ರ ಬೆಳಗಿನ ಜಾವ ಬಾಲ ಚಂದ್ರ ಕೂಡ ಈ ಗುಂಪಿಗೆ ಸೇರುವುದು. ಶುಕ್ರಗ್ರಹವನ್ನು ಹುಡುಕಲು ಏನೇನೂ ಕಷ್ಟಪಡಬೇಕಿಲ್ಲ. ದಿನೇ ದಿನೇ ಅದು ದಿಗಂತದತ್ತ ಸರಿಯುತ್ತಿದೆ ಎಂದು ಗಮನಿಸಬಹುದು.




ಜೂನ್ ೨೨ರಂದು ದಕ್ಷಿಣಾಯನ. ಅಂದರೆ ಅತಿ ದೀರ್ಘ ಹಗಲಿನ ದಿನ; ಬೇಸಗೆಯ ಮುಕ್ತಾಯ. ೨೭ರಂದು ಬೂಟಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಗಂಟೆಗೆ ೫೦ ಉಲ್ಕೆಗಳು ಕಾಣುವುವು. ಬೂಟಿಸ್ ಎಂದರೆ ಸಹದೇವ ಎಂಬ ಪುಂಜ; ಈ ಪುಂಜದ ಅತಿ ಪ್ರಕಾಶಮಾನ ನಕ್ಷತ್ರವೇ ಕೆಂಪು ಬಣ್ಣದ ಸ್ವಾತಿ.

**ಖಗೋಳ ದಿನಚರಿ**

ಜೂನ್ ೧ ಅಮಾವಾಸ್ಯೆ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ)
೭ ಬುಧ - ರೋಹಿಣಿ ಜೋಡಿ*
೯ ಚಾಂದ್ರಮಾಸದ ಮೊದಲ ಪಾದ
೧೨ ಬುಧ ಗ್ರಹದ ಯುತಿ
೧೪ ಶನಿ ಗ್ರಹದ ಹಿನ್ನಡೆ ಮುಕ್ತಾಯ
೧೫ ಹುಣ್ಣಿಮೆ ಚಂದ್ರಗ್ರಹಣ*
ಪಾರ್ಶ್ವ ಛಾಯಾ ಪ್ರದೇಶಕ್ಕೆ ಪ್ರವೇಶ ೨೨.೫೩
ಪೂರ್ಣ ಛಾಯಾ ಪ್ರದೇಶಕ್ಕೆ ಪ್ರವೇಶ ೨೩.೫೩
ಪೂರ್ಣ ಗ್ರಹಣದ ಆರಂಭ ೧೬ರಂದು ೦೦.೫೨
ಪೂರ್ಣ ಗ್ರಹಣದ ಮುಕ್ತಾಯ ೦೨.೩೩
ಪೂರ್ಣ ಛಾಯಾ ಪ್ರದೇಶದಿಂದ ನಿರ್ಗಮನ ೦೩.೩೬
ಪಾರ್ಶ್ವ ಛಾಯಾ ಪ್ರದೇಶದಿಂದ ನಿರ್ಗಮನ ೦೪.೩೨
೧೮ ಶುಕ್ರ - ರೋಹಿಣಿ - ಮಂಗಳ ಪುಟ್ಟ ಗುಂಪು*
೨೧ ದಕ್ಷಿಣಾಯನ ೨೨:೪೬ಕ್ಕೆ
೨೩ ಚಾಂದ್ರಮಾಸದ ಕೊನೆಯ ಪಾದ
೨೬ ಚಂದ್ರ - ಗುರು ಜೋಡಿ*
೨೭ ಬೂಟಿಡ್ಸ್ ಉಲ್ಕಾವೃಷ್ಟಿ
೨೯ ಮಂಗಳ - ಚಂದ್ರ ಜೋಡಿ*
೩೦ ಚಂದ್ರ - ಶುಕ್ರ ಜೋಡಿ*
ಜುಲೈ ೧ ಅಮಾವಾಸ್ಯೆ ೧೩:೩೪ಕ್ಕೆ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ)

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)


ಜೂನ್ ೧೫ ಹುಣ್ಣಿಮೆಯಂದು ವೃಶ್ಚಿಕದಲ್ಲಿ

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

## ಮಾರುತಿ ದಾಸಣ್ಣವರ

# ಚೆಳಮಾರ ಹಾದಿ




ಗೆಳೆಯ ಮಹೇಶನ ಮಗಳ ಮದುವೆಯ ಆಮಂತ್ರಣ ಪತ್ರಿಕೆ ಬಂದಾಗಿನಿಂದಲೂ ಏನೋ ಒಂದು ಉತ್ಸಾಹ! ಇದೇ ನೆಪದಲ್ಲಿ ನನ್ನೂರಿಗೆ ಹೋಗಿ ಬಾಲ್ಯದ ನೆನಪಿನ ಬುತ್ತಿಯನ್ನು ಸವಿಯುವ ಸದವಕಾಶ! ಹೊರಡುವ ದಿನಕ್ಕಾಗಿ ತುದಿಗಾಲ ಮೇಲೇ ನಿಂತಿದ್ದೆ. ನನ್ನೂರಿನ ಮುಖ್ಯ ಆಕರ್ಷಣೆ ಎಂದರೆ 'ಚೆಳಮಾರ ಹಾದಿ'.

ಚೆಳಮಾರ ಹಾದಿ – ಅದು ನಮ್ಮೂರಿನ ಮುಂದೆ ಹಾವಿನಂತೆ ಅಂಕುಡೊಂಕಾಗಿ ಹಾಸಿರುವ ಒಂದು ರಾಜಮಾರ್ಗ. ಅದು ಎಲ್ಲಿಗೆ ಹೋಗುತ್ತದೆ ಎಂಬುದು ಈಗಲೂ ನನಗೆ ರಹಸ್ಯವೇ... ಅದು ನನ್ನ ಪಾಲಿಗೆ ನನ್ನೂರ ಜನಗಳ ಜೀವನದಂತೆಯೇ ಸಂಕೀರ್ಣ. ಅವರಂತೆಯೇ ಮುಗ್ಧ. ಅವರಂತೆಯೇ ಅರ್ಥವಾಗದ ಒಂದು ಸೋಜಿಗ!! ನಾನು ಊರಿಗೆ ಹೋದಾಗಲೆಲ್ಲ ನನ್ನ ಗೆಳೆಯನೊಂದಿಗೆ ಅದರ ಮೇಲೆ ಅಡ್ಡಾಡಿ ಅದರೊಂದಿಗೆ ಆಪ್ತವಾಗಿ ಎರಡು ದಿನ ಕಳೆದು ಬರುತ್ತೇನೆ. ಆ ಹಾದಿಯಲ್ಲಿ ವಾಕ್ ಮಾಡುವುದು ಒಂದು ವಿಶೇಷವಾದ ಅನುಭೂತಿಯನ್ನು ನೀಡುತ್ತದೆ. ಯಾಕೆಂದರೆ ಅದು ಬರೀ ದಾರಿಯಲ್ಲ, ನಮ್ಮ ಸಖ; ಬಾಲ್ಯದ ಚಿತ್ರ ಜಗತ್ತಿನಿಂದ ಯೌವನದ ಮಾಯಾಲೋಕವನ್ನು ಪ್ರವೇಶಿಸುವಾಗಿನ ತವಕ ತಲ್ಲಣಗಳು, ಜೀವನದ ನಿಷ್ಠುರ ಸತ್ಯಗಳನ್ನು ಎದುರಿಸುವ, ಮತ್ತು ಅವುಗಳನ್ನು ಅರಿಯುವಾಗಿನ ಭಯಾಶ್ಚರ್ಯಗಳೆಲ್ಲ ಆ ಹಾದಿಯಲ್ಲಿ ತುಣುಕು ತುಣುಕಾಗಿ ನಮಗೀಗಲೂ ಸಿಗುತ್ತವೆ. ಹಾಗಾಗಿ ಚೆಳಮಾರ ಹಾದಿ ಎಂದರೆ ನನಗೂ ನನ್ನ ಗೆಳೆಯ ಮಹೇಶನಿಗೂ ಎಲ್ಲಿಲ್ಲದ ಪ್ರೀತಿ, ಅಕ್ಕರೆ, ಆತ್ಮೀಯತೆ.

ಕೆಲಸದ ನಿಮಿತ್ತ ನಾನು ಸುಮಾರು ವರ್ಷಗಳ ಹಿಂದೆಯೇ ನಮ್ಮೂರನ್ನು ತೊರೆದಿದ್ದರೂ ಅದರ ಮೋಹ ಮಾತ್ರ ಯಾವಾಗಲೂ ಮುದನೀಡುವ ಕಪ್ಪೆಚಿಪ್ಪನಂತೆ, ಅದು ನಮ್ಮೂರ ಮರಡಿಯಲ್ಲಿನ ಹಸಿರು ಬಣ್ಣದ ಬೋರಂಗಿಯಂತೆ. ನನ್ನ ಈ ಹುಚ್ಚನ್ನು ಕಂಡು ನನ್ನಾಕೆ ಆಗಾಗ, ''ಈ ವಯಸ್ಸಿನ್ಯಾಗೂ ನಿಮ್ಮೂರಿನ ಮ್ಯಾಗ ಅದೇನ ಮೋಹಾನೋ ಏನೋ'', ಎಂದು ಗೊಣಗುವುದಿದೆ.

* * *

ರೈಲು ಗೋಕಾಕ್ ರೋಡಿಗೆ ಬಂದು ನಿಂತಾಗ, ಬೆಳಗಿನ ಹೂಬಿಸಿಲು ಮೂಡಿತ್ತು. ಹೆಚ್ಚು ಹೊತ್ತು ನಿಲ್ಲಲಾರದೇನೋ ಎಂದು ಅವಸರದಿಂದ ಇಳಿದೆ... ತಕ್ಷಣವೇ ಸಿಕ್ಕ ಬಸ್ಸನ್ನು ಹತ್ತಿ ಸಣ್ಣ ಹುಡುಗನಂತೆ ಗಡಬಡಿಸಿ ಹೋಗಿ ಕಿಟಕಿ ಪಕ್ಕದ ಸೀಟಿನಲ್ಲಿ ಕುಳಿತುಕೊಂಡು ಕಣ್ಣನ್ನು ಆಚೆಗೆ ಹರಿಯಬಿಟ್ಟೆ. ಬಸ್ಸು ಮುಂದೆ ಮುಂದೆ ಹೊರಟಂತೆ ಕಣ್ಣಮುಂದೆ ತೇಲಿಬರುವ ದೃಶ್ಯಾವಳಿಗಳೊಂದಿಗೆ ತಳುಕು ಹಾಕಿಕೊಳ್ಳುತ್ತಾ ಮನಸ್ಸು ಹಿಂದೆ ಹಿಂದೆ ಹೊರಟಿತು.

ಎಲ್ಲವೂ ಚಿರಪರಿಚಿತ. ದಟ್ಟವಾಗಿ ಹಬ್ಬಿರುವ ಸಾಲು ಸಾಲು ಬೆಟ್ಟಗಳು!! ಆ ಬೆಟ್ಟಗಳ ಮಧ್ಯೆ ಧುಮ್ಮಿಕ್ಕುವ ಗೋಕಾಕ್ ಜಲಪಾತ. ಪ್ರವಾಹ ಬಂದರೆ ನೂರಾರು ಪ್ರಾಣಗಳ ಹಾರ ತೆಗೆದುಕೊಂಡು ಸಾವಿರಾರು ಕುಟುಂಬಗಳನ್ನು ಕೊಚ್ಚಿಕೊಂಡೊಯ್ಯುವ ನಿಷ್ಕರುಣಿ ಘಟಪ್ರಭೆ ಇಲ್ಲಿ ಈ ಭೀಮ ಬೆಟ್ಟಗಳ ಕೆಳಗೆ ಏನೂ ಅರಿಯದ ಮಳ್ಳಿಯಂತೆ ಎಷ್ಟು ಚಿಕ್ಕವಳಾಗಿ ಹರಿಯುತ್ತಾಳಲ್ಲಾ, ಎಂದು ಆಶ್ಚರ್ಯವಾಯಿತು. ಗೋಕಾವಿಯಲ್ಲಿ ಓದುವಾಗ ಈ ಜಲಪಾತವನ್ನು ಅದೆಷ್ಟು ಸಲ ನಾನು ನೋಡಿಲ್ಲ! ಗೋಕಾವಿಯಿಂದ ಆರು ಕಿಲೋಮೀಟರ್ ದೂರವಿರುವ ಈ ಅಂತರ ಆಗ ನಮಗೇನೂ ಅನಿಸುತ್ತಲೇ ಇರಲಿಲ್ಲ. ಎವರೆಸ್ಟನ್ನು ಏರಿದ ತೇನಸಿಂಗನಿಗಿಂತ ನಾವೇನೂ ಕಡಿಮೆಯಿಲ್ಲ ಎಂಬ ಹುರುಪಿನೊಂದಿಗೆ ಪ್ರತಿ ರವಿವಾರ ಡಾಂಬರ್ ರೋಡನ್ನು ಬಿಟ್ಟು ಈ ಬೆಟ್ಟ ಗುಡ್ಡಗಳನ್ನು ಹತ್ತುತ್ತಾ ಇಳಿಯುತ್ತಾ ಸಾಹಸಗಳನ್ನು ಮೆರೆಯುತ್ತಿದ್ದ ದಿನಗಳನ್ನು ನೆನೆದು ಮನಸ್ಸು ಉಲ್ಲಾಸಗೊಂಡಿತು.

ಬಸ್ಸು ಬೆಟ್ಟದ ತಿರುವುಗಳನ್ನು ಸುತ್ತುತ್ತ, ದಾಟುತ್ತ ಗೋಕಾವಿಯನ್ನು ಸಮೀಪಿಸಿತು. ನನಗೆ

ಎತ್ತಿನ ಗಾಡಿ ದಡಕ್ಕು ದುಡುಕ್ಕು ಎಂದು ಓಲಾಡುತ್ತ ಸಾಗುತ್ತ ಅದೇ ನಮ್ಮ ಆ ಚಳಮಾರ ಹಾದಿಯನ್ನು ತಲುಪಿಬಿಟ್ಟಿತ್ತು, ಓಹ್! ಅದೆಂತಹ ಪುಳಕ!! ಬಂಡಿ ಆ ಹಾದಿಯಲ್ಲಿ ನಡೆಯುವಾಗ ಎಲ್ಲವೂ ಅದಲುಬದಲಾದಂತೆ ಕಾಣುತ್ತಿದ್ದರೂ ನಮ್ಮ ವಾಕಿಂಗಿನ ನೆನಪುಗಳು ಮಾತ್ರ ಚಿರನೂತನವೆನ್ನುವಂತೆ ಢಾಳಾಗಿ ನನ್ನನ್ನು ತಟ್ಟುತ್ತಿದ್ದವು. ಬಸು ಪತ್ರದಲ್ಲಿ ಬರೆದಿದ್ದ, ''ನಾವೀಗ ಊರಲಿಲ್ಲ. ಊರಲ್ಲಿನ ಹಳೆ ಮನೆ ಬಿದ್ದುಹೋಗಿದೆ. ಈಗ ಊರಿನಿಂದ ಒಂದು ಕಿ.ಮೀ. ದೂರ ಅದೇ ನಮ್ಮ ಚೆಳಮಾರ ಹಾದಿಯ ಪಕ್ಕದಲ್ಲೇ ಮನೆ ಕಟ್ಟಿಸಿ ಅಲ್ಲೇ ವಾಸವಾಗಿದ್ದೇವೆ. ನೀನು ಮೊದಲು ಇಲ್ಲಿಗೇ ಬಾ. ಆಮೇಲೆ ನಿಮ್ಮ ಮನೆಗೆ ಬಿಡುತ್ತೇವೆ. ಊಟ ಮಾತ್ರ ಇಲ್ಲೇ ಮಾಡಬೇಕು'' ಎಂದು...

ಅದೆಂಥದೋ ವರ್ಣಿಸಲಸಾಧ್ಯವಾದ ಪುಳಕ! ಮಲ್ಲಯ್ಯನ ಗುಡ್ಡದ ಓರೆಯಲ್ಲಿ ಮಲಗಿರುವ ಈ ಊರು ಈಗ ಸಂಪೂರ್ಣವಾಗಿ ಅದನ್ನು ಸುತ್ತುವರಿದಿದೆ. ಮನೆಗಳೂ ಪೈಪೋಟಿಯಿಂದೆಂಬಂತೆ ಆ ಗುಡ್ಡವನ್ನೇ ಹತ್ತುತ್ತಿವೆ. ಅಬ್ಬಾ ಈ ಮಲ್ಲಯ್ಯನ ಗುಡ್ಡವೋ ಥೇಟು ಹೆಗಲ ಮೇಲೆ ಹತ್ತಿಸಿಕೊಂಡು ಜಾತ್ರೆ ತೋರಿಸುವ ಅಪ್ಪನಂತಿತ್ತು ನಮ್ಮ ಪಾಲಿಗೆ...! ಈ ಗುಡ್ಡದ ಮೇಲೆ ಹತ್ತಿ ನಿಂತು ನೋಡಿದರೆ ಅಷ್ಟು ಎತ್ತರದ ಕಟ್ಟಡಗಳೂ ಚಿಕ್ಕ ಚಿಕ್ಕ ಬೆಂಕಿಪೊಟ್ಟಣಗಳಂತೆ ಕಾಣುತ್ತಿದ್ದವು. ಮನುಷ್ಯರೋ ಇರುವೆಗಳಂತೆ !!

ಗೋಕಾವಿ ಬಸ್ ಸ್ಟ್ಯಾಂಡಿನಲ್ಲಿ ಇಳಿದಾಗ ಎಲ್ಲವೂ ಅದಲುಬದಲಾದಂತೆನಿಸಿತು. ''ಅಲ್ಫಾಕ್ ಅಲ್ಫಾಕ್'', ಎಂದು ಬೆಲ್ಲ ಸುಂಟಿಗಳಿಂದ ಮಾಡಿದ ಸಿಹಿ ತಿಂಡಿಯನ್ನು ಮಾರುವ ಅಲ್ಫಾಕ್‌ವಾಲಾ ಇಲ್ಲ; ''ಚುನಮರೇ ಸೇಂಗಾ'', ಎಂದು ರಾಗವಾಗಿ ಕೂಗುತ್ತಿದ್ದ ಚುನಮರಿ ಯವನಿಲ್ಲ. ''ಬಾಂಬೇ ಮಿಠಾ...ಯ್..'' ಎಂದು ಕೂಗುತ್ತಿದ್ದ ಮಿಠಯಿವಾಲಾ ಇಲ್ಲ. ನಿರಾಸೆಯಾಯಿತು.

''ರೋಡ್ ಮಾಡಾಕತ್ಯಾರ. ನಮ್ಮೂರಿಗೆ ಬಸ್ ಬರೂದಿಲ್ಲ, ಕುಲಗೋಡಕ್ಕ ಬಾ ಬಂಡಿ ಕಳಸ್ತೀನಿ'', ಎಂದು ಮೊದಲೇ ಗೆಳೆಯ ಮಹೇಶ ಹೇಳಿದ್ದ. ಆದ್ದರಿಂದ ನೇರವಾಗಿ ನಮ್ಮೂರಿಗೇ ಹೋಗುವ ಬಸ್ಸಿಗಾಗಿ ಕಾಯಬೇಕಾಗಿರಲಿಲ್ಲ. ಬಾಗಲಕೋಟೆಗೆ ಹೋಗುವ ಯಾವುದಾದರೂ ಬಸ್ಸು ಹತ್ತಿದರೆ ಸಾಕಿತ್ತು.

* * *

ಕುಲಗೋಡದಲ್ಲಿಳಿದಾಗ ಬಂಡಿ ನನಗಾಗಿ ಕಾಯುತ್ತಿತ್ತು. ಬಂಡಿ ಹೊಡೆಯುವವನನ್ನು ನೋಡಿ, ''ತಮ್ಮಾ, ನೀ ಯಾರ ಮಗಾ ?'' ಎಂದು ಅನುಮಾನಿಸುತ್ತಲೇ ಕೇಳಿದೆ. ಅದಾಗಲೇ ಆ ಯುವಕನ ಮೂಗು, ಕಣ್ಣು, ಬಣ್ಣ ನಡುವಳಿಕೆಯಿಂದ ಅವನು ನನ್ನ ಗೆಳೆಯ ಮಹೇಶನ ಮಗನೇ ಎಂದು ಹೆಚ್ಚೂ ಕಡಿಮೆ ಖಾತ್ರಿಯಾಗಿತ್ತು. ಸೂಟುಬೂಟು ಹಾಕಿ ಕೊಂಡು ಬಂದಿದ್ದೆನಾದ್ದರಿಂದ ಕುಳಿತುಕೊಳ್ಳಲು ಸ್ವಲ್ಪ ಕಷ್ಟವಾಗುತ್ತಿತ್ತು. ಆದರೂ ಬಂಡಿಯಲ್ಲಿ ಕುಳಿತು ಆಚೀಚಿನ ಹಸಿರು ಹೊಲಗದ್ದೆಗಳನ್ನು ನೋಡುತ್ತ ಪಯಣಿಸುವುದೇ ವಿಶಿಷ್ಟ ಅನುಭವ. ಈ ಅನುಭವ ಏನು ಕೊಟ್ಟರಾದರೂ ಸಿಕ್ಕೀತು ? ಮಗನಿಗೆ ಹೇಳಿದ್ದೆ, ''ಬಾ ಹೋಗೋಣ. ನಮ್ಮ ಹಳ್ಳಿಯನ್ನು ಇನ್ನೊಮ್ಮೆ ನೋಡಿದಂತಾಗುತ್ತದೆ'', ಎಂದು. ಅವನು ನಾಟಕೀಯವಾಗಿ ಕೈ ಮುಗಿದು, ''ಅಪ್ಪಾ, ನಿಮ್ಮ ಹಳ್ಳಿ ನಿಮಗೇ ಪ್ರೀತಿ. ಅಲ್ಲಿ ಸರಿಯಾಗಿ ಒಂದು ಬಸ್ ಸಹಿತ ಹೋಗೂದಿಲ್ಲ. ನಾ ಬರೂದಿಲ್ಲಪ್ಪಾ'', ಎಂದು ಕಡ್ಡಿಮುರಿದಂತೆ ಹೇಳಿದ್ದು ನೆನಪಾಗಿ ನಗು ಬಂತು. ಏನು ಮಾಡುವುದು, ಪೇಟೆಯಲ್ಲೇ ಹುಟ್ಟಿ ಬೆಳೆದ ಮಕ್ಕಳು ಹಳ್ಳಿಯ ವಾತಾವರಣವನ್ನು ಎಲ್ಲಿ ಇಷ್ಟಪಡುತ್ತಾರೆ ? ಆದರೆ ನನಗೆ ಹಾಗಲ್ಲ. ನನ್ನೂರು ನೆನಪುಗಳ ಖಜಾನೆ, ಸೋಜಿಗದ ತವರು, ಮತ್ತೆ ಮತ್ತೆ ಸೆಳೆಯುವ ಮಾಯಾಲೋಕ !! ಇಂಥದ್ದೆಲ್ಲವನ್ನು ಅವನಿಗೆ ಹೇಗೆ ತಿಳಿಸಲಿ !

* * *

''ಹ್ಞೂ, ನಿನ್ನ ಹೆಸರೇನು ?'' ಎಂದೆ. ''ಆನಂದರೀ'', ಎಂದು ಚುಟುಕಾಗಿ ಉತ್ತರಿಸಿದ ಆತ. ಓಹ್ ! ಮಹೇಶ ಹೇಳಿದ್ದ, ಆನಂದನೂ ತನ್ನ ಹಾಗೇನೇ ರೈತ ಎಂದು. ಮತ್ತೆ ಮನಸ್ಸು ಭೂತಕ್ಕೆ ಜಾರಿತು.

ಕಾಲೇಜಿನ ದಿನಗಳವು. ಅಂದು ರವಿವಾರ. ಮೂಡಲಗಿಯಲ್ಲಿ ಸಂತೆ. ಗಿಜಿಗಿಜಿಗುಟ್ಟುವ ಮಾರ್ಕೆಟ್ಟಿನ ಹತ್ತಿರವೇ ನಮ್ಮ ರೂಮು. ಸಂತೆಯ ಗದ್ದಲ ನಮ್ಮ ರೂಮಿನೊಳಗೂ ನುಗ್ಗಿ ಕಿರಿಕಿರಿಯನ್ನುಂಟುಮಾಡುತ್ತಿತ್ತು, ಧೂಳಿನೊಂದಿಗೆ. ಬಟ್ಟೆ ಒಗೆದುಹಾಕಿ ಮಧ್ಯಾಹ್ನದ ಊಟಕ್ಕೆ ಏನಾದರೂ ಕುದಿಸಿಕೊಳ್ಳಬೇಕಲ್ಲ ಎಂದು ಸೀಮೆಎಣ್ಣೆ ಸ್ಟೋವ್‌ಅನ್ನು ಎತ್ತಿ ಅಲುಗಾಡಿಸಿ ಎಣ್ಣೆ ಇದೆಯೋ ಎಂದು ಪರೀಕ್ಷಿಸುತ್ತಿದ್ದೆ. ಬಾಗಿಲು ಬಡಿದ ಸದ್ದು. ಯಾರು ಬಂದ್ರು ಈ ಟೈಮಲ್ಲಿ ಎಂದುಕೊಂಡು ಎದ್ದು ಹೋಗಿ ಬಾಗಿಲು ತೆಗೆದೆ. ಬಾಗಿಲಲ್ಲಿ ಬಂದು ನಿಂತವ ನನ್ನ ಜೀವದ ಗೆಳೆಯ ಮಹೇಶ ! ಆಪ್ತಮಿತ್ರನನ್ನು ಕಂಡು ಸಂತೋಷದಿಂದ ಪುಳಕಗೊಳ್ಳುವ ಮೊದಲೇ ಅವನ ಮುಖದ ವ್ಯಗ್ರತೆ ನನ್ನಲ್ಲಿ ಭಯ, ಆತಂಕಗಳನ್ನು ಹುಟ್ಟಿಸಿ ಆ ಪುಳಕದ ಅನುಭವದಿಂದ ವಂಚಿಸಿಬಿಟ್ಟಿತು. ಆತ ನೇರವಾಗಿ ಒಳಗೆ ಬಂದು ಟ್ರಂಕಿನ ಮೇಲೆ ಕುಳಿತುಕೊಂಡ. ಎಂದಿನಂತಿರದೆ ವಿಚಿತ್ರವಾಗಿದ್ದ ಆತ ಮೈಯೊಳಗೆ ಯಾವುದೋ ಭೂತ ಹೊಕ್ಕಂತೆ ಕಂಡ.

''ಯಾಕೋ ಹಿಂಗ್ಯಾಕಿದ್ದೀ ಏನಾತು ?'', ಎಂದು ಕೇಳಿದೆ. ಆತನಲ್ಲಿ ಸಮಾಧಾನವಾಗಲೀ ಶಾಂತಿಯಾಗಲಿ ಇರಲಿಲ್ಲ. ಎದ್ದು ಹೋಗಿ ಬಾಗಿಲು ಹಾಕಿ ಬಂದು, ''ಅದೇನು ಹೇಳು'' ಎಂಬಂತೆ ಅವನನ್ನೇ ನೋಡುತ್ತ ಕುಳಿತೆ. ಆತ ಒಂದೂ ಮಾತಾಡದೇ ತನ್ನ ಅಂಗಿ ಎತ್ತಿ ತೋರಿಸಿದ. ಅವನ ಸೊಂಟದಲ್ಲಿ ಒಂದು ಸೀಸಿನ ಗುಂಡು ಭದ್ರವಾಗಿ ಕೂತಿತ್ತು. ಸೀಸಿನ ಗುಂಡಿನ ಬಗ್ಗೆ ಕೇಳಿದ್ದೆ. ನೋಡಿದ್ದೆ ಕೂಡ. ಸುಮಾರು ಅರ್ಧ ಮೀಟರ್ ಉದ್ದದಷ್ಟು ಚರ್ಮದ ಹುರಿಗಳನ್ನು ಹೆಣೆದು ಮಾಡಿ ಅದರ ಕೊನೆಗೆ ಒಂದು ಸೀಸಿನ ಗುಂಡನ್ನು ಚರ್ಮದ ಹೊದಿಕೆಯಲ್ಲಿ ಹಾಕಿರುತ್ತಾರೆ. ಅದನ್ನು ಆತ್ಮರಕ್ಷಣೆಗಾಗಿ ಬಳಸುತ್ತಾರೆಂದು ಕೇಳಿದ್ದೆ. ಅದರಿಂದ ಒಂದೇ ಒಂದು ಏಟು ಬಿಟ್ಟರೆ ಎದುರಾಳಿಯ ಕಥೆ ಮುಗಿದಂತೆಯೇ. ಅಂಥದೊಂದು ಮಾರಕಾಸ್ತ್ರ ಇವನ ಬಳಿ ಯಾಕೆ ?!! ಹೌಹಾರಿದೆ. ನೂರೆಂಟು ಪ್ರಶ್ನೆಗಳೂ ನನ್ನಲ್ಲಿ ಉದ್ಭವಿಸುತ್ತಿರುವಾಗಲೇ ಆತ ತೀರಾ ತಗ್ಗಿದ ದನಿಯಲ್ಲಿ, ಆದರೆ ತುಂಬಾ ಶಕ್ತಿಯುತವಾಗಿ, ಹೇಳಿದ, ''ಇನ್ನ ಒಂದ ವಾರದಾಗ ನಿನಗ ಒಂದ ಸುದ್ದಿ ಬರ್‍ತೈತಿ. ಒಂದು, ನಾನೇ ಯಾರನ್ನರೇ ಕೊಂದು ಜೇಲಿಗೆ ಹೋಗಿರತೀನಿ, ಇಲ್ಲಾಂದ್ರ ಯಾರಾದರೂ ನನ್ನನ್ನ ಕೊಂದಿರತಾರ.''

ನನ್ನ ಎದೆಯಲ್ಲಿ ಯಾರೋ ಮಂಜುಗಡ್ಡೆಯ ಕತ್ತಿಯನ್ನು ತಣ್ಣಗೆ ಇಳಿಸುತ್ತಿರುವಂತೆನಿಸುತ್ತಿತ್ತು. ''ಅರೆ... ಅಲ್ಲೋ... ಇದೇನ್...'', ಪೂರ್ಣವಾಗಲು ಹವಣಿಸುತ್ತಿರುವ ನನ್ನ ಪ್ರಶ್ನೆಯನ್ನು ಗಮನಕ್ಕೆ ತೆಗೆದುಕೊಳ್ಳದೇ ಆತ ಧಡಕ್ಕನೇ ಎದ್ದ. ಬಾಗಿಲು ತೆರೆದು ನಡೆದು ಸಂತೆಯ ಜನಜಂಗುಳಿಯಲ್ಲಿ ಕಳೆದೇ ಹೋದ. ನಾನು ಬೆದರುಬೊಂಬೆಯಂತೆ ಹಾಗೇ ನಿಂತಿದ್ದೆ. ಈ ಮುಂಚೆ ತಲೆಗೆ ಚಿಟ್ಟು ಹಿಡಿಸಿದ್ದ ಸಂತೆಯ ಗದ್ದಲವನ್ನು ಯಾರೋ ಮ್ಯೂಟ್ ಮಾಡಿದ್ದಾರೆನಿಸುತ್ತಿತ್ತು.

ಮಹೇಶ ಮತ್ತು ನಾನು ಚೆಡ್ಡಿ ದೋಸ್ತರು. ಜಾತಿ ಮತ್ತು ಅಂತಸ್ತುಗಳಿಂದ ಅವನ ಮನೆಯವರು ನಮಗಿಂತ ತುಂಬಾ ಮೇಲಿನವರು. ಆದರೂ ಅದು ಹೇಗೋ ಏನೋ ನಮ್ಮಿಬ್ಬರಲ್ಲಿ ತುಂಬಾ ಆತ್ಮೀಯತೆ. ಇಬ್ಬರೂ ಭಾವಜೀವಿಗಳು. ಊರು, ಊರಮುಂದಿನ ಆ ಜಂಬಾಳೆ ಮರಡಿ, ಅಲ್ಲಿ ಬೆಳೆಯುವ ಹಸಿರು ಹುಲ್ಲು, ಅಲ್ಲಿ ದನಗಳನ್ನು ಮೇಯಿಸುವುದು, ನಮ್ಮಂತೆ ಬರುವ ಇನ್ನಿತರ

ಹುಡುಗ ಹುಡುಗಿಯರೊಂದಿಗೆ ಆಡುವ ಆಟಗಳೆಂದರೆ ನಮಗೆ ತುಂಬಾ ಪ್ರೀತಿ. ರವಿವಾರ ಬಂದರೆ ದನಗಳನ್ನು ಮೇಯಿಸುವ ನೆಪದಲ್ಲಿ ನಮ್ಮ ಗೆಳೆಯ ಗೆಳತಿಯರ ತಂಡ ಹೊಸ ಹೊಸ ಆಟಗಳನ್ನು ಹೂಡುತ್ತಿತ್ತು. ಅದನ್ನು ನಾವೆಂದೂ ತಪ್ಪಿಸಿಕೊಳ್ಳುತ್ತಿರಲಿಲ್ಲ. ನಮ್ಮೂರ ಸಂತರ ಭಜನೆ, ನಮ್ಮೂರ ಹಳ್ಳ, ನಮ್ಮೂರ ಹುಡುಗಿಯರು ಇವೆಲ್ಲ ನಮಗೆ ಅತ್ಯಂತ ಆಕರ್ಷಕವಾದ ಮಾಯಾಲೋಕವನ್ನು ಸೃಷ್ಟಿಸುವ ಸಂಗತಿಗಳೇ ಆಗಿಬಿಟ್ಟಿದ್ದವು.

ಹೀಗೆ ಬಾಲ್ಯದ ಹುರುಪಿನಲ್ಲಿರುವಾಗಲೇ ದೊಡ್ಡವರಾದೆವೆಂದು ಹೈಸ್ಕೂಲು ಶಿಕ್ಷಣಕ್ಕಾಗಿ ನಮ್ಮನ್ನು ಗೋಕಾವಿ ಶಾಲೆಗೆ ಸೇರಿಸಲಾಯಿತು. ನಾವು ಬಡವರು. ಹಾಗಾಗಿ ನನ್ನನ್ನು ನಮ್ಮ ತಂದೆ ಒಂದು ಹಾಸ್ಟೆಲಿನಲ್ಲಿಟ್ಟರು. ಅವರೋ ಶ್ರೀಮಂತರು. ತಮ್ಮ ಪ್ರತಿಷ್ಠೆಗನುಗುಣವಾಗಿ ಒಂದು ರೂಮು ಬಾಡಿಗೆ ಮಾಡಿ ಇಟ್ಟರು. ಆಗ ನಾವು ನಮ್ಮ ಊರಿನ ಮಾಧುರ್ಯವನ್ನೂ ಮತ್ತು ನಾವಿಬ್ಬರೂ ಜೊತೆಗಿರುವ ಅವಕಾಶಗಳನ್ನೂ ಏಕಕಾಲಕ್ಕೇ ಕಳೆದುಕೊಂಡಂತಾಯಿತು. ಆದರೂ ಪ್ರತಿದಿನ ಸಂಜೆ ಇಬ್ಬರೂ ಸೇರಿ ಗೋಕಾವಿಯಲ್ಲಿರುವ ಆಕರ್ಷಕ ಗುಡ್ಡಗಳನ್ನು ಹತ್ತಿ ಕುಳಿತು ಮಾತನಾಡುತ್ತಿದ್ದೆವು. ನಮ್ಮೂರಿನ ಮಧುರ ನೆನಪುಗಳನ್ನು ಮತ್ತೆ ಮತ್ತೆ ಮೆಲುಕುಹಾಕಲು ಚಳಮಾರ ಹಾದಿಯಂಥದ್ದೇ ಮತ್ತೊಂದು ಸ್ಥಳ ನಮಗೆ ದೊರಕಿದಂತಾಯ್ತು.

ಹೈಸ್ಕೂಲು ಮುಗಿದು ಕಾಲೇಜು ಶಿಕ್ಷಣಕ್ಕೆಂದು ಮತ್ತೆ ನಾವು ಬೇರೆ ಆಗಬೇಕಾದ ಅನಿವಾರ್ಯತೆ ಬಂದೊದಗಿತು. ನನ್ನ ಬಡತನದಿಂದಾಗಿ ನನ್ನ ಕನಸುಗಳಿಗೂ ಮಿತಿಯಿದ್ದಿತು. ಆಗಿನ ನನ್ನ ಒಂದೇ ಒಂದು ಗುರಿಯೆಂದರೆ ಆದಷ್ಟು ಬೇಗನೇ ಯಾವುದಾದರೂ ಒಂದು ನೌಕರಿ ಹಿಡಿದು ನನ್ನ ತಂದೆ ತಾಯಿ ಹೊತ್ತಿರುವ ನೊಗಕ್ಕೆ ನಾನೊಂದು ಹೆಗಲಾಗಬೇಕೆಂಬುದು. ಯಾಕೆಂದರೆ ನಮ್ಮದು ಮೂರು ಜನ ತಮ್ಮಂದಿರು, ಇಬ್ಬರು ತಂಗಿಯರಿರುವ ದೊಡ್ಡ ಸಂಸಾರ. ಯಾರೋ ಅಪ್ಪನಿಗೆ ಹೇಳಿದ್ದರಂತೆ, ''ಮೂಡಲಗಿಯಲ್ಲಿ ಟಿ. ಸಿ. ಎಚ್. ಮಾಡಸು, ಹುಡಗಾ ದೌಡ ಮಾಸ್ತರ ಆಗ್ತಾನ,'' ಎಂದು. ಅದಕ್ಕೆ ನಾನು ಗೋಕಾವಿ ಬಿಟ್ಟು ಮೂಡಲಗಿ ಸೇರಬೇಕಾಯಿತು. ಆದರೆ ಮಹೇಶ ಪ್ರತಿಷ್ಠಿತ ಮನೆತನದವ. ಅವರ ತಂದೆ ಊರಿನ ಚೇರ್‌ಮನ್ ಆಗಿದ್ದವರು, ಇದ್ದುಳ್ಳವರು. ಹಾಗಾಗಿ ಅವರ ಕನಸು ಮಗ ಡಾಕ್ಟರ್ ಆಗಬೇಕು ಎಂಬುದು. ಆದರೆ ನನ್ನೊಂದಿಗೆ ಮೂಡಲಗಿಗೆ ಹೋಗಿ ತಾನೂ ಟಿ. ಸಿ. ಎಚ್. ಮಾಡಬೇಕೆಂಬುದು ಅವನ ಹಟ. ಅದೇಕೋ ಏನೋ ಶಿಕ್ಷಕರಾಗಬೇಕೆಂಬುದೇ ನಾವಿಬ್ಬರೂ ಮೊದಲಿನಿಂದಲೂ ಕಂಡ ಕನಸಾಗಿತ್ತು.

ಮಹೇಶನ ಹಟದಿಂದ ಅವನ ತಂದೆ ತಾಯಿಗಳಿಗೆ ಒಂದು ರೀತಿಯ ಕಿರಿಕಿರಿಯುಂಟಾಯಿತು. ಈ ಸಣ್ಣ ಮಂದಿಯ ಹುಡುಗನೊಂದಿಗೆ ಕೂಡಿ ಮಗ ಹಾಳಾಗುತ್ತಿದ್ದಾನೆಂಬ ಮೇಲಂತಸ್ತಿನವರಿಗಿರುವ ಜಂಭದ ಜೊತೆಗೆ ಕೊರಗು ಬೇರೆ. ಹಟ ಮಾಡಿ ಅವನನ್ನು ಗೋಕಾವಿ ಕಾಲೇಜಿಗೇ ಸೇರಿಸಿದರು. ಅವನು ಅದೆಷ್ಟು ಬೇಡಿಕೊಂಡರೂ ಕೇಳಲಿಲ್ಲ. ನನ್ನಿಂದ ಅವನನ್ನು ಅಗಲಿಸುವ ವಿಚಾರವೂ ಅವರದಾಗಿದ್ದಿತು. ಕೊನೆಗೂ ಅವರೇ ಗೆದ್ದಂತಾಯಿತು. ಹಟಕ್ಕೆ ಬಿದ್ದ ಆತ ಓದುವುದನ್ನೇ ಬಿಟ್ಟ. ಫೇಲಾದ. ಈಗಲಾದರೂ ನನ್ನನ್ನು ಮೂಡಲಗಿಗೆ ಸೇರಿಸಿ ಎಂದು ಬೇಡಿಕೊಂಡ. ಅವರ ತಂದೆಗೆ ರೋಸಿಹೋಗಿ ಸಿಟ್ಟಿಗೆದ್ದರು. ''ಲೇ ಹ್ವಾದರ ಗೋಕಾವಿಗಿ ಹೋಗ, ಇಲ್ಲಂದ್ರ ನೀ ಸಾಲಿಗೇ ಹೋಗಬ್ಯಾಡ, ಬೇಕಾದಷ್ಟ ಹೊಲಾ ಐತಿ, ಮನ್ಯಾಗ ಎತ್ತ ಅದಾವು. ಮಾಡಿಕೊಂಡ ಬಿದ್ದಿರು. ಹಾಳಾಗಿ ಹೋಗ'', ಎಂದರು. ಆತ ಹಾಗೇ ಮಾಡಿದ. ಅತ್ಯಂತ ಪ್ರತಿಭಾವಂತ ಹುಡುಗ, ನೇಗಿಲು ಹೊತ್ತ, ಬಂಡಿ ಹೂಡಿದ. ನನ್ನ ಗೆಳೆಯನ ಶಿಕ್ಷಣದ ಗಾಡಿ ಹೀಗೆ ಮಾರ್ಗಮಧ್ಯೆದಲ್ಲಿಯೇ ಮುರಿದು ಬಿದ್ದುದು ನನಗೆ ತುಂಬಾ ಬೇಸರವನ್ನುಂಟುಮಾಡಿತು.

ನಾನು ಪ್ರತಿ ಶನಿವಾರ ಊರಿಗೆ ಬರುತ್ತಿದ್ದೆ. ಬಂದಾಗ ಇಬ್ಬರೂ ನಮ್ಮೂರ ಚೆಳಮಾರ ಹಾದಿಗುಂಟ ವಾಕಿಂಗ್ ಹೋಗುತ್ತಿದ್ದೆವು. ಮೊದಮೊದಲು ನನ್ನೊಂದಿಗೆ ವಾಕಿಂಗ್ ಮಾಡುವುದವನ್ನು ಸಹಿಸದೆ ಗುರ್ ಎನ್ನುತ್ತಿದ್ದ ಅವರ ಮನೆಯವರು ಆಮೇಲೆ ಅದು ನಡೆಯದೆಂದು ಗೊತ್ತಾದಮೇಲೆ ಸುಮ್ಮನಾದರು. ಅಂಕುಡೊಂಕಾಗಿ ಹಾಸಿರುವ ಆ ಹಾದಿ ನಮ್ಮ ನೋವು ನಲಿವು ಸುಖ ದುಃಖ ಒಲವು ಗೆಲುವುಗಳನ್ನು ಸಮಾಧಾನದಿಂದ ಕೇಳುತ್ತಿತ್ತು. ನಮಗೆ ಸಮಾಧಾನವಾಗುತ್ತಿತ್ತು. ನಾನು ನನ್ನ ಕಾಲೇಜಿನ ಹೊಸ ಹೊಸ ಅನುಭವಗಳನ್ನೆಲ್ಲ ಮನಬಿಚ್ಚಿ ಹೇಳುತ್ತಿದ್ದರೆ, ಮಹೇಶ ಅವನ್ನು ಉತ್ಸಾಹದಿಂದ ಕೇಳುತ್ತಿದ್ದ. ಅವನೂ ಕೂಡ ನಮ್ಮೂರ ಹುಡುಗಿಯರ ರಂಜಕ ಕಥೆಗಳನ್ನು, ಇಳಿವಯಸ್ಸಿನವರ ಮದುವೆಯಾಚೆಗಿನ ಸಂಬಂಧಗಳ ಕಥೆಗಳನ್ನು ಹೇಳುತ್ತಿದ್ದ. ನಮ್ಮೂರಿನಲ್ಲಿ ವಾಕಿಂಗ್ ಎಂದು ಹೊರಟವರೆಂದರೆ ನಾವೇ ಮೊದಲಿಗರು. ಆರಂಭದಲ್ಲೆಲ್ಲ ಹೊಲಗದ್ದೆಗಳಿಂದ ಮನೆಗೆ ಮರಳುತ್ತಿದ್ದ ಜನಗಳೆಲ್ಲ ನಾವು ಬರಿಗೈಯಿಂದ ಹಾಗೆಯೇ ಹೊರಡುವುದನ್ನು ನೋಡಿ ಆತಂಕದಿಂದ, ''ಯಾಕ್ಯೋ ಪಾ, ಇಕಾಡಿ ಹೊಂಟ್ರೀ'', ಎಂದು ಕೇಳುತ್ತಿದ್ದರು. ಬರುಬರುತ್ತ ನಮ್ಮ ವಾಕಿಂಗ್ ಸಾಮಾನ್ಯವಾಗುತ್ತ ಬಂದು ಅವರೇ ಅವರ ಪ್ರಶ್ನೆಗೆ, ''ಏ, ಅವರು ಗಾಳಿ ಹವಾ ತಿನ್ನಾಕ ಹೊಂಟಾರೇಳ'', ಎಂಬ ಉತ್ತರವನ್ನು ಹುಡುಕಿಕೊಂಡಿದ್ದರು.

ನಾವು ಬಾಲ್ಯದ ದಿನಗಳಲ್ಲಿ ದನ ಮೇಯಿಸುವಾಗ ಗೆಳೆಯ ಗೆಳತಿಯರ ಮೈಮೇಲೆ ದೆವ್ವ ಬರಿಸುತ್ತಿದ್ದುದು, ಹುಡುಗ ಹುಡುಗಿಯರೆಲ್ಲ ಸೇರಿ ಮದುವೆಯ ಆಟವನ್ನು ಆಡುತ್ತಿದ್ದುದು, ಅನುಮಪ್ಪನ ಓಕುಳಿಗೆ ನಾಟಕ ಮಾಡಿದ್ದು, ಓಕುಳಿ ಕೊಂಡವನ್ನು ಜಿಗಿದು ಊರಿನ ಪೈಲವಾನರಿಗೆಲ್ಲ ಅಚ್ಚರಿ ಹುಟ್ಟಿಸಿದ್ದು, ಹೀಗೇ ಹಲವಾರು ಬಾಲ್ಯದ ನೆನಪಿನ ಮೂಟೆಯನ್ನು ಬಿಚ್ಚಿಟ್ಟು ಹಣಿಸಿ ಆಗಾಗ ತಾಜಾ ಆಗುತ್ತಿದ್ದೆವು ಆ ಚೆಳಮಾರ ಹಾದಿಯಲ್ಲಿ.

*  *  *

ನನ್ನ ಪರೀಕ್ಷೆಗಳು ಮುಗಿದಿದ್ದವು. ಆತಂಕದಲ್ಲೇ ಬರೆದಿದ್ದೆ. ಮಹೇಶ ಹಾಗೆ ಸೀಸಿನ ಗುಂಡನ್ನು ಕಟ್ಟಿಕೊಂಡು ಬಂದು ಹೋದ ನಂತರ ಇದೇ ಮೊದಲು ನಾನು ಊರಿಗೆ ಬರುತ್ತಿದ್ದುದು ಊರನ್ನು ಪ್ರವೇಶಿಸುತ್ತಿದ್ದಂತೆಯೇ ಕೆಲಸಕ್ಕೆಂದು ಹೊರಟ ಕೆಲವು ಹೆಂಗಸರ ದಂಡು ಗೋರಿಜಾಲಿಯಲ್ಲಿ ಎದುರಾಯಿತು. ಅವರು ಮಾತಾಡಿಕೊಳ್ಳುತ್ತಿದ್ದ ಮಾತುಗಳೂ ಏನೇನೋ ಆತಂಕಗಳನ್ನು ಹುಟ್ಟಿಸುತ್ತಿದ್ದವು ನನ್ನಲ್ಲಿ. ''ಅಯ್ಯSS ಅಂವೇನ ಬಿಡ, ಅವರಪ್ಪನ ಮಾನ ಮರಾದಿ ಕಳದಬಿಟ್ಟ. ಹಿಂಗ ಮಾಡಬೌದಿತ್ತೇನ ಅಂವಾ ?''... ಎಂದೆಲ್ಲಾ ಹೇಳಿದರು. ಯಾರ ಬಗೆಗೆ ಮಾತನಾಡುತ್ತಿದ್ದಾರಿವರು, ಎಂಬ ಆತಂಕದಿಂದಲೇ ಊರನ್ನು ಪ್ರವೇಶಿಸಿದೆ. ಮನೆಗೆ ಬರುತ್ತಲೇ ಅಪ್ಪ ಅವ್ವ ನನ್ನನ್ನು ಕೂರಿಸಿಕೊಂಡು ಏನೇನೋ ಬುದ್ಧಿವಾದ ಹೇಳತೊಡಗಿದರು. ಅವರ ಆ ಬುದ್ಧಿವಾದದ ಸಾರವಿಷ್ಟು. ಶಾಲೆ ಬಿಟ್ಟ ಮೇಲೆ ನನ್ನ ಗೆಳೆಯ ಮಹೇಶ ಹುಡುಗಿಯರ ಸಹವಾಸ ಮಾಡಿ ಕೆಟ್ಟುಹೋಗಿದ್ದಾನೆ, ಒಂದು ಹುಡುಗಿಯನ್ನು ಬಸಿರು ಮಾಡಿ ತನ್ನ ತಂದೆಯ ಮಾನ ಮಣ್ಣುಪಾಲು ಮಾಡಿದ್ದಾನೆ, ಆ ಹುಡುಗಿಯ ಅಣ್ಣಂದಿರು ತಮ್ಮ ತಂಗಿಯನ್ನು ಮದುವೆಯಾದರೆ ಸರಿ, ಇಲ್ಲವಾದರೆ ಖೂನಿ ಮಾಡುತ್ತೇವೆ ಎಂದು ಹೆದರಿಸಿದ್ದಾರೆ, ಏನಾದರೂ ಹುಡುಗ ತುಂಬಾ ಕೆಟ್ಟವನು. ಯಾರೂ ತಮ್ಮ ಮಕ್ಕಳನ್ನು ಅವನೊಂದಿಗೆ

ಬರೆಯಲು ಬಿಡುತ್ತಿಲ್ಲ, ನಾನೂ ಕೂಡ ಅವನಿಂದ ದೂರವಿರುವುದೇ ಒಳ್ಳೆಯದು ಎಂದೆಲ್ಲಾ ಹೇಳಿದರು. ಈ ಕಥೆಯನ್ನು ಕೇಳಿದ ಮೇಲೆ ನನಗೆ ಅವನು ನನ್ನ ರೂಮಿಗೆ ಬಂದಿದ್ದು, ಸೊಂಟಕ್ಕೆ ಸೀಸಿನ ಗುಂಡನ್ನು ಕಟ್ಟಿಕೊಂಡಿದ್ದು, ಆ ದಿನ ಅವನು ಮಾತಾಡಿದ ಆ ಮಾತಿನ ರೀತಿ, ಇವೆಲ್ಲವುಗಳಿಗೂ ಒಂದು ಆಕಾರ ಬರತೊಡಗಿತು. ಓಹ್, ಹೀಗೋ ವಿಷಯ! ಏನಾದರಾಗಲೀ ನಾನು ಗೆಳೆಯನಿಗೆ ಬುದ್ಧಿವಾದ ಹೇಳಲೇಬೇಕು, ಮೊದಲೇ ಆತ ಹಟಮಾರಿ. ಆ ಹಟದಿಂದಲೇ ತನ್ನ ಶಿಕ್ಷಣಕ್ಕೆ ಕಲ್ಲು ಹಾಕಿಕೊಂಡಾಗಿದೆ. ಈಗ ಇದನ್ನೇನೋ ಮಾಡಿಕೊಂಡಿದ್ದಾನೆ. ಬೈದಾದರೂ ಸರಿಯೇ. ಅವನಿಗೆ ಬುದ್ಧಿ ಹೇಳಲೇಬೇಕು ಎಂಬ ನಿರ್ಧಾರಕ್ಕೆ ಬಂದುಬಿಟ್ಟೆ.

ನಾ ಬಂದುದನ್ನು ಕೇಳಿ ಸಾಯಂಕಾಲವಾಗುವುದನ್ನೇ ಕಾಯುತ್ತಿದ್ದ ಮಹೇಶ ಕತ್ತಲು ಕವಿಯುವ ಹೊತ್ತಿಗೆ ನಮ್ಮ ಮನೆ ಮುಂದೆ ಪ್ರತ್ಯಕ್ಷನಾದ. ಮನೆಯವರ ಕಣ್ಣುತಪ್ಪಿಸಿ ನಾವು ಮತ್ತದೇ ನಮ್ಮೂರ ಮುಂದಿನ ಚಳಮಾರ ಹಾದಿಯನ್ನು ತುಳಿದೆವು. ಅವನಾಗಿಯೇ ಮಾತು ತೆಗೆಯಲಿ, ಆಗ ಸರಿಯಾಗಿ ಹೇಳುತ್ತೇನೆ ಎಂದು ಸಮಯಕ್ಕೆ ಕಾದವನಂತೆ ಸುಮ್ಮನೇ ಇದ್ದೆ. ನನಗವನ ಮೇಲೆ ಉಗ್ರ ಕೋಪ ಬಂದಿತ್ತು. ಚೆನ್ನಾಗಿ ಬೈದುಬಿಡಬೇಕೆಂದು ನಿರ್ಧರಿಸಿಬಿಟ್ಟಿದ್ದೆ. ಅವನ ಪ್ರತಿಯೊಂದು ವರ್ತನೆಯನ್ನೂ ನಾನು ತಿದ್ದಬಲ್ಲೆ ಎಂಬ ಅಹಂ ಕೂಡಾ ನನ್ನಲ್ಲಿದ್ದಂತಿತ್ತು. ಸುಮ್ಮನೇ ಗಮನಿಸಿದೆ. ಯಾಕೋ ಆತನ ಮುಖದಲ್ಲಿ ಮೊದಲಿದ್ದ ದರ್ಪ, ನನ್ನ ರೂಮಿಗೆ ಬಂದಾಗಿನ ವ್ಯಗ್ರತೆ ಮಾಯವಾದಂತೆನಿಸುತ್ತಿತ್ತು. ಮೆತ್ತಗಾಗಿದ್ದ. ಕೊನೆಗೂ ಮೌನ ಮುರಿದವನು ಅವನೇ. "ನೀ ಬರ್ಲಿ ಅಂತನSS ಕಾಯಾಕ್ಹತ್ತಿದ್ದೆ", ಎಂದು ಮಾತು ತೆಗೆದದ್ದೇ ಬಂತು. ಅದೆಲ್ಲಿತ್ತೋ ನನ್ನ ಸಿಟ್ಟು ಮಾತಾಗಿ ಹೊರಬಿತ್ತು. "ನೀನೇನ ಮನಿಶಾ ಏನ? ದನಾ... ದನಾ... ದನಾನೂ ನಿನ್ನಂಗ ಮಾಡೂದಿಲ್ಲ" ಎಂದು ಮೈಮೇಲೆ ಬಂದವನಂತೆ ಬೈಯ್ದುಬಿಟ್ಟೆ. ಅವನು ಎಲ್ಲವನ್ನೂ ಸುಮ್ಮನೇ ಕೇಳಿಸಿಕೊಂಡ. ನಾನು ಮಾತಾಡಿಬಿಟ್ಟಮೇಲೆ ತುಂಬಾ ಮಾತಾಡಿದೆನೆಂದೆನಿಸತೊಡಗಿತು. ಯಾಕೋ ನನ್ನ ಮೇಲೆ ನನಗೇ ತುಂಬಾ ಸಿಟ್ಟು ಬರತೊಡಗಿತು. ಆತ ಸುಮ್ಮನೇ ನಡೆಯುತ್ತಿದ್ದ. ಆತ ನನ್ನಿಂದ ಈ ರೀತಿಯ ಪ್ರತಿಕ್ರಿಯೆಯನ್ನು ನಿರೀಕ್ಷಿಸಿರಲಿಲ್ಲವೇನೋ. ಅವನ ಮೌನ ನನ್ನನ್ನು ಇನ್ನಷ್ಟು ಚುಚ್ಚತೊಡಗಿತು. ಛೆ! ಆತ ಒಂದೆರಡು ಬೈಯ್ದಾದರೂ ಬೈಯಬಾರದೇ ಎಂದು ಆಶಿಸತೊಡಗಿದೆ. ತುಂಬಾ ಹೊತ್ತು ಹೀಗೇ ಕಳೆದಾದ ಮೇಲೆ ಆತ ಭಾರವಾದ ಧ್ವನಿಯಿಂದ ಆಕಾಶ ನೋಡುತ್ತಿರುವವನಂತೆ ನೋಡುತ್ತ ಹೇಳಿದ, "ನಾ ಏನ ಮಾಡಿದಿನೋ ಗೊತ್ತಿಲ್ಲ. ಒಟ್ಟ ಏನೋ ಆಗಿಹೋತು. ಆದ್ರ ಅದು ಅಷ್ಟೊಂದ ದೊಡ್ಡ ಅಪರಾಧ ಅಂತ ನನಗ ಆಗ ಅನಿಸಲಿಲ್ಲ... ಈಗ ನೋಡಿದರ ನಮ್ಮ ಮನಿಯೊಳಗ, ಊರಾಗ, ಯಾರಂದ್ರ ಯಾರೂ ನನ್ನ ಜೋಡಿ ಮಾತಾಡವಲ್ರು. ಆಕಿನ್ನ ನನಗSS ಗಂಟಹಾಕೂ ತೀರ್ಮಾನಾ ಮಾಡ್ಯಾರ. ನಾನೂ ಹ್ವೂ ಅಂದSSನಿ. ಆದ್ರೂ ಯಾಕ ಎಲ್ಲಾರೂ ಹಿಂಗ ಮಾಡ್ತಾರೋ ಏನೋ... ಜೀವನಾನSS ಬ್ಯಾಸರಾಗಿ ಎರಡ ಸಲಾ ಹಗ್ಗಾ ತಗೊಂಡ

## ಮೂರು ವಚನಗಳು



೧

ಇದುವರೆಗೆ ಕಲೆಹಾಕಿದ ಪುಸ್ತಕಗಳು ಸಾವಿರಾರು
ಅವುಗಳಲ್ಲಿ ಆರಿಸಿದರೆ ಸಿಗಬಹುದು ಹತ್ತಾರು
ಸೂತಕವಿಲ್ಲದ ಮಾತಿನ ಸಂಪುಟಗಳು
ಆಯ್ಕೆಯೆಂದು ಅಗುಳ ಹಿಸುಕುವುದರಲ್ಲೇ
ಕಾಲ ಹೋಯಿತ್ತಯ್ಯಾ
ಮಾಡಿದಡಿಗೆಯ ಪಾಲು
ಮನೆಮಂದಿಗಷ್ಟೇ ಏಕೆ?
ಹಸಿದವರಿಗೆಲ್ಲ ದಕ್ಕುವಂತಾಗಲಿ ಶಿವನೆ
ಅರಿವೆ ಗುರುವೆಂದ ಗುರುಸಿದ್ಧರಾಮ ತಂದೆ.

೨

ಕಲೆಯು ಜೀವನಕ್ಕಾಗಿ ಜೀವಿಗಳ ಕಲ್ಯಾಣಕ್ಕಾಗಿ
ಇದುವೆ ಸೃಷ್ಟಿಯನು ಕುರಿತಾದ ಲೋಕದೃಷ್ಟಿ
ಮಚ್ಚು ಲಾಂಗುಗಳ ಹುಚ್ಚಿನಲ್ಲಿ
ಹೊಡಿಮಗ ಬಡಿಮಗ ಎಂದು
ಹಿಂಸೆ ಬಿತ್ತುವುದೆಂಥ ಕಲೆಯಯ್ಯಾ?
ಹಸಿಬಿಸಿ ಪ್ರೇಮದಾಲಾಪಗಳ ಭ್ರಮೆಯಲ್ಲಿ
ಪರಿಪರಿಯ ವಿಕೃತಿಗಳ ಉದ್ರೇಕಿಸುವುದಾವ ನೆಲೆಯಯ್ಯಾ
ಜೀವ ಜೀವದ ನಡುವೆ ಭಾವ ಸಂಬಂಧಗಳ
ನೆಲೆಬೆಲೆಯ ಸುಳಿ ಸೂಕ್ಷ್ಮವ ಬೆಳೆಸಲಿ ಕಲೆಯು
ಅರಿವೇ ಗುರುವೆಂದ ಗುರುಸಿದ್ಧರಾಮ ತಂದೆ.

೩

ಯಾರಿಗೂ ಯಾವುದಕ್ಕೂ ದಾಸನಾಗಬೇಡ
ನಿನ್ನತನವ ಕಳೆದುಕೊಂಡು ನಾಶನಾಗಬೇಡ
ಯಾವ ಸಿದ್ಧಾಂತವೂ ಅಂತಿಮ ಗಂತವ್ಯವಲ್ಲ
ಯಾವ ವೇದಾಂತವೂ ಪರಮ ಪಾಂಥವಲ್ಲ
ಕಾಲವೆಂಬುದು ಅನಾದಿ ನಿಯತಿಯೆಂಬುದು ನಿರಂತರ
ಇರುವುದೆಂದರೆ ಇದ್ದುದಷ್ಟೇ ಮನ್ವಂತರ
ಬದಲಾವಣೆಯೆಂಬುದು ನಮ್ಮೊಳಗಿನಾ ಚಲನೆ
ನೀತಿಯೆಂಬುದು ನಾವು ಹಾಕಿದ ಸೂತ್ರದಾ ಪರಿಧಿ
ತಿಳಿದು ನಡೆವವಗೆ ಕುರುಹೆಂಬುದು ಅರಿವಿನ ಆದಿ ಜಂಗಮ
ಅರಿವೇ ಗುರುವೆಂದ ಗುರುಸಿದ್ಧರಾಮ ತಂದೆ.

**ಪ್ರೊ॥ ಎಸ್. ಜಿ. ಸಿದ್ದರಾಮಯ್ಯ**
ಎಸ್-೧೨೩, ದೀಪ್ತಿ ಅಪಾರ್ಟ್‌ಮೆಂಟ್ಸ್
ಎಫ್-೨ ಕಿರ್ಲೋಸ್ಕರ್ ಕಾಲೊನಿ, ಮೊದಲನೇ ಅಡ್ಡರಸ್ತೆ
ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

ನೇಣ ಹಾಕ್ಕೊಳ್ಳಾಕ ಹೋಗಿದ್ದೆ. ಆವಾಗೆಲ್ಲಾ ನೀನSS ಬಂದ ನಿಂತಂಗಾಗಿ, ಛೇ! ಯಾರ ತಿರಸ್ಕರಿಸಿದ್ರೂ ನನ್ನ ದೋಸ್ತ ನನ್ನ ಕೈ ಬಿಡೂದಿಲ್ಲ ಅಂವಾ ನನ್ನನ್ನ ಅರ್ಥಾ ಮಾಡ್ಕೋತಾನ ಅಂದುಕೊಂಡ ವಾಪಸ್ ಬಂದಿದ್ದೆ. ಊರSS ನನ್ನನ್ನ ಕೆಟ್ಟವ ಅಂದ್ರೂ ನನಗ ಅಂಥಾ ಬೇಜಾರೇನೂ ಆಗಿರಲಿಲ್ಲ. ಈಗ ನೀನೂ ಹೀಂಗSS...'' ಒತ್ತರಿಸಿ ಬಂದ ದುಃಖ ಅವನ ಮಾತನ್ನು ಪೂರ್ಣಗೊಳಿಸಲು ಬಿಡಲಿಲ್ಲ. ಮೊದಲೇ ಅಪರಾಧಿ ಮನೋಭಾವದ ಬೆಂಕಿಯಲ್ಲಿ ಬೇಯುತ್ತಿದ್ದ ನಾನು ಈ ಮಾತುಗಳನ್ನು ಕೇಳಿ ಅಕ್ಷರಶಃ ಕುಸಿದುಹೋದೆ.

ನಾವು ಎಂಥಾ ಗೆಳೆಯರು!! ಎಂದೂ ಒಬ್ಬರನ್ನೊಬ್ಬರು ಬಿಟ್ಟುಕೊಟ್ಟವರಲ್ಲ. ನಮ್ಮೂರಿನಲ್ಲೇ ೫೦ಕ್ಕೂ ಹೆಚ್ಚು ವಯಸ್ಸಾದ ಕೆಲವು ಗಂಡಸರು ಹೆಂಗಸರು ಹೊಂದಿದ್ದ ಅನೈತಿಕ ಸಂಬಂಧಗಳನ್ನು ನಾವೇ ಕಣ್ಣಾರೆ ನೋಡಿದ್ದೆವು, ಕಿವಿಯಾರೆ ಕೇಳಿ ನಕ್ಕಿದ್ದೆವು. ಅವುಗಳ ಮುಂದೆ ಹದಿಹರೆಯದ ಹುಡುಗ ಮಹೇಶ ಮಾಡಿದ ಈ ದುಡುಕು ಅಷ್ಟು ದೊಡ್ಡದೇ, ಎಂದು ಮನಸ್ಸು ಲೆಕ್ಕ ಹಾಕತೊಡಗಿತು. ಆಮೇಲೂ ನನಗೆ ಏನು ಹೇಳಬೇಕೆಂದು ತೋಚಲಿಲ್ಲ. ನನ್ನ ದೃಷ್ಟಿಯಲ್ಲಿ ನಾನೇ ತುಂಬಾ ಚಿಕ್ಕವನಾದಂತೆನಿಸತೊಡಗಿತು. ನಂತರ ನಮ್ಮಿಬ್ಬರಲ್ಲಿ ಯಾರೂ ಮಾತಾಡಲಿಲ್ಲ. ಮತ್ತೆ ಆ ಹಾದಿ ನಮ್ಮನ್ನು ಹಿಂತಿರುಗಿಸಿ ಹಾಗೇ ಕಳಿಸಿತು. ಅದಕ್ಕೂ ತುಂಬಾ ಬೇಸರವಾದಂತೆನಿಸುತ್ತಿತ್ತು. ನನಗೆ ಆ ಇಡೀ ರಾತ್ರಿ ನಿದ್ದೆ ಬರಲಿಲ್ಲ. ಛೇ! ನಾನಿಷ್ಟು ನಿಷ್ಠುರವಾಗಿ ಮಾತಾಡಬಾರದಿತ್ತು. ಮೊದಲೇ ತುಂಬಾ ನೊಂದುಕೊಂಡಿದ್ದಾನೆ. ನಾನಾದರೂ ಎರಡು ಸಮಾಧಾನದ ಮಾತಾಡಿದ್ದರೆ!! ಈಗ ಅವನಿಗೆ ತುಂಬಾ ನಿರಾಶೆಯಾಗಿದೆ. ಈಗ ಇದೇ ನಿರಾಶೆಯಲ್ಲಿ ಆತ ಆತ್ಮಹತ್ಯೆಯನ್ನೇನಾದರೂ ಮಾಡಿಕೊಂಡರೆ!! ಈ ವಿಚಾರ ಬರುತ್ತಲೇ ತಪತಪನೇ ಬೆವೆತುಹೋದೆ. ದೇವರೇ ಈ ಒಂದು ರಾತ್ರಿ ಅವನಿಗೆ ಏನೂ ಆಗದೇ ಇರಲಿಲಪ್ಪ. ನಾಳೆ ಬೆಳಗಾದರೆ ಸಾಕು. ನಾನವನನ್ನು ಸಮಾಧಾನ ಮಾಡುತ್ತೇನೆ ಎಂದು ಹಲವು ದೇವರುಗಳಿಗೆ ಮನದಲ್ಲೇ ಬೇಡಿಕೊಂಡೆ. ರಾತ್ರಿಯಿಡೀ ಕುಳಿತು ಅವನಿಗೆ ಹೇಳಬೇಕೆನಿಸಿದ ಮಾತುಗಳನ್ನು ಬರೆದೆ. ಮುಖತಃ ಹೇಳುವ ಧೈರ್ಯ ನನಗಿರಲಿಲ್ಲ. ಬೆಳಿಗ್ಗೆ ಅವನು ಹೊಲಕ್ಕೆ ಹೋಗುವ ದಾರಿಯಲ್ಲಿ ಕಾಯುತ್ತ ಕುಳಿತೆ. ಹೆಗಲ ಮೇಲೆ ಬಾರುಕೋಲು ಹಾಕಿಕೊಂಡು ಎರಡು ಎತ್ತುಗಳನ್ನು ಹೊಡೆದುಕೊಂಡು ಆತ ಬಂದ. ಇತ್ತೀಚೆಗೆ ಎತ್ತುಗಳೊಂದಿಗೆ ಮಾತ್ರವೇ ಆತ ಇರುತ್ತಿದ್ದ. ನನ್ನನ್ನು ನೋಡಿ ನಕ್ಕ. ನಾನೂ ನಕ್ಕೆ. ನಾನು ಬರೆದು ತಂದದ್ದನ್ನು ಅವನಿಗೆ ಕೊಟ್ಟೆ. ಅವನದನ್ನು ನಿರೀಕ್ಷಿಸಿದಂತೆಯೇ ಇಸಿದುಕೊಂಡ.

ಅಂದು ಸಾಯಂಕಾಲ ಬೇಗ ಮನೆಗೆ ಬಂದ. ಇನ್ನು ಯಾರಿಗೂ ಹೆದರಬಾರದೆಂದು ಆತ ನಿರ್ಧರಿಸಿದಂತಿತ್ತು, ನಾನೂ ನಿರ್ಧರಿಸಿದ್ದೆ. ಅಂದು ರಾಜಾರೋಷವಾಗಿ ಮತ್ತೆ ವಾಕಿಂಗ್ ಹೊರಟೆವು. ನಮ್ಮ ಹಿಂದೆಯೇ ಜನರ ಗುಸುಗುಸು ಶುರುವಾಯಿತು, ನಾವು ಕೇರ್ ಮಾಡಲಿಲ್ಲ, ಮಾತಾಡಿದೆವು, ನಕ್ಕೆವು ಮನತುಂಬಿ. ''ನಿನ್ನಿಂದ ತಪ್ಪಾಗಿದೆ. ಆದರೆ ಅನ್ಯಾಯವಾಗಿಲ್ಲವಲ್ಲ'', ಎಂಬರ್ಥದ ಮಾತುಗಳನ್ನು ಹೇಳಿದೆ. ಅವನಿಗದರಿಂದ ಸಮಾಧಾನವಾಯಿತು. ಎರಡು ಮೂರು ದಿನ ಜೀವನ,



ಅದರಲ್ಲಿನ ಎಡರುಗಳು, ಅವುಗಳನ್ನೆದುರಿಸುವ ರೀತಿ, ಮುಂತಾದುವುಗಳ ಕುರಿತು ತುಂಬಾ ದೊಡ್ಡ ತತ್ವಜ್ಞಾನಿಗಳಂತೆ ಮಾತನಾಡಿದೆವು. ಎಲ್ಲವೂ ನಮಗೆ ನಾವೇ ಸಮಾಧಾನ ಹೇಳಿಕೊಂಡಂತಿದ್ದವು. ನಾನವನಿಗೆ ಸ್ವಾಮಿ ವಿವೇಕಾನಂದರ, ಜಗದಾತ್ಮಾನಂದರ ಪುಸ್ತಕಗಳನ್ನು ತಂದುಕೊಟ್ಟೆ, ಒಳ್ಳೊಳ್ಳೆಯ ಕಾದಂಬರಿಗಳನ್ನು ತಂದುಕೊಟ್ಟೆ. ಸುಮ್ಮನೇ ಓದು ಎಂದೆ. ಆತ ಓದುತ್ತ ಹೋದ. ಓದುತ್ತ ಓದುತ್ತ ಅವನೊಳಗೆ ಒಂದು ರೀತಿಯ ಹಸಿವು ಉಂಟಾಗತೊಡಗಿತ್ತು. ಬರುಬರುತ್ತ ಅವನ ಒಳಗು ಹೊರಗುಗಳಲ್ಲಿ ಬದಲಾವಣೆ ಕಾಣಗೊಡಗಿತು. ಮೂಡಲಗಿಗೆ ಬಂದ. ಜೊತೆಯಲ್ಲಿ 'ಬಂಗಾರದ ಮನುಷ್ಯ,', 'ಕಾಮನಬಿಲ್ಲು' ಸಿನೆಮಾ ನೋಡಿದೆವು.

ನಾನಿನ್ನೂ ಓದುತ್ತಿರುವಾಗಲೇ ಆತನ ಮದುವೆಯೇ ಆಗಿಯೋಯ್ತು. ಹುಡುಗಾಟದ ದುಡುಕು ಅವನ ಜೀವನದ ಗತಿಯನ್ನೇ ಬದಲಿಸಿಬಿಟ್ಟಿತ್ತು. ಆದರೆ ಬಂದುದನ್ನು ಆಪ್ತವಾಗಿ ಸ್ವೀಕರಿಸುವ ಪಕ್ವತೆಯನ್ನು ಆತ ಬಹುಬೇಗ ಪಡೆದುಕೊಂಡುಬಿಟ್ಟಿದ್ದ. ಈ ಹುಡುಗ ಅದೇ ಹಟಮಾರಿ ಮಹೇಶನೇ ಹೌದೇ, ಎಂದು ಪ್ರಶ್ನಾರ್ಥಕವಾಗಿ ನೋಡುವಂತಾಗಿತ್ತು ''ಯಾರನ್ನಾದರೂ ಕೊಂದು ಬಿಡುತ್ತೇನೆ'' ಎಂದು ಸೀಸಿನ ಗುಂಡು ಕಟ್ಟಿಕೊಂಡು ಓಡಾಡುತ್ತಿದ್ದ ಆ ಹುಡುಗ ಈತನೇ ಏನು ಎಂದು ಆಶ್ಚರ್ಯಪಡುವಂತಿತ್ತು ಆತನಲ್ಲಾದ ಬದಲಾವಣೆ. ಪಂಡರಾಪುರಕ್ಕೆ ಹೋಗಿ ಮಾಲೆ ಹಾಕಿಸಿಕೊಂಡು ಬಂದ. ಬರುಬರುತ್ತ ಗೌತಮಬುದ್ಧನಂತಾದ. ನನಗೆ ಒಳಗೊಳಗೇ ಏನೋ ಒಂದು ರೀತಿಯ ಹೆಮ್ಮೆ. ಯಾವುದೋ ದೊಡ್ಡ ಅನಾಹುತವೊಂದನ್ನು ತಪ್ಪಿಸಿದ ಸಾರ್ಥಕ ಭಾವ! ಈಗವನಿಗೆ ನಾಲ್ಕು ಜನ ಮಕ್ಕಳು. ಹೊಲ ತೋಟ ಗದ್ದೆ ಬೇಕಾದಷ್ಟಿದೆ. ಊರಿಗೆ ಆತನೇ ಹಿರಿಯನಂತೆ!! ಊರಿನ ಸಣ್ಣ ಪುಟ್ಟ ವ್ಯಾಜ್ಯಗಳನ್ನು ಆತನೇ ಬಗೆಹರಿಸುತ್ತಾನಂತೆ. ತುಂಬಾ ಹೆಮ್ಮೆಯೆನಿಸಿತು.

* * *

ಎತ್ತಿನ ಗಾಡಿ ದಡಕ್ಕು ದುಡುಕ್ಕು ಎಂದು ಓಲಾಡುತ್ತ ಸಾಗುತ್ತ ಅದೇ ನಮ್ಮ ಆ ಚಳಮಾರ ಹಾದಿಯನ್ನು ತಲುಪಿಬಿಟ್ಟಿತ್ತು, ಓಹ್! ಅದೆಂತಹ ಪುಳಕ!! ಬಂಡಿ ಆ ಹಾದಿಯಲ್ಲಿ ನಡೆಯುವಾಗ ಎಲ್ಲವೂ ಅದಲು ಬದಲಾದಂತೆ ಕಾಣುತ್ತಿದ್ದರೂ ನಮ್ಮ ವಾಕಿಂಗಿನ ನೆನಪುಗಳು ಮಾತ್ರ ಚಿರನೂತನವೆನ್ನುವಂತೆ ಢಾಳಾಗಿ ನನ್ನನ್ನು ತಟ್ಟುತ್ತಿದ್ದವು. ಬಸು ಪತ್ರದಲ್ಲಿ ಬರೆದಿದ್ದ, ''ನಾವೀಗ ಊರಲಿಲ್ಲ. ಊರಲ್ಲಿನ ಹಳೆ ಮನೆ ಬಿದ್ದು ಹೋಗಿದೆ. ಈಗ ಊರಿನಿಂದ ಒಂದು ಕಿ.ಮೀ. ದೂರ ಅದೇ ನಮ್ಮ ಚೆಳಮಾರ ಹಾದಿಯ ಪಕ್ಕದಲ್ಲೇ ಮನೆ ಕಟ್ಟಿಸಿ ಅಲ್ಲೇ ವಾಸವಾಗಿದ್ದೇವೆ. ನೀನು ಮೊದಲು ಇಲ್ಲಿಗೇ ಬಾ. ಆಮೇಲೆ ನಿಮ್ಮ ಮನೆಗೆ ಬಿಡುತ್ತೇವೆ. ಊಟ ಮಾತ್ರ ಇಲ್ಲೇ ಮಾಡಬೇಕು'' ಎಂದು.

ಒಂದು ಸುಂದರವಾದ ಮಾವಿನ ತೋಪಿನಂತಹ ಜಾಗಕ್ಕೆ ಬಂದು ಬಂಡಿ ನಿಂತಿತು. ಆನಂದ ಹೋ,, ಹೋ... ಎಂದು ಎತ್ತುಗಳನ್ನು ನಿಲ್ಲಿಸಿದ. ಬಂಡಿಯಿಂದ ಕಷ್ಟಪಟ್ಟು ಇಳಿದೆ. ''ಏ ನಾಗ್ಯಾ, ಕುರ್ಚೀ ತೊಗೊಂಡ ಬಾರೋ'', ಎಂದು ಕೂಗುತ್ತ ಶುಭ್ರವಾದ ಬಿಳಿ ನೆಹರು ಶರ್ಟು ಮತ್ತು ಬಿಳಿ ಮಸರಾಯಿ ಧೋತ್ರಾ ಉಟ್ಟ ವ್ಯಕ್ತಿ ಓಡಿದಂತೆಯೇ ನಡೆದುಕೊಂಡು ಬರುತ್ತಿರುವುದು ಕಾಣಿಸಿತು. ಕೂದಲೂ ಬೆಳ್ಳಗಾಗಿದ್ದವು. ಓಹ್ ನನ್ನ ಜೀವದ ಗೆಳೆಯ!! ಹೇಗಾಗಿದ್ದಾನೆ!! ಅವನ ಕಣ್ಣ ತುಂಬ ಅಕ್ಕರೆ ತುಂಬಿತ್ತು, ನನ್ನ ಕಣ್ಣುಗಳೂ ತೊಟ್ಟಿಕ್ಕುತ್ತಿದ್ದವು.

ಮಾರುತಿ ದಾಸಣ್ಣವರ
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ, ಗಾಳಿಬೀಡು, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ - ೫೭೧ ೨೦೧

ವರ್ಲ್ಡ್ ನೋ ಟೊಬಾಕೋ ಡೇ.. ಅರ್ಥಾತ್ ವಿಶ್ವ ತಂಬಾಕು ರಹಿತ ದಿನಾಚರಣೆ. ಈ ಬಗ್ಗೆ ಬರೆಯಬೇಕು ಎಂದಾಗ, ವೈದ್ಯಕೀಯ ಶಾಸ್ತ್ರದಲಿ ಕ್ಯಾನ್ಸರ್ ಬಗ್ಗೆ ಅಭ್ಯಾಸ ಮಾಡಿರುವ ನನಗೆ ಎದುರಾದ ಪ್ರಶ್ನೆಗಳು ಅನೇಕ. ಶ್ವಾಸ ಕೋಶ, ತಲೆ ಮತ್ತು ಕುತ್ತಿಗೆ ಕ್ಯಾನ್ಸರ್‌ನಿಂದ ಬಳಲುತ್ತಿರುವ ಅನೇಕ ರೋಗಿಗಳನ್ನು ದಿನ ನಿತ್ಯದ ಬದುಕಿನಲ್ಲಿ ನೋಡ್ತಾ ಇರುತ್ತೇನೆ. ಇವರೆಲ್ಲಾ ಈ ರೀತಿ ಬಳಲುತ್ತಿರುವುದಕ್ಕೆ ಅಧಿಕ ತಂಬಾಕು ಸೇವನೆಯೇ ಕಾರಣ. ಏನೇ ಹೇಳಿ, ಜೀವಕ್ಕೆ ಅಪಾಯ ತರುವ ರೋಗಗಳು, ಕಡಿಮೆಯಾದ ಜೀವಿತಾವಧಿ, ಕೆಟ್ಟ ಆರೋಗ್ಯ ಮೊದಲಾದವುಗಳು ತಂಬಾಕು ಸೇವನೆಯ ಕೆಟ್ಟ ಪರಿಣಾಮಗಳು. ಇವೆಲ್ಲ ವಿಷಯಗಳ ಬಗ್ಗೆ ಜಾಗೃತಿ ಮೂಡಿಸುವ ಕೆಲಸ ನಡೆಯುತ್ತಲೇ ಇದೆ. ಹೀಗಾಗಿ ಪ್ರತಿಯೊಬ್ಬ ತಂಬಾಕು ಸೇವಿಸುವ ವ್ಯಕ್ತಿಗೂ ಈ ವಿಷಯಗಳ ಅರಿವು ಇದೆ. ಆದರೆ, ತಂಬಾಕು ಸೇವನೆ ನಿಲ್ಲಿಸಿದ್ದಾರೆಯೇ? "ಸಿಗರೇಟು ಸೇವನೆ ಆರೋಗ್ಯಕ್ಕೆ ಹಾನಿಕರ" ಎಂಬ ಎಚ್ಚರಿಕೆ ಸಂದೇಶ ಪ್ರತಿಯೊಂದು ಸಿಗರೇಟ್ ಪ್ಯಾಕ್ ಮೇಲೆ ಇದೆ. ಆದರೆ, ಧೂಮಪಾನಿಗಳು ಸಿಗರೇಟು ಖರೀದಿ ನಿಲ್ಲಿಸಿದ್ದಾರೆಯೇ? ಸರಕಾರ ತಂಬಾಕು ಉತ್ಪನ್ನಗಳ ಮೇಲೆ ವರ್ಷದಿಂದ ವರ್ಷಕ್ಕೆ ವಿಧಿಸುವ ತೆರಿಗೆ ಪ್ರಮಾಣ ಹೆಚ್ಚುತ್ತಲೇ ಇದೆ. ಆದರೆ, ಇದು ತಂಬಾಕು ಉತ್ಪನ್ನಗಳ ಖರೀದಿ ಮೇಲೆ ಪರಿಣಾಮ ಬೀರಿದೆಯೇ? ಇಷ್ಟೆಲ್ಲಾ ನನ್ನ ಕಣ್ಣ ಮುಂದೆ ಇದ್ದರೂ, ಈ ಲೇಖನ ಯಾವ ಮಟ್ಟಿಗೆ ಧೂಮಪಾನಿಗಳ ಮೇಲೆ ಪರಿಣಾಮ ಬೀರಬಹುದು ಎಂದು ನನಗೂ ಗೊತ್ತಿಲ್ಲ. ಅನೇಕ ಕಚೇರಿಗಳಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ ಧೂಮಪಾನ ನಿಷೇಧಿಸಿದ್ದರೂ, ಭಾರತ ಮಾತ್ರ ಧೂಮಪಾನ ವ್ಯಸನಿಗಳಿಂದ ಮುಕ್ತವಾಗಿಲ್ಲ. 2010ರ ಒಂದು ಸಮೀಕ್ಷೆ ಪ್ರಕಾರ, ಭಾರತದಲ್ಲಿ ವಾರ್ಷಿಕ 9.3 ಲಕ್ಷ ಜನರ ಸಾವು ಧೂಮಪಾನದಿಂದಲೇ ಆಗುತ್ತಿದೆ. ಹೀಗೆ ಸಾಯುವವರಲ್ಲಿ 30ರಿಂದ 69 ವರ್ಷ ವಯಸ್ಸಿನವರ ಸಂಖ್ಯೆ ಶೇಕಡಾ 70ರಷ್ಟಿದೆ. ಭಾರತದಲ್ಲಿ ಉಂಟಾಗುವ ಸಾವಿನ ಶೇಕಡಾ 10ರಷ್ಟು ಧೂಮಪಾನದಿಂದಲೇ ಆಗುತ್ತಿದೆ. ಧೂಮಪಾನ ಅಷ್ಟು ಅಪಾಯಕಾರಿ. ಧೂಮಪಾನಿಯೊಬ್ಬನ ಜೀವಿತಾವಧಿ, ಸಾಮಾನ್ಯ ಪುರುಷನ ಜೀವಿತಾವಧಿಗಿಂತ ಹತ್ತು ವರ್ಷ ಕಡಿಮೆಯಾಗಿರುತ್ತದೆ. ಇನ್ನೊಂದು ಆಘಾತಕಾರಿ ಅಂಶ ಎಂದರೆ, ಜಗತ್ತಿನ ಧೂಮಪಾನಿಗಳ ಸಂಖ್ಯೆಯ ಶೇಕಡಾ ಹತ್ತರಷ್ಟು ಜನ ಭಾರತದಲ್ಲಿದ್ದಾರೆ. ಇವೆಲ್ಲಾ ಅಂಕಿ ಅಂಶಗಳ ಕುರಿತ ವಿಚಾರ. ಮತ್ತೆ ವಿಷಯಕ್ಕೆ ಬರುವುದಾದರೆ, ಯಾರು ಏನೇ ಹೇಳಿದ್ರೂ, ಧೂಮಪಾನಿಗಳ ತಂಬಾಕು ಸೇವನೆಯಿಂದ ಸಾಕಷ್ಟು ಲಾಭವಿದೆ. ಅದ್ಯಾವುದು ಕೂಡಾ ಸಂಕುಚಿತ ಮನೋಭಾವ ಹೊಂದಿರುವ ನಮ್ಮಂತಹ ಜನರ ಕಣ್ಣಿಗೆ ಕಾಣಿಸೋದೇ ಇಲ್ಲ. ಒಂದೊಂದಾಗಿ ಅದನ್ನು ವಿವರಿಸ್ತೇನೆ.

**ಧೂಮಪಾನಿಗಳ ಸಮಾಜ ಸೇವೆ..**

1. ಧೂಮಪಾನಿಗಳಾಗಿ, ಇತರರು ಹಣ ಗಳಿಸೋದಕ್ಕೆ ಸಹಾಯ ಮಾಡ್ತಾ ಬಹುದೊಡ್ಡ ಸಮಾಜಸೇವೆಯನ್ನೇ ಮಾಡುತ್ತಿದ್ದೀರಿ. ತಂಬಾಕು ಕಂಪೆನಿಗಳು ಅಧಿಕ ಲಾಭ ಗಳಿಸುತ್ತಿವೆ. ಸರಕಾರ ಕೂಡಾ ತೆರಿಗೆ ಮೂಲಕ ಆದಾಯ ಗಳಿಸುತ್ತಿದೆ. ಆಸ್ಪತ್ರೆ ಮತ್ತು ವೈದ್ಯರಿಗೂ ಆದಾಯಕ್ಕೆ ಹೊಸ ದಾರಿ ಮಾಡಿಕೊಡ್ತಾ ಇದ್ದೀರಿ.
2. ನೀವು ಚೈನ್ ಸ್ಮೋಕರ್ ಆಗಿದ್ದರಂತೂ ಕೇಳೋದೇ

ಜಾಹೀರಾತು

ಬೇಡ.. ನಿಮಗೆ ವಯಸ್ಸಾಗೋದೆ ಇಲ್ಲ ಬಿಡಿ... ಅದಕ್ಕೂ ಮೊದಲೇ ಜೀವ ಹೊರಟು ಹೋಗಿರುತ್ತದೆ.

3. ತಂಬಾಕು ಸೇವನೆ ಮೂಲಕ ಜನಸಂಖ್ಯೆ ನಿಯಂತ್ರಣಕ್ಕೆ ಕೊಡುಗೆ ಕೊಡ್ತಾ ಇದ್ದೀರಿ.. ಅಂದರೆ ನೀವು ನಪುಂಸಕರಾಗುತ್ತಿದ್ದೀರಿ..
4. ಸಿಕ್ ಲೀವ್ ಹಾಕಬೇಕು ಅಥವಾ ಬೇಗ ಕೆಲಸದಿಂದ ನಿವೃತ್ತಿ ಪಡೆಯಬೇಕು ಅನ್ನೋ ಇರಾದೆ ಇದ್ದರೆ ತಂಬಾಕು ಸೇವನೆಯೇ ಉತ್ತಮ ದಾರಿ.
5. ಮನೆಯಲ್ಲಿ ಆಗಾಗ ಬೆಂಕಿ ಆಕಸ್ಮಿಕ ಆಗಬೇಕು, ಅಗ್ನಿ ಶಾಮಕ ಸೇವೆಯವರಿಗೆ ಕೆಲಸ ಒದಗಿಸಬೇಕು ಅನ್ನೋ ಇಚ್ಛೆ ಇದ್ದರೆ ಸಿಗರೇಟು, ಬೀಡಿ ಸೇದುವುದು ಒಳ್ಳೆಯದು.
6. ಕಾರ್ನರ್ ಅಂಗಡಿಯಿಂದ ಸಿಗರೇಟ್ ಖರೀದಿಸುವುದು ಅಂದರೆ ಸ್ಥಳೀಯ ವ್ಯಾಪಾರಕ್ಕೆ ಸಹಕಾರ ಕೊಟ್ಟಂತೆ.
7. ಪ್ರತಿ ಮೂರು ವರ್ಷಕ್ಕೊಂದು ಸಲ ಮನೆಯ ಸೀಲಿಂಗ್‌ಗೆ ಸುಣ್ಣ ಬಣ್ಣ ಬಳಿಯೋದಕ್ಕೆ ಒಂದು ಒಳ್ಳೆಯ ಕಾರಣ ಕೊಡಬಹುದು.
8. ವರ್ಷದ 364 ದಿನ ಕೂಡಾ ತಂಬಾಕು ಸೇವನೆಗೆ ಆದ್ಯತೆ ನೀಡುತ್ತಿರುವಾಗ, ಒಂದು ದಿನ ಮಾತ್ರ ನೋ ಟೋಬಾಕೋ ಅನ್ನೋ ಅಗತ್ಯ ಇದೆಯಾ?
9. ಧೂಮಪಾನಿಯಾಗಿ ಎಲ್ಲರಕ್ಕಿಂತ ಹೆಚ್ಚು ತೆರಿಗೆ ಪಾವತಿಸುತ್ತಿರುವುದರಿಂದ, ಹೆಚ್ಚಿನ ಸೇವೆ ಮತ್ತು ಅನುಕೂಲಕ್ಕಾಗಿ ಸರಕಾರಕ್ಕೆ ಬೇಡಿಕೆ ಸಲ್ಲಿಸಬಹುದು.
10. ಉಗುರು ಮತ್ತು ಹಲ್ಲಿನ ಬಣ್ಣದ ಬಗ್ಗೆ ವ್ಯಾಕುಲತೆ ಇದ್ದರೆ, ಸಿಗರೇಟ್ ಸೇವನೆಯಿಂದ ಆ ಬಿಳಿ ಬಣ್ಣ ಹಳದಿ ಅಥವಾ ಕಂದು ಬಣ್ಣಕ್ಕೆ ತಿರುಗುವುದು ಗ್ಯಾರೆಂಟಿ.
11. ನೀವು ಹೊಗೆ ಉಗುಳುವವರಾಗಿರದೇ ನುಂಗುವವರಾಗಿದ್ದರೆ, ನಿಮ್ಮ ಕೆಟ್ಟ ಉಸಿರು ಹೊಸ ಸ್ನೇಹಿತರು ಹತ್ತಿರ ಸುಳಿಯದಂತೆ ಮಾಡುತ್ತದೆ.
12. ದೇಶಕ್ಕೆ ಹೆಚ್ಚಿನ ಆದಾಯ ಒದಗಿಸುವುದೇ ಸಿಗರೇಟ್ ಮೇಲಿನ ತೆರಿಗೆಯಿಂದ ಬರುವಂತಹ ಆದಾಯ. (ಸಿಗರೇಟ್ ಮೇಲೆ ಅತಿಹೆಚ್ಚಿನ ತೆರಿಗೆ ವಿಧಿಸಲಾಗುತ್ತಿದೆ)
13. ಸಮಯದ ಸದ್ಬಳಕೆ ಬಗ್ಗೆ ಹೇಳುವುದಾದರೆ, ದಿನವೊಂದಕ್ಕೆ 12 ಸಿಗರೇಟ್ ಸೇದಿದ್ರೆ, ಒಂದು ಸಿಗರೇಟ್ ಸೇದೋದಕ್ಕೆ 10 ನಿಮಿಷ ಅಂದರೂ, ದಿನದ 2 ಗಂಟೆಯನ್ನು ಪರಿಣಾಮಕಾರಿಯಾಗಿ ಬಳಕೆ ಮಾಡಿಕೊಂಡಂತೆ.
14. ಹೂಡಿಕೆ ಏಜೆಂಟ್‌ಗಳ ಕಾಟದಿಂದ ತಲೆ ಚಿಟ್ಟುಹಿಡಿದು ಹೋಗಿದೆಯೇ? ನಿಮ್ಮ ಬಳಿ ಇರುವ ಹಣ ಹೇಗೆ ಹೂಡಿಕೆ ಮಾಡಬೇಕು ಅನ್ನೋದು ಗೊತ್ತಿಲ್ವಾ.. ಸಿಗರೇಟ್ ಹಚ್ಚಿಕೊಳ್ಳಿ.
15. ನೀವು ವಾಸ್ತವ್ಯ ಇರೋ ಪ್ರದೇಶದಲ್ಲಿ ದರೋಡೆ, ಕಳ್ಳಕಾಕರರ ಭಯ ಇದೆಯೇ... ಧೂಮಪಾನದಿಂದ ಉಂಟಾಗಿರೋ ನಿಮ್ಮ ಕೆಮ್ಮಿಗೆ ಕಳ್ಳಕಾಕರರೇನು.. ದರೋಡೆಕೋರರು ಕೂಡಾ ಭಯ ಬೀಳೋದು ಗ್ಯಾರೆಂಟಿ.
16. ಕೊನೆಯಲ್ಲೊಂದು ವಿಚಾರ.. ಬೊಜ್ಜಿನ ಭಯವೇ ಬೇಡ.. ಸ್ಲಿಮ್ ಆಗಿ ಇರಬೇಕು ಅಂದ್ರೆ ಧೂಮಪಾನ ವೊಂದೇ ದಾರಿ.. ಹಾಗಂತ ನನ್ನ ಗೆಳತಿಯೊಬ್ಬಳು ಧೂಮಪಾನ ಮಾಡಿ, ಶ್ವಾಸಕೋಶದ ಕ್ಯಾನ್ಸರ್‌ನಿಂದಾಗಿ ಕೊನೆ ಉಸಿರು ಎಳೆದಳು. ಯಾರಾದ್ರೂ ಬೆಟ್ ಕಟ್ಟುವಷ್ಟು... ತೆಳ್ಳಗಿದ್ದಳು ಆಕೆ...!

ಯಾರಾದ್ರೂ ಬೆಟ್ ಕಟ್ಟುವಷ್ಟು... ತೆಳ್ಳಗಿದ್ದಳು ಆಕೆ...! ಇಷ್ಟೆಲ್ಲಾ ಯಾಕೆ ಹೇಳಿದೆ ಅಂದ್ರೆ ಸಿಂಪಲ್... ಪ್ರೀತಿಯ ತಂಬಾಕು ಪ್ರಿಯರಿಗೆ ಈ ಸಂದೇಶವನ್ನು ಪರಿಣಾಮಕಾರಿಯಾಗಿ ರವಾನಿಸಬೇಕಿತ್ತು ಅಷ್ಟೆ. ತಂಬಾಕು ಸೇವನೆ ಬೇಡ ಅಂದ್ರೆ ಅಥವಾ ಅದರ ಕೆಡುಕಗಳ ಬಗ್ಗೆ ಹೇಳಿದ್ರೆ ಅದು ಪರಿಣಾಮಕಾರಿಯಾಗಬಹುದು ಎಂಬ ನಿರೀಕ್ಷೆ ನನಗೆ ಇಲ್ಲ. ಪ್ರತಿಯೊಬ್ಬ ವ್ಯಕ್ತಿಗೂ ತನ್ನ ಜೀವನದ ಬಗ್ಗೆ, ಆರೋಗ್ಯದ ಬಗ್ಗೆ ಕಾಳಜಿ ತೆಗೆದುಕೊಳ್ಳುವ ಹಕ್ಕು ಇದ್ದೇ ಇದೆ. ಎಲ್ಲವೂ ಅವರವರ ನಿರ್ಧಾರಕ್ಕೆ ಬಿಟ್ಟಿದ್ದು. ಸಮಾಜದಲ್ಲಿ ತಾನು ಹೇಗಿರಬೇಕು.. ಬದುಕಿದ್ದಷ್ಟೂ ದಿನ ಆರೋಗ್ಯ ಹೇಗಿರಬೇಕು? ಆರೋಗ್ಯವಂತರಾಗಿ ಕ್ರಿಯಾಶೀಲರಾಗಿರಬೇಕೇ ಅಥವಾ ಔಷಧಕ್ಕಾಗಿ ಹಣ ಖರ್ಚು ಮಾಡುತ್ತಾ ಕೆಟ್ಟದಾಗಿ ಕಾಣುತ್ತಾ ಇರಬೇಕೆ ಅನ್ನೋದು ವ್ಯಕ್ತಿ ಸ್ವಾತಂತ್ರ್ಯಕ್ಕೆ ಬಿಟ್ಟ ವಿಚಾರ. ನನ್ನ ಒಂದೇ ಒಂದು ಸಲಹೆ ಏನು ಅಂದ್ರೆ, ನಿಮಗೇನಾದ್ರೂ ತಂಬಾಕು ಸೇವನೆ ನಿಲ್ಲಿಸಬೇಕು ಅಂತ ಅನಿಸಿದ್ರೆ, ಯಾವ ದಿನದಿಂದ ನಿಲ್ಲಿಸಬೇಕು ಅನ್ನೋದನ್ನು ನಿರ್ಧರಿಸಿ, ಒಂದೇ ಸಲ ಅನುಷ್ಠಾನಗೊಳಿಸಿ. ನಿಧಾನವಾಗಿ ತಂಬಾಕು ಸೇವನೆ ಬಿಡುತ್ತೇನೆ ಅಂದರೆ, ಅದು ಆಗುವ ಹೋಗುವ ಮಾತಲ್ಲ ಬಿಡಿ... ಏನಾದರಾಗಲಿ.. ಆರೋಗ್ಯವಂತ ಜೀವನ ನಡೆಸಿ ಅನ್ನೋದಷ್ಟೇ ನನ್ನ ಹಾರೈಕೆ..!!



ತಿನ್ನೋಕಾಗ್ತದಾ ? ಇಲ್ಲವಲ್ಲ, ಹಾಗೆಯೇ ಅಂಗೈನ ಐದು ಬೆರಳುಗಳನ್ನು ಯಾರೂ ಮುಟ್ಟಲೂ ಹೋಗೋಲ್ಲ, ಮುಟ್ಟಿದರೆ ಅದು ಮುಷ್ಟಿಯಾಗಿ ಮೂಗಿನ ನೇರಕ್ಕೆ ಹೊಡೆಯಲೂಬಹುದಲ್ಲಾ? ಆದ್ದರಿಂದಲೇ ಆ ಎರಡಕ್ಕೂ ಏನೂ ಹೆದರಿಕೆಯಿಲ್ಲ. ಆದರೆ ಈ ಕಮಲ ಕೋಮಲ ಹೂವಲ್ಲವೇ ? ಅದನ್ನೊಂದು ಕ್ಷಣದಲ್ಲಿ ಕಿತ್ತೊಗೆಯ ಬಹುದಲ್ಲಾ ?''

''ಅದೆಲ್ಲಾ ಸರಿ ಸರ್. ಈ ಆಪರೇಶನ್ನು ಮಾಡಿದರೆ ಕಮಲಕ್ಕೆ ಏನೂ ಆಗೋಲ್ವಾ ?''

''ಆಗಲೂಬಹುದು. ಆಗದಿರಲೂಬಹುದು. ಅದಕ್ಕಾಗಿಯೇ ಆ ಕಮಲ ಬದುಕಿ ಬಾಳಲಿ ಎಂದು ಆ ಹೂವನ್ನು ಉಳಿಸಬಯಸುವವರು ಬಹಳ ಜಾಗ್ರತೆಯಿಂದ ಅದನ್ನು ನೋಡಿಕೊಂಡು ಬಂದಿದ್ದಾರೆ.''

''ಹೌದು ಸರ್. ಕಮಲದ ಆಪರೇಶನ್ನು ಆದಮೇಲೆ ಅದು ಇನ್ನೂ ನಾಲ್ಕಾರು ದಿನ ಬದುಕಿ ಬಾಳಲಿ ಎಂದು ಅದನ್ನು ನೋಡಿಕೊಳ್ಳುವವರು ಸ್ವಾಮಿಗಳ ದರುಶನ, ದೇವ, ದೇವಿಯರ ದರುಶನ ಹೊಳೆಗೆ ಬಾಗಿನ.... ಹೀಗೆಲ್ಲಾ ಹರಕೆ ಕೊಟ್ಟು ಹೋಗಿಬರ್ತಾನೇ ಇದ್ದಾರೆ. ಆದರೆ ಆ ಸ್ವಾಮಿಗಳು, ದೇವರುಗಳು ಕಮಲದ ಆಪರೇಶನನ್ನು ಚೆನ್ನಾಗಿ ಮಾಡಿ ಅದು ಉಳಿಯುವಂತೆ ಮಾಡ್ತಾರೋ ಅಥವಾ ಅರ್ಧದಲ್ಲೇ ಆಪರೇಶನ್ನು

# ಆಪರೇಶನ್ನು ಯಾರಿಗೆ ?

''ಸರ್, 'ಆಪರೇಶನ್ನು' ಎಂಬುದರ ನಿಜವಾದ ಅರ್ಥ ಏನು ಸರ್ ?''

''ಅಷ್ಟೂ ಗೊತ್ತಿಲ್ವೇ ಶಸ್ತ್ರ ಚಿಕಿತ್ಸೆ.''

''ಅಂದರೆ ಮೂಲವ್ಯಾಧಿ, ಕಿಡ್ನಿ, ಓಪನ್ ಹಾರ್ಟ್ ಸರ್ಜರಿ, ಥೈರಾಯ್ಡ್ ಆಪರೇಶನ್ನು – ಹೀಗೇ ಅಲ್ವಾ ?''

''ಹೌದು ಕೂಸಪ್ಪ.''

''ಹಾಗಾದರೆ ಈಗ ದಿನಾ ಪೇಪರಲ್ಲಿ, ಟಿ.ವಿ.ಯಲ್ಲಿ 'ಆಪರೇಷನ್ ಕಮಲ' ಎಂದು ಪದೇ ಪದೇ ಹೇಳ್ತಾರಲ್ಲ ಅಂದ್ರೆ ಕಮಲದ ಎಸಳುಗಳು, ದಳಗಳು, ಬೀಜ ಇವನ್ನೆಲ್ಲಾ ಶಸ್ತ್ರ ಚಿಕಿತ್ಸೆ ಮಾಡ್ತಾರಾ ?''

''ಹಾಗಲ್ಲ ಕೂಸಪ್ಪ. 'ಆಪರೇಶನ್ ಕಮಲ' ಅಂದ್ರೆ ಕಮಲ ಪಕ್ಷದ ಖಾಯಿಲೆಗಳನ್ನು ಶಸ್ತ್ರಕ್ರಿಯೆ ಮಾಡಿ ಸರಿಪಡಿಸುವುದು. ಅಂದರೆ ಅದು ಒಂದು ಪಾರ್ಟಿಯೊಳಗಿನ ಗಂಡಾಂತರಗಳ ಭೀತಿ ಎಂಬ ರೋಗವನ್ನು ಪರಿಹಾರ ಮಾಡೋದು.''

''ಹಾಗಾದರೆ ಅಂಗೈ ಚಿಹ್ನೆಯ ಕಾಂಗ್ರೆಸ್ಸು, ಹುಲ್ಲು ಮೂಟೆಯ ಹೆಣ್ಣಿನ ಜೆ.ಡಿ.ಎಸ್.ಗಳ ಆಪರೇಶನ್ನು ಕೂಡಾ ಇದೆಯಾ ?''

''ಇರಲೂ ಬಹುದು, ಇಲ್ಲದಿರಲೂ ಬಹುದು. ಖಾಯಿಲೆ ಮಾರಣಾಂತಿಕವೂ ಆಗಬಹುದು.''

''ಆದರೆ ಇಷ್ಟರವರೆಗೆ ಅಂಗೈಯ, ಐದು ಬೆರಳುಗಳ ಆಪರೇಶನ್ನು ವಿಚಾರವೇ ಪೇಪರಲ್ಲಿ ಬಂದಿಲ್ಲವಲ್ಲಾ? ಆ ರೀತಿಯ ಹುಲ್ಲು ಹೊತ್ತ ಹೆಣ್ಣಿಗೆ ಯಾವ ಆಪರೇಶನ್ನೂ ಆಗಿಲ್ಲ. ಕಮಲಕ್ಕೆ ಮಾತ್ರ ಮಾರಣಾಂತಿಕ ಖಾಯಿಲೆಯಾಗಿದೆಯೇ ಸರ್ ?''

''ಹೌದು, ಕೂಸಪ್ಪಾ. ಈಗ ಈ ಕಮಲ ಹೂವನ್ನು ಮೆಟ್ಟಿ ಹುಲ್ಲು ಹಿಡಿದ ಹೆಣ್ಣು ಮುಂದೆ ಸಾಗ್ತಾ ಇದ್ದಾಳೆ. ಆ ಅಂಗೈ ಇದೆಯಲ್ಲಾ ಅದು ಕಮಲದ ಎಸಳುಗಳನ್ನು ಕಿತ್ತೊಗೆಯುವುದನ್ನು ಕಂಡು ಉಳಿದ ಚಿಕ್ಕ ಚಿಕ್ಕ ಕಮಲಗಳ ಮೊಗ್ಗೆಗಳು ನೀರಿನೊಳಗೇ ಅಡಗಿ ಹೋಗ್ತಾ ಇವೆ. ಎಲ್ಲಾದರೂ ಆ ಅಂಗೈಗೆ ಸಿಗಬಹುದೋ ಅಥವಾ ಹುಲ್ಲು ಮೂಟೆಯ ಹೆಣ್ಣುಮಗಳ ಕಾಲಡಿಗೆ ಬಿದ್ದು ನಿರ್ನಾಮವಾಗಬಹುದೋ ಎಂಬ ಹೆದರಿಕೆ ಆ ಹೂಗಳಿಗೆ! ಹುಲ್ಲು ಹೊತ್ತ ಹೆಂಗಸರಿಗೆ ಏನೂ ಹೆದರಿಕೆಯಿಲ್ಲ. ಹುಲ್ಲನ್ನು ಯಾರಾದರೂ ತಗೊಂಡುಹೋಗಿ

ಮಾಡಲಾಗದೆ ಕೈಚೆಲ್ಲಿ ಕೂತ್ಕೋತಾರೋ ಗೊತ್ತಿಲ್ಲ. ಏಕೆಂದರೆ ಅಲ್ಲಿಗೆ ಈ ಅಂಗೈಯ ಹಿಂಬಾಲಕರೂ, ಹುಲ್ಲು ಹೊತ್ತ ಹೆಣ್ಣಿನ ಬಳಗದವರೂ ಸ್ವಾಮಿದರ್ಶನ, ದೇವರ ದರ್ಶನ, ದೇವೀ ದರ್ಶನ ಮಾಡ್ತಾನೇ ಇದ್ದಾರೆ. ಹಾಗಿರುವಾಗ ಅವರು ಅಂದರೆ ಸ್ವಾಮಿಗಳು, ದೇವರುಗಳು ಯಾರ ಮೊರೆಯನ್ನು ಆಲಿಸಿಯಾರೋ ಗೊತ್ತಿಲ್ಲ, ಅಲ್ವಾ ? ಆಪರೇಶನ್ನು ಒಳ್ಳೆಯದಾಗಲಿ, ಅದನ್ನು ಕೈಗೆ ತಗೊಳ್ಳುವ ಅಂಗೈ ಹುಲ್ಲಿನ ಮೂಟೆಯ ಹೆಣ್ಣೂ ಅದನ್ನು ಮುಟ್ಟಿ ಕೈಯಲ್ಲಿ ಹಿಡಿದು ಮುಂದೆ ಸಾಗಲಿ ಎಂದೇ ನನ್ನ ಆಸೆ.''

''ನೀನು ಹೇಳಿದಂತೇ ಆಗ್ತದೆ ಕೂಸಪ್ಪ.''

''ಆದರೆ ಸರ್, ಆ ಅಂಗೈ ಹುಲ್ಲಿನ ಮೂಟೆ ಹಿಡಿದಿರುವ ಹೆಣ್ಣು ಮಗಳಿಗೆ ಹೊರೆ ಇಳಿಸಲು, ಹೊರೆಯೆತ್ತಿ ತಲೆಗೇರಿಸಲು ಸಹಾಯ ಮಾಡಬಹುದಲ್ವೆ ? ಆದರೂ ನನಗೊಂದು ಅನುಮಾನ. ಇಲ್ಲಿ ಈ ಮೂರೂ ವಸ್ತುಗಳು ತಮ್ಮೊಳಗೆ ಯಾರು ಯಾರೊಡನೆ ಸಹಕರಿಸುತ್ವೋ ಕಾದು ನೋಡಬೇಕು. ಬರ್‍ತೀನಿ ಸರ್. ಆಫೀಸರ್ ಬೆಲ್ ಹಾಕ್ತಾ ಇದ್ದಾರೆ. ನಮಸ್ಕಾರ.''

**ರಾಘವೇಂದ್ರ, ಉಡುಪಿ**

೮-೩-೫೧, 'ಶ್ಯಾಮಲಾ ಸದನ', ಕೆ. 'ಎ'. ಮಾರ್ಗ, ಕುಂಜಿಬೆಟ್ಟು

ಉಡುಪಿ - ೫೭೬ ೧೦೨

ರಾಜ್ಯದ ಮಲೆನಾಡು ಸೀಮೆಯನ್ನೊಳಗೊಂಡ ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು, ಮೂಡಿಗೆರೆ, ಕೊಪ್ಪ, ಶೃಂಗೇರಿ, ನ.ರಾ.ಪುರ, ಹಾಸನದ ಬೇಲೂರು, ಸಕಲೇಶಪುರ ತಾಲ್ಲೂಕುಗಳಲ್ಲಿ ಏಪ್ರಿಲ್ ತಿಂಗಳಿನಿಂದ ಮುಂಗಾರಿನ ಪ್ರಾರಂಭದವರೆಗಿನ ಅವಧಿಗಳಲ್ಲಿ ಕಂಡುಬರುವ ಒಂದು ವಿಶಿಷ್ಟ ಹಬ್ಬವೆಂದರೆ, 'ಸುಗ್ಗಿ ಹಬ್ಬ'. ಇದು ಇಲ್ಲಿನ ದಲಿತರು ಪುರೋಹಿತಶಾಹಿಗೆ ಪ್ರತಿಯಾಗಿ ರೂಪಿಸಿಕೊಂಡ ಇತರೆ ಹಬ್ಬ ಜಾತ್ರೆಗಳಿಗಿಂತ ತೀರ ಭಿನ್ನವಾಗಿದೆ.

ಈ ಸುಗ್ಗಿ ಹಬ್ಬ ಅನೇಕ ವಿಚಿತ್ರ ಸಾಂಸ್ಕೃತಿಕ ವೈರುಧ್ಯತೆಗಳನ್ನು ಹೊಂದಿದ್ದು ಅರ್ಥೈಸಿಕೊಳ್ಳಲು ತುಂಬಾ ಗೊಂದಲಮಯವಾಗಿದೆ. ಊರಿನಿಂದ ಊರಿಗೆ ಆಚರಣೆಗಳಲ್ಲಿ ಭಿನ್ನತೆಯಿದೆ. ಈಗಾಗಲೇ ಈ ಹಬ್ಬವನ್ನು ಕುರಿತು ಪತ್ರಿಕೆಗಳಲ್ಲಿ ಕೃತಿಗಳಲ್ಲಿ, ಲೇಖನಗಳು ಬಂದಿದ್ದರೂ ಈ ಲೇಖನಗಳೆಲ್ಲವೂ ಅಲ್ಲಿರುವ ವೈರುಧ್ಯತೆಗಳನ್ನು ಮುಚ್ಚಿಟ್ಟು ಇನ್ಯಾವುದೋ ದೃಷ್ಟಿಯಿಂದ ವೈಭವೀಕರಿಸಿವೆ. ಇದಕ್ಕೆ ಕಾರಣ ಇಲ್ಲಿನ ಲೇಖಕರೆಲ್ಲ ಫ್ಯೂಡಲ್ ವ್ಯವಸ್ಥೆಯಲ್ಲಿ ರೂಪುಗೊಂಡಿರುವುದರಿಂದ ಊಳಿಗವನ್ನು ಮುಚ್ಚಿಡಲು ಯತ್ನಿಸಿದ್ದಾರೆ. ಹೊರಗಿನ ಲೇಖಕರೂ ಸಹ ಈ ಹಬ್ಬವನ್ನು ಭೂಮಾಲಿಕರ ಬಂಗಲೆಯ ಉಪ್ಪರಿಗೆಯ ಮೇಲೆ ನಿಂತು ನೋಡಿದರೇ ವಿನಾ ದಲಿತರ ಗುಡಿಸಲ ಜಗಲಿಯಲ್ಲಿ ನಿಂತು ನೋಡಲಿಲ್ಲ. ಈ ಲೇಖನದಲ್ಲಿ ಸುಗ್ಗಿ ಹಬ್ಬದಲ್ಲಿ ದಲಿತರ ಪಾತ್ರ ಹಾಗೂ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯತೆಯನ್ನು ಮಾತ್ರ ವಿಶ್ಲೇಷಿಸಿದೆ.

ಹಬ್ಬ ನಡೆಯುವ ಊರುಗಳಲ್ಲಿ ಒಕ್ಕಲಿಗರು ಪ್ರಬಲರು ಮತ್ತು ಜಮೀನ್ದಾರರು. ಇತರೆ ಮೇಲ್ಜಾತಿಯವರಿದ್ದರೂ ಸಂಪೂರ್ಣ ನಿಯಂತ್ರಣ ಈ ಜಮೀನ್ದಾರರದ್ದೇ ಆಗಿರುತ್ತದೆ. ಈ ಪ್ರದೇಶಗಳಲ್ಲೆಲ್ಲ ದಲಿತರು (ಪ. ಜಾತಿಯ ಆದಿ ಕರ್ನಾಟಕ) ಬಹುಸಂಖ್ಯಾತರು ಮತ್ತು ಭೂರಹಿತ ಕೂಲಿಕಾರರು. ಸ್ವಂತ ಆಸ್ತಿಯನ್ನು ಹೊಂದಿರದ ಇವರು ಹುಟ್ಟಿನಿಂದ ಸಾವಿನ ವರೆಗೂ ಕೂಳಿಗಾಗಿ ಜಮೀನ್ದಾರರನ್ನು ಅವಲಂಬಿಸಿದ್ದಾರೆ. ಏಪ್ರಿಲ್ ತಿಂಗಳಿನಲ್ಲಿ ಹಬ್ಬ ನಡೆಯುವುದರಿಂದ ಆ ತಿಂಗಳಿನಲ್ಲಿ ಕೂಲಿ ಸಿಗುವುದು ಕಷ್ಟ. ೧೦ರಿಂದ ೧೫ ದಿನಗಳ ಕಾಲ ನಡೆಯುವ ಹಬ್ಬದಲ್ಲಿ ದಲಿತರು ಪಾಲ್ಗೊಳ್ಳುವುದು ಕಷ್ಟವೇ.

# ಮಲೆನಾಡ ಸುಗ್ಗಿ ಹಬ್ಬ ಹಾಗೂ ಜಮೀನ್ದಾರಿಕೆ



ಸುಗ್ಗಿ ಹಬ್ಬ ಅನೇಕ ವಿಚಿತ್ರ ಸಾಂಸ್ಕೃತಿಕ ವೈರುಧ್ಯತೆಗಳನ್ನು ಹೊಂದಿದ್ದು ಅರ್ಥೈಸಿಕೊಳ್ಳಲು ತುಂಬಾ ಗೊಂದಲಮಯವಾಗಿದೆ. ಊರಿನಿಂದ ಊರಿಗೆ ಆಚರಣೆಗಳಲ್ಲಿ ಭಿನ್ನತೆಯಿದೆ. ಈಗಾಗಲೇ ಈ ಹಬ್ಬವನ್ನು ಕುರಿತು ಪತ್ರಿಕೆಗಳಲ್ಲಿ, ಕೃತಿಗಳಲ್ಲಿ ಲೇಖನಗಳು ಬಂದಿದ್ದರೂ ಈ ಲೇಖನಗಳೆಲ್ಲವೂ ಅಲ್ಲಿರುವ ವೈರುಧ್ಯತೆಗಳನ್ನು ಮುಚ್ಚಿಟ್ಟು ಇನ್ಯಾವುದೋ ದೃಷ್ಟಿಯಿಂದ ವೈಭವೀಕರಿಸಿವೆ. ಇದಕ್ಕೆ ಕಾರಣ ಇಲ್ಲಿನ ಲೇಖಕರೆಲ್ಲ ಫ್ಯೂಡಲ್ ವ್ಯವಸ್ಥೆಯಲ್ಲಿ ರೂಪುಗೊಂಡಿರುವುದರಿಂದ ಊಳಿಗವನ್ನು ಮುಚ್ಚಿಡಲು ಯತ್ನಿಸಿದ್ದಾರೆ. ಹೊರಗಿನ ಲೇಖಕರೂ ಸಹ ಈ ಹಬ್ಬವನ್ನು ಭೂಮಾಲಿಕರ ಬಂಗಲೆಯ ಉಪ್ಪರಿಗೆಯ ಮೇಲೆ ನಿಂತು ನೋಡಿದರೇ ವಿನಾ ದಲಿತರ ಗುಡಿಸಲ ಜಗಲಿಯಲ್ಲಿ ನಿಂತು ನೋಡಲಿಲ್ಲ. ಈ ಲೇಖನದಲ್ಲಿ ಸುಗ್ಗಿ ಹಬ್ಬದಲ್ಲಿ ದಲಿತರ ಪಾತ್ರ ಹಾಗೂ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯತೆಯನ್ನು ಮಾತ್ರ ವಿಶ್ಲೇಷಿಸಿದೆ.

ರಾಜೇಶ್

ಹೀಗಾಗಿ ಜಮೀನ್ದಾರರು ಮುಂಗಡವಾಗಿ ಸಾಲದ ರೂಪದಲ್ಲಿ ಭತ್ತ, ಹಣವನ್ನು ನೀಡಿ ಸಸಿ ನಾಟಿ, ಭತ್ತದ ಕೊಯ್ಲು, ಕಾಫಿ ಹಣ್ಣಿನ ಸಮಯದಲ್ಲಿ ಅವರು ದುಡಿಮೆಗಳಲ್ಲಿ ವಜಾ ಮಾಡಿಕೊಳ್ಳುತ್ತಾರೆ. ಕೆಲವರು ಹಬ್ಬಕ್ಕೆ ದೊರೆಯುವ ಸಾಲಕ್ಕಾಗಿ ತಮ್ಮ ಮಕ್ಕಳನ್ನು ಇವರ ಮನೆಗಳಲ್ಲಿ ದನ ಕಾಯಲು ಇಟ್ಟಿರುತ್ತಾರೆ. ದುಡಿಮೆ-ಭೂಮಿ-ಉತ್ಪಾದನೆಯ ವಸ್ತುಸ್ಥಿತಿ ಹೀಗಿರುವುದರಿಂದ ಇವರೇ ಭೂಮಾಲಿಕರ ಕ್ರೌರ್ಯಕ್ಕೆ ಬಲಿಪಶುಗಳಾಗಿರುತ್ತಾರೆ.

ಊರಿನಿಂದ ಊರಿಗೆ ಆಚರಣೆಗಳಲ್ಲಿ ವ್ಯತ್ಯಾಸವಿರಬಹುದಾದರೂ ದಲಿತರ ಪಾಲ್ಗೊಳ್ಳುವಿಕೆಯಲ್ಲಿ ಭಿನ್ನತೆಯಿಲ್ಲ. ಇವರ ದುಡಿತವೆಲ್ಲವೂ ಬಿಟ್ಟಿ ಚಾಕರಿಗಳೇ. ಈ ರೀತಿಯ ಕೆಲಸ ಕಾರ್ಯಗಳಲ್ಲಿ ಕೇರಿಯ ಎಲ್ಲಾ ದಲಿತರೂ ಪಾಲ್ಗೊಳ್ಳಬೇಕಾಗುತ್ತದೆ. ದೇವಸ್ಥಾನದ ಒಳಗೆ ಪ್ರವೇಶವಿಲ್ಲದಿದ್ದರೂ ಸುಣ್ಣ-ಬಣ್ಣ ಬಳಿಯುವವರಿಗೆ ಸಹಾಯಕರಾಗಿ ದೇವಸ್ಥಾನದ ಆವರಣದ ಸುತ್ತಮುತ್ತ ಕೆತ್ತಿ, ಗುಡಿಸಿ ಸ್ವಚ್ಛ ಮಾಡುವುದು, ಜಾತ್ರೆ ನಡೆಯುವ ಸ್ಥಳದಲ್ಲಿ ಜನರಿಗೆ ಕುಳಿತುಕೊಳ್ಳಲು ಅನುಕೂಲವಾಗುವಂತೆ ಗಿಡಗಂಟೆ ಕಡಿದು ಸ್ವಚ್ಛ ಮಾಡುವುದು, ಓಣಿ, ದಿಣ್ಣೆ, ತೋಟ, ಕಾಡುಗಳಿಂದ ಸುತ್ತುವರಿದಿರುವ ದೇವರು ತಿರುಗುವ ಹಾದಿಗಳಲ್ಲೆಲ್ಲಾ ಗುಂಡಿ ಮುಚ್ಚಿ ಸಿದ್ಧಗೊಳಿಸುವುದು, ದಾರಿಯುದ್ದಕ್ಕೂ ತೋರಣ ಕಟ್ಟುವುದು, ದಿನಕ್ಕೊಂದು ಕಡೆ ನಡೆಯುವ ಜಾತ್ರೆಗೆ ಅಲ್ಲಲ್ಲಿ ತಾತ್ಕಾಲಿಕ ಚಪ್ಪರ ಹಾಕುವುದು, ಹಬ್ಬಗಳಲ್ಲಿನ ಕೆಂಡೋತ್ಸವಕ್ಕೆ ಒಳ್ಳೆ ಮರದ ಸೌದೆ ತರುವುದು, ಬೆಂಕಿ ಹಚ್ಚಿದ ನಂತರ ಸೌದೆ ದೂಡಿ, ಕೆಂಡ ಹರಡಿ ಸಿದ್ಧಗೊಳಿಸುವುದು ಇತ್ಯಾದಿ. ಇನ್ನು ಕೆಲವು ಕುಟುಂಬಗಳಿಗೆ ಮಾತ್ರ ಸೀಮಿತವಾದ ಬಿಟ್ಟಿ ಚಾಕರಿಗಳಿವೆ, ತಲತಲಾಂತರಗಳಿಂದ ಪಾಲಿಸಿಕೊಂಡು ಬಂದಿರುವ ಕುಟುಂಬದ ಸದಸ್ಯರೇ ಮುಂದುವರಿಸಬೇಕಾದಂತಹವು. ಅವುಗಳೆಂದರೆ, ಹಬ್ಬದ ಪ್ರಾರಂಭದಲ್ಲಿ ಊರು ವ್ಯಾಪಿಸಿರುವ ಗಡಿಯುದ್ದಕ್ಕೂ ತಮಟೆ, ಜಾಗಟೆ ಬಾರಿಸುತ್ತಾ ಒಂದು ಸುತ್ತು ಬರುವುದು. ಇದನ್ನು 'ಹಬ್ಬಸಾರು' ಎನ್ನುತ್ತಾರೆ. ಮುಂದಿನ ದಿನ ನಡೆಯುವ ಕಾರ್ಯಕ್ರಮವನ್ನು ತಮಟೆ ಬಾರಿಸಿ ನೆರೆದಿರುವ ಜನರಿಗೆಲ್ಲ ಸಾರಿ ಹೇಳುವುದು. ದೇವರು ಸಂಚರಿಸುವ ದಾರಿಯುದ್ದಕ್ಕೂ ಪಂಜುಗಳನ್ನು ಹಿಡಿದು, ಎಣ್ಣೆ ಡಬ್ಬ ಹೊತ್ತುಕೊಂಡು ಹಗಲು ರಾತ್ರಿ ಅಲೆಯುವುದು. ಕೆಲವು ಮಾಂಸಾಹಾರಿ ದೇವರುಗಳ ಮುಂದೆ ಪ್ರಾಣಿಗಳನ್ನು ಕತ್ತರಿಸುವುದು, ಹೆಬ್ಬಾರಿ (ಕೋಣದ ಹಸಿ ಚರ್ಮದಲ್ಲಿ ತಯಾರಿಸಿದ ದೊಡ್ಡ ಡೋಲು) ಬಾರಿಸುವುದು ಇತ್ಯಾದಿ. ಈ ರೀತಿಯ ಕೆಲಸಗಳಿಗೆ ಮೀಸಲಾಗಿರುವವರು ಕೆಲವು ಕಡೆ ಹೆಂಗಸರು ಮಾಡಿದ ಅಡಿಗೆಯನ್ನು ತಿನ್ನದೆ ದೇವಸ್ಥಾನದ ಬದಿಗಳಲ್ಲಿ ಸೊಪ್ಪಿನ ಬಿಡಾರದಲ್ಲಿ ಹಬ್ಬ ಮುಗಿಯುವವರೆಗೂ ವಾಸಮಾಡುತ್ತಾರೆ.

ಇನ್ನು ಈ ಹಬ್ಬಕ್ಕೆ ಮೆರುಗೆಂದರೆ ದಲಿತರು ಬಾರಿಸುವ ನಿಶಾನಿ (ಚರ್ಮವಾದ್ಯ). ಈ ನಿಶಾನೆಯಿಲ್ಲದೆ ಸುಗ್ಗಿ ಹಬ್ಬವನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ. ದೇವರು-ಆಚರಣೆ-ಜನತೆ ಇವೆಲ್ಲವನ್ನೂ ಒಂದೆಡೆ ಸೇರಿಸಿ ಭಾವನಾತ್ಮಕವಾಗಿ ಉದ್ದೀಪನಗೊಳಿಸುವ ಶಕ್ತಿ ಈ ನಿಶಾನೆಗೆ ಇದೆ. ಹಬ್ಬದಲ್ಲಿ ನಡೆಯುವ ಒಂದೊಂದು ಆಚರಣೆಯನ್ನೂ ಕಿಲೋಮೀಟರ್‌ಗಳಷ್ಟು ದೂರದಿಂದಲೇ ನಿಶಾನೆ ಬಡಿಯುವ ಲಯವನ್ನು ಆಲಿಸಿ, ಹೇಳಿಬಿಡಬಹುದು. ಮಂಗಳಾರತಿ, ದೇವರನ್ನು ಮೇಲಿಳಿಸುವುದು, ಕುಣಿಸುವುದು, ಗಣ ಬರುವುದು, ಮೆರವಣಿಗೆಯಲ್ಲಿ ಸಾಗುವುದು ಹೀಗೆ ಒಂದೊಂದಕ್ಕೂ ಒಂದೊಂದು ಲಯದಲ್ಲಿ ಬಾರಿಸುತ್ತಾರೆ. 'ಸುಗ್ಗಿ ಲೆಕ್ಕ' ಎಂದು ಬಾರಿಸುವ ಲಯವೇ ಎಂಥವರನ್ನೂ ಕುಣಿಸಿಬಿಡಬಲ್ಲದು. ಅಂತಹ ಕಲೆಗಾರಿಕೆಯನ್ನು ಪ್ರದರ್ಶನಗೊಳಿಸುವ ನಿಶಾನಿದಾರರ ಕಷ್ಟ ಮಾತ್ರ ಭೀಕರವಾಗಿರುತ್ತದೆ. ಹಬ್ಬಕ್ಕೂ ಮೊದಲೇ ಚರ್ಮ ಹದಗೊಳಿಸಿ ವಾದ್ಯ ತಯಾರಿಸಿಕೊಳ್ಳಬೇಕಾಗುತ್ತದೆ. ಚರ್ಮವಾದ್ಯವಾದ ಕಾರಣ ಆಗಾಗ್ಗೆ ಬೆಂಕಿಯಲ್ಲಿ ಬಿಸಿ ಮಾಡಬೇಕಾಗುತ್ತದೆ. ಹೀಗಾಗಿ ದೇವರು ಸಂಚರಿಸುವಲ್ಲೆಲ್ಲಾ ಕೆಲವರು ಒಣಹುಲ್ಲಿನ ಹೊರೆ ಹೊತ್ತು ಹಿಂಬಾಲಿಸಬೇಕಾಗುತ್ತದೆ. ಹಬ್ಬ ನಡೆಯುವ ಅಷ್ಟೂ ದಿನಗಳು ಹಗಲೂ-ರಾತ್ರಿಗಳೆನ್ನದೆ ಬಾರಿಸಬೇಕಾದುದು ಅನಿವಾರ್ಯ. ದೈಹಿಕವಾಗಿ ತುಂಬಾ ಶ್ರಮದಾಯಕವಾಗಿರುವ ಈ ಕೆಲಸದಿಂದ ನಿದ್ರೆ-ಊಟವನ್ನು ಸರಿಯಾಗಿ ಮಾಡಲಾಗುವುದಿಲ್ಲ. ವಿರಾಮ ಸಿಗುವ ಅಲ್ಪ ಸಮಯದಲ್ಲಿ ಎಲ್ಲಂದರಲ್ಲಿ ಬಿದ್ದು, ನಿದ್ದೆ ಮಾಡುತ್ತಾರೆ. ಹಬ್ಬ ಮುಗಿಯುವ ಹೊತ್ತಿಗೆ ಕಾಯಿಲೆಗೂ ತುತ್ತಾಗುತ್ತಾರೆ. ಕುಣಿಯುವ ಸಂದರ್ಭದಲ್ಲಿ ಬಾರಿಸುವ ವಿಚಾರದಲ್ಲೇ ಹೆಚ್ಚು ಗಲಾಟೆಗಳಾಗುತ್ತವೆ. ಆಗ ಪೆಟ್ಟು ತಿನ್ನುವವರೂ ಇವರೇ.




ಹಬ್ಬದ ದಿನಗಳಲ್ಲಿ ಕಾಯಿಲೆಗೆ ತುತ್ತಾಗಿ ಹಾಸಿಗೆ ಹಿಡಿದವರು, ತಿಂಗಳು ತುಂಬಿ ಮೈನೆರೆಯಬೇಕಾದ ಹೆಣ್ಣು ಮಕ್ಕಳು ಊರಿನಲ್ಲಿ ಇರುವಂತಿಲ್ಲ. ಮೊದಲೇ ಅವರೆಲ್ಲ ಬೇರೆ ಊರಿನ ಸಂಬಂಧಿಕರ ಮನೆಗೆ ತೆರಳಬೇಕಾಗುತ್ತದೆ. ಊರ ಹೊರಗೆ ಸಾವನ್ನಪ್ಪಿದವರನ್ನು ಊರಿಗೆ ತರುವುದಿಲ್ಲ. ಸಂಬಂಧಿಕರ ಸಾವಿಗೂ ಹೋಗುವಂತಿಲ್ಲ. ಈ ನಿಯಮ ಉಳ್ಳವರಿಗೆ ಅನ್ವಯಿಸುವುದಿಲ್ಲ. ಹೀಗೆ ಹಬ್ಬಗಳಲ್ಲಿ ಕೆಳ ವರ್ಗದವರನ್ನು ಕೀಳಾಗಿ ಕಾಣಲೆಂದೇ ರೂಪಿಸಿಕೊಂಡಿರುವ ಹಲವು ಆಚರಣೆಗಳಿವೆ. ಅಂತಹ ಆಚರಣೆಗಳನ್ನು ಪಟ್ಟಿ ಮಾಡುತ್ತಾ ಹೋದರೆ ಒಂದು ಪುಸ್ತಕವನ್ನೇ ಬರೆಯಬಹುದು. ಒಟ್ಟಾರೆ, ಈ ಹಬ್ಬ ಭೂಮಾಲೀಕರು ನಿರ್ಮಾಣ ಮಾಡಿರುವ ಕಾನೂನುಗಳನ್ನೆಲ್ಲ ಪ್ರಯೋಗಿಸಿ ಫ್ಯೂಡಲ್ ವ್ಯವಸ್ಥೆಯ ಅಡಿಪಾಯವನ್ನು ಭದ್ರಗೊಳಿಸಲು ಜಾರಿಗೆ ತಂದಂತೆ ತೋರುತ್ತದೆ.

ದುಡಿಯುವಾಗ ಬೇರೆ ಬೇರೆ ಜಮೀನ್ದಾರರ ಜಮೀನಿಗೆ ಹಂಚಿಹೋಗುವ ದಲಿತರು ಈ ಹಬ್ಬದಲ್ಲಿ ಒಟ್ಟಿಗೆ ಒಂದೇ ಕಡೆ ಸೇರುತ್ತಾರೆ. ಈ ಸಂದರ್ಭದಲ್ಲಿ ಅವರ ಸಾಂಘಿಕ ಶಕ್ತಿ ಪ್ರಕಟಗೊಳ್ಳುವ ಸಾಧ್ಯತೆ ಇರುತ್ತದೆ. ಅವರಲ್ಲಿನ ಪಾಳೆಗಾರಿಕೆ ವ್ಯವಸ್ಥೆಯ ಮೇಲಿನ ಹೆಪ್ಪುಗಟ್ಟಿದ ಆಕ್ರೋಶ ತಮ್ಮತಮ್ಮಲ್ಲೇ ಬಡಿದಾಡಿಕೊಳ್ಳುವ ಮೂಲಕ ಪ್ರಕಟಗೊಳ್ಳುತ್ತದೆ. ಇದು ಭೂಮಾಲೀಕರ ವಿರುದ್ಧ ತಿರುಗಿದರೆ ಪರಿಣಾಮ ಬೇರೆಯದೇ ಆಗುವ ಸಾಧ್ಯತೆಗಳಿವೆ. ಆದ್ದರಿಂದ ಇವರನ್ನು ಹತೋಟಿಯಲ್ಲಿಡಲು ಎರಡು ಮಾರ್ಗಗಳನ್ನು ಅನುಸರಿಸಿದಂತೆ ತೋರುತ್ತದೆ. ಒಂದು : ನೇರವಾಗಿ ದಾಳಿ ಮಾಡುವುದರ ಮೂಲಕ ಹತ್ತಿಕ್ಕುವುದು. ಗಣಮಗನಿಗೆ ಹೇಳಿ ಬೆತ್ತದಿಂದ ಹಿಗ್ಗಮುಗ್ಗಾ ಬಾರಿಸುವುದು. ನಿಯಮ ಮೀರಿದವರಿಗೆ ದಂಡ ವಿಧಿಸುವುದು. ಅಂತಹ ಕುಟುಂಬವನ್ನು ಬಹಿಷ್ಕರಿಸುವುದು. ಅಂತಹವರನ್ನು ಗುರುತಿಸಿ ರಾತ್ರೋರಾತ್ರಿ ರಕ್ತಕಾರಿ ಸಾಯುವಂತೆ ಪೆಟ್ಟುಕೊಟ್ಟು ಅಥವಾ ಗುಡಿಸಲಿಗೆ ಬೆಂಕಿಹಚ್ಚಿ ಇದೆಲ್ಲಾ ದೇವರೇ ಮಾಡಿಸಿದ್ದೆಂದು ಸುದ್ದಿ ಹಬ್ಬಿಸುವುದು, ಹಬ್ಬದ ಪ್ರಾರಂಭದಿಂದ ಮುಗಿಯುವವರೆಗೂ ಪರ ಊರಿನ ಯಾರನ್ನೂ ಊರಿನ ಒಳಗೆ ಸೇರಿಸಿಕೊಳ್ಳದಂತೆ, ಊರಿನ ಜನರು ಹೊರಹೋಗದಂತೆ ನಿರ್ಬಂಧ ವಿಧಿಸುವುದು. ಎರಡು : ಸ್ವಲ್ಪಮಟ್ಟಿಗೆ ರಿಯಾಯಿತಿ ತೋರಿಸುವುದು. ಅಂದರೆ, ದಲಿತರಿಗೆ ಪ್ರತ್ಯೇಕ ಗುಂಪುಗಳಲ್ಲಿ ದೂರದಲ್ಲಿ ಕುಣಿಯಲು ಅವಕಾಶ ಕೊಟ್ಟಿರುವುದು. ಮಾರಿ, ದುರ್ಗಿ, ಭೂತಪ್ಪ, ಕೆಂಚರಾಯ ಇಂತಹ ದಲಿತ ದೇವತೆಗಳ ಅಡ್ಡೆ ಕಟ್ಟಿ ಸಮಾನಾಂತರವಾಗಿ ಕುಣಿಸಲು ಅವಕಾಶ ಮಾಡಿಕೊಡುವುದು.

ವಾಸ್ತವದಲ್ಲಿ ತಮ್ಮ ಯುವಪೀಳಿಗೆಯ ಶಿಕ್ಷಣ ಮತ್ತು ದಲಿತ ಚಳವಳಿ ಕೊಟ್ಟ ಜಾಗೃತಿಯಿಂದಾಗಿ ದಲಿತರು ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿ ಭೂಮಾಲೀಕರ ಅವಲಂಬನೆಯಲ್ಲಿ ಸ್ವಲ್ಪ ಸಡಿಲಗೊಂಡ ಪರಿಣಾಮ ಊಳಿಗದ ದೊರೆಗಳಿಗೆ ಸವಾಲು ಹಾಕುವ ಮಟ್ಟಕ್ಕೆ ಎದ್ದುನಿಂತಿದ್ದಾರೆ. ''ನಾವೇಕೆ ಬಿಟ್ಟಿ ಚಾಕರಿ ಮಾಡಬೇಕು ?, ನಮಗೇಕೆ ದೇವಸ್ಥಾನಗಳಿಗೆ ಪ್ರವೇಶವಿಲ್ಲ?, ನಾವೇ ಏಕೆ ನಿಶಾನಿ ಬಡಿಯಬೇಕು ?, ನೀವೇ ಬಡಿಯಿರಿ, ನಾವು ಕುಣಿಯುತ್ತೇವೆ'' – ಹೀಗೆ ಪ್ರಶ್ನೆಗಳನ್ನು ಎತ್ತಲಾರಂಭಿಸಿದರು. ಮೊದಮೊದಲು ಭೂಮಾಲೀಕರು ಭೀಕರ ಕ್ರೌರ್ಯದ ಮೂಲಕವೇ ಉತ್ತರಿಸಿದರಾದರೂ ಪ್ರತಿಭಟನೆ, ಜಾತಿನಿಂದನೆ, ಜಾತಿದೌರ್ಜನ್ಯದ ದೂರುಗಳು ಯಾವಾಗ ದಾಖಲಾಗತೊಡಗಿದವೋ ಆಗ ಘಜೀತಿಗಿಟ್ಟುಕೊಂಡಿತು. ಹಬ್ಬ ನಡೆಸಲೇಬೇಕಾದರೆ, ದಲಿತರೆತ್ತಿದ ಪ್ರಶ್ನೆಗಳೊಂದಿಗೆ ರಾಜಿಯಾಗಬೇಕು. ರಾಜಿ ಎಂದರೆ ಇಡೀ ಜಮೀನ್ದಾರಿಕೆಯ ದರ್ಪ, ದೌಲತ್ತಿಗೆ ಭಾರೀ ಅವಮಾನ. ಪರಿಣಾಮವಾಗಿ ಕೆಲವು ಕಡೆ ಸುಗ್ಗಿ ಹಬ್ಬ ನಿಂತುಹೋಗಿ ಹಲವು ವರ್ಷಗಳೇ ಕಳೆದಿವೆ. ದಾಖಲಾದ ದೂರುಗಳು ಇನ್ನೂ ನ್ಯಾಯಾಲಯದಲ್ಲೇ ಇವೆ. ಈಗಲೂ ಕೆಲವು ಊರುಗಳಲ್ಲಿ ಈ ಹಬ್ಬ ನಡೆಯುತ್ತಿದೆಯೆಂದರೆ, ದಲಿತರು ಇನ್ನೂ ಜಮೀನ್ದಾರಿಕೆಯ ಅವಲಂಬನೆಯಲ್ಲಿ ಬದುಕುತ್ತಿದ್ದಾರೆ ಎಂದೇ ಅರ್ಥ.

ರಾಜೇಶ್
ಶಿಕ್ಷಕರು, ಸಾಲುಮರ, ಗೋಣಿಬೀಡು ಅಂಚೆ, ಮೂಡಿಗೆರೆ ತಾಲೂಕು, ಚಿಕ್ಕಮಗಳೂರು ಜಿಲ್ಲೆ - ೫೭೭೧೩೨

ಸಿ. ಕೆ. ವೆಂಕಟರಾಮಯ್ಯ

# ರವೀಂದ್ರರು ಬೆಳೆದ ಸನ್ನಿವೇಶ



ತಮ್ಮ ಬಾಲ್ಯದಲ್ಲಿ ಕಲ್ಕತ್ತಾ ನಗರವು ಹೇಗಿದ್ದಿತೆಂಬುದನ್ನು ರವೀಂದ್ರರು ಮನಮುಟ್ಟುವಂತೆ ಚೆನ್ನಾಗಿ ಬಣ್ಣಿಸಿದ್ದಾರೆ. ಆಗ್ಗೆ ಈಗಿನಂತೆ ಮೋಟಾರು ಕಾರುಗಳು. ಬಸ್ಸುಗಳೂ ಬಂದಿರಲಿಲ್ಲ; ಟ್ರಾಂವೇ ಗಳಿರಲಿಲ್ಲ. ನಗರದಲ್ಲಿದ್ದ ಸಂಚಾರದ ಸಾಧನವು ಕುದುರೆಗಾಡಿ. ಆಗ್ಗೆ ಕೀಲೆಣ್ಣೆಯ ಕಾಮಗಾರಿ ಮಾಡಿದ್ದ ಧೂಳಿಲ್ಲದ ರಸ್ತೆಗಳಿರಲಿಲ್ಲ. ಕುದುರೆ ಬಂಡಿ ಮುಂದೆ ಹೋಯಿತೆಂದರೆ, ಧೂಳು ಏಳುತ್ತಿದ್ದುದು ಆಗಿನ ಸ್ಥಿತಿ. ಕಲ್ಕತ್ತಾ ನಗರದಲ್ಲಿ ಎಲ್ಲಿ ನೋಡಿದರೂ ಬಡಕಲು ಕುದುರೆಗಳನ್ನು ಕಟ್ಟಿದ್ದ ಬಂಡಿಗಳ ಓಡಾಟ. ಚರ್ಮದ ಮೇಲಕ್ಕೆ ಮೂಳೆಗಳು ಹಾಯ್ದುಕೊಂಡಿದ್ದ ಆ ಬಡಕಲು ಕುದುರೆಗಳು ಚಾವಟಿಯ ಏಟುಗಳ ಸವಿಯನ್ನನುಭವಿಸುತ್ತ, ಕಷ್ಟಪಟ್ಟು ಬಂಡಿಗಳನ್ನೆಳೆದು ಮುಕ್ಕಿರಿಯುತ್ತಿದ್ದುವು; ಈಗಿನಂತೆಯೇ ಆಗಲೂ ಅನೇಕರು ಪ್ರಾಣಿಗಳಲ್ಲಿ ದಯೆ ತೋರುತ್ತಿರಲಿಲ್ಲ. ಶ್ರೀ ರವೀಂದ್ರರು ಮಾಡಿರುವ ವರ್ಣನೆಯನ್ನು ನೋಡಿ : "ಆಗ್ಗೆ, ಕೆಲಸಕಾರ್ಯಗಳಲ್ಲಿ ಈಗಿನಂತೆ ಉಸಿರಾಡುವುದಕ್ಕೂ ಬಿಡುವಿಲ್ಲವೋ – ಎಂಬಂತೆ ತೋರುವ ಅವಸರವಿರಲಿಲ್ಲ; ನಿಧಾನವಾಗಿ ಕೆಲಸಗಳು ಸಾಗುತ್ತಿದ್ದುವು. ಗುಮಾಸ್ತರುಗಳು ಊಟ ಮಾಡಿ, ಹುಕ್ಕವನ್ನು ಸೇವಿಸಿ, ಅಡಕೆಲೆಯನ್ನು ಅಗಿಯುತ್ತ ಕಚೇರಿಗೆ ಹೋಗುತ್ತಿದ್ದರು. ಕೆಲವರು ಮೇನಾಗಳಲ್ಲಿ ಹೋಗುತ್ತಿದ್ದರು. ಕೆಲವರು ನಾಲ್ಕೈದು ಮಂದಿಗಳಂತೆ ಸೇರಿ ಒಂದೊಂದು ಕುದುರೆಬಂಡಿಯನ್ನು ಬಾಡಿಗೆಗೆ ಗೊತ್ತು ಮಾಡಿಕೊಂಡು ಕಚೇರಿಗೆ ಹೋಗುತ್ತಿದ್ದರು. ಅದಕ್ಕೆ ಪಾಲಿನ ಬಂಡಿಯೆಂದು ಹೆಸರು. ಧನಿಕರು ತಮ್ಮ ಕುದುರೆ ಬಂಡಿಗಳ ಮೇಲೆ, ತಮ್ಮ ಹೆಸರಿನ ಅಕ್ಷರಗಳನ್ನು ಬರೆಯಿಸಿಕೊಂಡಿರುತ್ತಿದ್ದರು... ಅವರ ಬಂಡಿಗಳನ್ನು ಹೊಡೆಯುವವರು ಸೊಟ್ಟ ರುಮಾಲುಗಳನ್ನು ಸೊಗಸಿನಿಂದ ಸುತ್ತಿಕೊಂಡು ಕುಳಿತಿರುತ್ತಿದ್ದರು. ಪ್ರತಿಯೊಂದು ಬಂಡಿಯ ಹಿಂಭಾಗದಲ್ಲಿ ಇಬ್ಬರು ಕುದುರೆ ಮಾಲೀಸುಗಾರರು ಚಾಮರಗಳನ್ನು ಹಿಡಿದುಕೊಂಡು ಬೀದಿಯಲ್ಲಿ ನಡೆದು ಹೋಗುತ್ತಿದ್ದವರು ಬೆಚ್ಚಿ ದಾರಿ ಬಿಡುವಂತೆ 'ಹೇ ಹೈ ಹೇ' ಎಂದು ಅಬ್ಬರಿಸುತ್ತಿದ್ದರು. ಹೆಂಗಸರಿಗೆ ಘೋಷಾ ಇದ್ದುದರಿಂದ ಅವರು ಬಾಗಿಲುಗಳು ಮುಚ್ಚಿ ಉಸಿರು ಸಿಕ್ಕಿಕೊಳ್ಳುವಂತಿದ್ದ ಮೇನಾಗಳೊಳಗೆ ಸಾಗುತ್ತಿದ್ದರು; ಬಂಡಿಗಳೊಳಗೆ ಕುಳಿತುಕೊಳ್ಳಲು ಅವರೇ ಬೆದರಿ ಹಿಂತೆಗೆಯುತ್ತಿದ್ದರು. ಬಿಸಿಲಿನಲ್ಲಾಗಲಿ ಮಳೆಯಲ್ಲಾಗಲಿ ಹೆಂಗಸರು ಕೊಡೆಯನ್ನು ಹಿಡಿದುಕೊಂಡರೆ ಗಂಡುಬೀರಿಗಳೆಂದು ಭಾವನೆಯುಂಟಾಗುವುದು. ಹೊಸ ಮಾದರಿಯ ರವಿಕೆಯನ್ನು ತೊಡುವ ಅಥವಾ ಕಾಲುಗಳಿಗೆ ಜೋಡುಗಳನ್ನು ಹಾಕಿಕೊಳ್ಳುವ ಧೈರ್ಯಮಾಡಿದ ಹೆಂಗಸಿಗೆ ಜನರು 'ಮೇಮ್ ಸಾಹಿಬ್' ಎಂಬ ಅಣಕದ ಅಡ್ಡ ಹೆಸರನ್ನಿಡುತ್ತಿದ್ದರು. ಔಚಿತ್ಯವನ್ನೂ, ಲಜ್ಜೆಯನ್ನೂ ಬಿಟ್ಟ ಬಜಾರಿಯೆಂದು ಅದರ ಅರ್ಥ. ಯಾವಳಾದರೂ ಹೆಂಗಸು ತನ್ನ ಕುಟುಂಬಕ್ಕೆ ಸೇರಿದವನಲ್ಲದ ಯಾವನಾದರೂ ಗಂಡಸನ್ನು ಕಂಡರೆ, ಅವಳ ಅವಗುಂಠನವು ಮೂಗಿನ ತುದಿಯವರೆಗೂ ತಟಕ್ಕನೆ ಇಳಿದು ಮುಖವನ್ನು ಮುಚ್ಚಿಬಿಡುವುದು. ಅವಳು ಆತನ ಕಡೆಗೆ ಸರಕ್ಕನೆ ಬೆನ್ನು ತಿರುಗಿಸಿ ನಿಂತುಬಿಡುವಳು. ಹೆಂಗಸರು ಕುಳಿತಿದ್ದ ಮೇನಾಗಳ ಬಾಗಿಲುಗಳು ಅವರ ಕೊಠಡಿಯ ಬಾಗಿಲುಗಳಂತೆಯೇ ಭದ್ರವಾಗಿ ಮುಚ್ಚಿರುತ್ತಿದ್ದುವು. ಹಣಗಾರರ ಹೆಣ್ಣುಮಕ್ಕಳೂ ಸೊಸೆಯರೂ ಕುಳಿತಿದ್ದ ಮೇನಾಗಳಾದರೆ, ಆ ಮೇನಾಗಳಿಗೆ ದಪ್ಪ ಬಟ್ಟೆಯ ಬುರುಕಿಯೊಂದನ್ನೂ ಹಾಕಿರುತ್ತಿದ್ದರು. ಬಾಗಿಲುಗಳನ್ನು ಮುಚ್ಚಿ ಬುರುಕಿಯನ್ನೂ ಹಾಕಿದ್ದ ಆ ಮೇನಾಗಳನ್ನು ನೋಡಿದರೆ, ಓಡಾಡುವ ಗೋರಿಗಳಂತೆ ಕಾಣುತ್ತಿದ್ದುವು. ಹಣಗಾರರ ಮನೆಯ ಹೆಂಗಸರು ಕುಳಿತಿದ್ದ ಮೇನಾದ ಪಕ್ಕದಲ್ಲಿ ದರ್ವಾನನು ಹೋಗುತ್ತಿದ್ದನು. ಬಾಗಿಲಿನ ಬಳಿಯಲ್ಲಿ ಕಾವಲಿದ್ದು ಗಡ್ಡವನ್ನು ನೀವಿಕೊಳ್ಳುವುದು, ಹಣವನ್ನು ಭದ್ರವಾಗಿ ಬ್ಯಾಂಕಿಗೆ ಮುಟ್ಟಿಸುವುದು, ಮೇನಾದೊಳಗಿನ ಹೆಂಗಸರು ಸುರಕ್ಷಿತವಾಗಿ ಬಂಧುಗಳ ಮನೆಗೆ ಹೋಗಿಬರುವಂತೆ ನೋಡಿಕೊಳ್ಳುವುದು, ಹಬ್ಬದ ದಿನಗಳಲ್ಲಿ ಕುಟುಂಬದ ಯಜಮಾನಿಯನ್ನು ಮೇನಾದಲ್ಲಿ ಕುಳ್ಳಿರಿಸಿಕೊಂಡು ಗಂಗಾ ನದಿಗೆ ಹೋಗುವುದು, ಮೇನಾ ಬಾಗಿಲು ಮುಚ್ಚಿದ್ದಂತೆಯೇ ನೀರಿನಲ್ಲಿ ಅದನ್ನದ್ದಿಸಿ ಮೇನಾದೊಳಗೆ ಕುಳಿತಿರುವಾಕೆಗೆ ಆ ರೀತಿ ಸ್ನಾನಮಾಡಿಸಿ ಮನೆಗೆ ಕರೆದು ಕೊಂಡು ಬರುವುದು – ಇವು ದರ್ವಾನನ ಕೆಲಸಗಳು. ಆಗ್ಗೆ ಕಲ್ಕತ್ತಾ ನಗರದಲ್ಲಿ 'ಗ್ಯಾಸ್' ದೀಪಗಳಾಗಲಿ ವಿದ್ಯುಚ್ಛಕ್ತಿ ದೀಪಗಳಾಗಲಿ ಇರಲಿಲ್ಲ. ಮೊಟ್ಟಮೊದಲು ಸೀಮೆಯೆಣ್ಣೆ 'ಲ್ಯಾಂಪು' ಬಂದಾಗ ಅದರ ಪ್ರಕಾಶವನ್ನು ಕಂಡು ನಾವು ಬೆರಗಾದೆವು. ಅದು ಬರುವುದಕ್ಕೆ ಮುಂಚೆ, ಪ್ರತಿ ದಿನವೂ ಸಂಜೆಯಾದ ಕೂಡಲೆ ಮನೆಯ ಆಳು ನಮ್ಮ ಮನೆಯ ಪ್ರತಿಯೊಂದು ಕೊಠಡಿಯಲ್ಲಿಯೂ ಹರಳೆಣ್ಣೆ ತುಂಬಿದ್ದ ಹಣತೆಗಳನ್ನು ಹೊತ್ತಿಸಿಡುತ್ತಿದ್ದನು. ನಾವು ಓದುತ್ತಿದ್ದ ಕೊಠಡಿಯೊಳಗಿನ ಹರಳೆಣ್ಣೆ ದೀಪವಿದ್ದುದು, ಒಂದು ಗಾಜಿನ ಪುಟ್ಟ ತಾಟಿನಲ್ಲಿ; ಅದಕ್ಕೆ ಎರಡು ಬತ್ತಿಗಳು. ಆಗಿನ ದಿನಗಳಲ್ಲಿ ನೀರಿನ ಕೊಳಾಯಿಗಳಿರಲಿಲ್ಲ. ಮಾಘ, ಫಾಲ್ಗುಣ ಮಾಸಗಳಲ್ಲಿ ಗಂಗಾ ನದಿಯ ನೀರು ತಿಳಿಯಾಗಿ ಶುಭ್ರವಾಗಿರುವುದು. ಆಗ ಅಡ್ಡೆಯವರು ಅದನ್ನು ಬಿಂದಿಗೆಗಳಲ್ಲಿ ತುಂಬಿಕೊಂಡು ಬರುವರು. ನಮ್ಮ ಮನೆಯ ಕೆಳಗಿನ ಅಂತಸ್ತಿನಲ್ಲಿರುವ ಕತ್ತಲೆಕೋಣೆಗಳಲ್ಲಿ ಸಾಲು ಸಾಲಾಗಿ ಆ ಬಿಂದಿಗೆಗಳನ್ನು ಪೇರಿಸಿಡುತ್ತಿದ್ದರು. ವರ್ಷವು ಮುಗಿಯುವವರೆಗೂ ಕುಡಿಯುವ ನೀರಿಗೆ ನಮಗೆ ಅವುಗಳೇ ಆಧಾರ. ಆಗಿನ ಕಾಲದಲ್ಲಿ ಇನ್ನೂ ಅಂಗಡಿಗಳಲ್ಲಿ ಚಾಕೊಲೇಟುಗಳನ್ನು ಮಾರುತ್ತಿರಲಿಲ್ಲ. ಆಗ್ಗೆ ಪಾಕಕ್ಕೆ ಹಾಕಿದ ಎಳ್ಳಿನ ಸಣ್ಣ ಉಂಡೆಗಳನ್ನು ಮಾರುತ್ತಿದ್ದರು; ಅವಕ್ಕೆ ಗುಲಾಬಿ ವಾಸನೆಯನ್ನು ಕಟ್ಟಿರುತ್ತಿದ್ದರು. ಕಾಸಿಗೊಂದರಂತೆ ಅವುಗಳನ್ನು ಮಾರುತ್ತಿದ್ದರು. ಈಗಿನ ಹುಡುಗರ ಅಂಗಿಯ ಜೇಬುಗಳು ಆ ಉಂಡೆಗಳಿಂದ ಅಂಟಾಗುತ್ತವೆಯೋ ಹೇಗೋ ತಿಳಿಯದು. ಗೌರವಸ್ಥ ಹಣಗಾರರ ಮನೆಯೊಳಕ್ಕೆ ಪ್ರವೇಶಿಸುವುದಕ್ಕೇನೂ ಈಗಿನ ಕಾಲದಲ್ಲಿ ಆ ಉಂಡೆಗಳಿಗೆ ಬಹಳ ನಾಚಿಕೆ. ಆಗಿನ ಕಾಲದ ಉಂಡೆಗಳೂ, ಎಳ್ಳು ಹಾಕಿದ ಮಿಠಾಯಿಗಳೂ ಈಗೆಲ್ಲಿ? ಈಗಲೂ ಅವು ಇವೆಯೆ ? ಇಲ್ಲದಿದ್ದಲ್ಲಿ ಅವುಗಳ ಸೇವನೆಯನ್ನು ಮತ್ತೆ ಹುಡುಗರಿಗೆ ಅಭ್ಯಾಸ ಮಾಡಿಸುವ ಯತ್ನ ಮಾಡಿ ಫಲವಿಲ್ಲ. ಚೈತ್ರ, ವೈಶಾಖ ಮಾಸಗಳ ಬೇಸಗೆಯ ಬಿಸಿಲಿನಲ್ಲಿ ಬೀದಿಯಲ್ಲಿ ಮಂಜಿನ ಗಡ್ಡೆಯನ್ನು ಮಾರುವವರು ಕೂಗಿಕೊಂಡು ಬರುವರು. ಆ ಕೂಗನ್ನು ಕೇಳಿದಾಗ ನನಗೆಷ್ಟು ಸಂತೋಷವಾಗುತ್ತಿದ್ದಿತೆಂಬುದನ್ನು ನಾನೇ ಬಲ್ಲೆ. ವಸಂತ ಋತುವಿನ ಹೂಗಳನ್ನು ಮಾರುವವರೂ ಕೂಗಿಕೊಂಡು ಬರುವರು. ಈಗ ಆ ಹೂಗಳನ್ನು ಗೂಡೆಗಳಲ್ಲಿಟ್ಟುಕೊಂಡು ಮಾರುವವರೇ

ಬರುವುದಿಲ್ಲ. ಅದಕ್ಕೇನು ಕಾರಣವೋ ತಿಳಿಯದು. ಆಗ್ಗೆ ಆ ಹೂವುಗಳ ಸುವಾಸನೆಯಿಂದ ಗಾಳಿಯು ತುಂಬಿರುತ್ತಿದ್ದಿತು. ಹೆಂಗಸರೂ ಹುಡುಗಿಯರೂ ಅವುಗಳನ್ನು ಆಶೆಯಿಂದ ಮುಡಿದುಕೊಳ್ಳುತ್ತಿದ್ದರು. ಅವರು ಸ್ನಾನಕ್ಕೆ ಹೋಗುವುದಕ್ಕೆ ಮುಂಚೆ ತಮ್ಮ ತಮ್ಮ ಕೊಠಡಿಗಳ ಹೊರಗೆ ಕನ್ನಡಿಗಳ ಮುಂದೆ ಕುಳಿತು ತಲೆಯನ್ನು ಬಾಚಿಕೊಂಡು, ವಿಧವಿಧವಾಗಿ ಹೆರಳುಗಳನ್ನು ಹಾಕಿಕೊಂಡು ಅಲಂಕಾರ ಮಾಡಿಕೊಳ್ಳುತ್ತಿದ್ದರು. ಅವರು ಚಂದ್ರನಾಗೂರಿನ ಕರಿಯ ಅಂಚಿನ ಸೀರೆಗಳನ್ನುಡುತ್ತಿದ್ದರು.''

ದೊಡ್ಡ ಕುಟುಂಬಗಳಲ್ಲಿ ಮನೆಯವರು ಮಕ್ಕಳನ್ನು ತಾವೇ ನೋಡಿಕೊಳ್ಳುವುದು ವಿರಳ. ಅವರು ಮಕ್ಕಳನ್ನು ಆಳುಗಳ ವಶಕ್ಕೆ ಒಪ್ಪಿಸುವುದೇ ಹೆಚ್ಚು. ಆ ಆಳುಗಳಿಗೆ ಅನೇಕ ಸಂದರ್ಭಗಳಲ್ಲಿ ಉತ್ತಮವಾದ ಸಂಸ್ಕಾರ ಇರುವುದಿಲ್ಲ, ಮಕ್ಕಳಲ್ಲಿ ಪ್ರೀತಿಯಂತೂ ಇರುವುದೇ ಇಲ್ಲ. ಆದುದರಿಂದ ಅವರು ಮಕ್ಕಳನ್ನು ಕಾಡುವುದೇ ಅವರ ಸ್ವಭಾವ. ಶ್ರೀಮಾನ್ ರವೀಂದ್ರನಾಥ ಠಾಕೂರರಿಗೆ ಕೂಡ ಆ ಬವಣೆ ತಪ್ಪಲಿಲ್ಲ. ಮನೆಯ ಹೊರಭಾಗದಲ್ಲಿ ಆಗ್ನೇಯ ಮೂಲೆಯಲ್ಲಿದ್ದ ಕೊಠಡಿಯಲ್ಲಿ ಆಳುಗಳು ಇರುತ್ತಿದ್ದರು. ಹಿರಿಯರು ರವೀಂದ್ರರನ್ನೂ ಅವರ ಅಣ್ಣಂದಿರನ್ನೂ ಇತರ ಹುಡುಗರನ್ನೂ ನೋಡಿಕೊಳ್ಳುವ ಕೆಲಸವನ್ನು ಆಳುಗಳಿಗೆ ಒಪ್ಪಿಸಿದ್ದರು. ಆ ಆಳುಗಳು ಚಿಕ್ಕವಯಸ್ಸಿನ ಆ ಬಾಲಕರಲ್ಲಿ ದಯೆಯನ್ನು ತೋರಿಸಿ ಪ್ರೀತಿಯಿಂದ ನೋಡಿಕೊಳ್ಳದೆ, ಬೆನ್ನಿನಮೇಲೆ ಗುದ್ದುವುದು, ಹೆದರಿಸುವುದು, ಬೆದರಿಸುವುದು – ಇವೇ ಮುಂತಾದ ರೀತಿಗಳಲ್ಲಿ ಕಾಡುತ್ತಿದ್ದರು. ರವೀಂದ್ರರು ''ನಮ್ಮ ಬೆನ್ನುಗಳೂ ತಮ್ಮಿಂದ ಸಾಧ್ಯವಿದ್ದ ಮಟ್ಟಿಗೂ ಆ ಏಟುಗಳನ್ನು ತಡೆಯುತ್ತಿದ್ದುವು. ದೊಡ್ಡವರು ಹಿಂಸೆ ಮಾಡುವುದೂ ಚಿಕ್ಕವರು ಆ ಹಿಂಸೆಯನ್ನು ತಡೆಯುವುದೂ ಪ್ರಪಂಚದ ನಿಯಮಗಳಲ್ಲೊಂದೆಂದು ನಾವು ನಿರ್ಧರಿಸಿಬಿಟ್ಟಿದ್ದೆವು'' ಎಂದು ಬರೆದಿರುವುದನ್ನು ಓದಿದರೆ ''ಅಯ್ಯೋ'' ಎನ್ನಿಸುತ್ತದೆ. ಆ ಆಳುಗಳಾದರೂ ಎಷ್ಟು ಕ್ರೂರಿಗಳು ! ಅವರು ಎಷ್ಟು ಹೊಡೆದರೂ ಮಕ್ಕಳು ಅಳಕೂಡದೆಂಬುದು ಅವರ ಇಷ್ಟ. ನೋವನ್ನು ತಡೆಯಲಾರದೆ ಮಕ್ಕಳು ಅತ್ತರೆ ಅದು ಕೆಟ್ಟ ನಡತೆಯೆಂದು ಆಳುಗಳ ಭಾವನೆ. ಮಕ್ಕಳು ಅಳುವ ಸದ್ದು ಕೇಳಿಸಿದರೆ, ಮನೆಯವರು ಓಡಿಬಂದು ತಮ್ಮನ್ನು ದಂಡಿಸಿಯಾರೆಂಬ ಭಯವೂ ಅದಕ್ಕೆ ಕಾರಣವಾಗಿರಬೇಕು. ಏಟುಬಿದ್ದ ಮಕ್ಕಳು ಅತ್ತರೆ ಆಗ್ಗೆ ಬಳಕೆಯಲ್ಲಿದ್ದ ನೀರಿನ ಕೊಳಗ ತಪ್ಪಲೆಗಳೊಳಕ್ಕೆ ಅವರ ತಲೆಯನ್ನು ತುರುಕಿ ಬೆದರಿಸುತ್ತಿದ್ದರು. ಅದರಿಂದ ಮಕ್ಕಳು ಉಸಿರಾಡುವುದಕ್ಕಾಗದೆ ವಿಪತ್ತು ಒದಗಿದರೆ ಗತಿಯೇನೆಂಬ ಯೋಚನೆಯೂ ಅವರಿಗಿರಲಿಲ್ಲ. ಈ ಹಿಂಸೆಗಳನ್ನು ಸೋಮೇಂದ್ರನಾಥ ಠಾಕೂರರೂ, ಅವರ ತಮ್ಮ ರವೀಂದ್ರನಾಥ ಠಾಕೂರರೂ, ಅವರ ಜೊತೆಯ ಚಿಕ್ಕವಯಸ್ಸಿನ ಬಾಲಕನೊಬ್ಬನೂ ಅನುಭವಿಸಿ ಅನುಭವಿಸಿ ಪಾಡುಪಡುತ್ತಿದ್ದರು.



ಆ ಆಳುಗಳಲ್ಲಿ ಶ್ಯಾಮನೆಂಬವನೊಬ್ಬ. ಅವನು ಖುಲ್ನಾ ಡಿಸ್ಟ್ರಿಕ್ಟಿನವನು. ಅವನು ಬಾಲ ರವೀಂದ್ರರನ್ನು ಒಂದು ಸ್ಥಳದಲ್ಲಿ ಕುಳ್ಳಿರಿಸಿ ಅವರ ಸುತ್ತಲೂ ಸೀಮೆಯ ಸುಣ್ಣದಲ್ಲೊಂದು ಗೆರೆಯನ್ನು ಬರೆದು, ಆ ಗೆರೆಯನ್ನು ದಾಟದರೆ ಕೇಡಾಗುವುದೆಂದು ಬೆದರಿಸಿ, ತಾನು ಅಪ್ಪಣೆ ಮಾಡುವವರೆಗೂ ಅವರು ಆ ಗೆರೆಯಿಂದ ಹೊರಗೆ ಬರಕೂಡದೆಂದು ಹೇಳುತ್ತಿದ್ದನು. ರವೀಂದ್ರರು ಆ ಗೆರೆಯನ್ನು ದಾಟಿದರೆ ಏನು ಕೇಡಾಗುವುದೋ, ದೇಹಕ್ಕೆ ಅಪಾಯವೋ ಅಥವಾ ಇನ್ನಾವ ಬಗೆಯ ವಿಪತ್ತೋ, ಎಂದು ಶಂಕಿಸಿ ಭಯಪಟ್ಟು, ಆ ಗೆರೆಯನ್ನು ದಾಟದೆ ಕುಳಿತಿರುತ್ತಿದ್ದರು. ಆ ಭಯಕ್ಕೆ ಅವರು ರಾಮಾಯಣವನ್ನು ಕೇಳಿದ್ದುದೇ ಕಾರಣ. ಅದೇ ಕೊಠಡಿಯಲ್ಲಿ ಪ್ರತಿ ದಿನವೂ ಸಾಯಂಕಾಲದ ಹೊತ್ತು ಆಳುಗಳಿಗೆಲ್ಲ ಮುಖಂಡನಾದ ವ್ರಜೇಶ್ವರನು ಕೃತಿವಾಸನೆಂಬ ಕವಿಯು ಬಂಗಾಳಿಯಲ್ಲಿ ಬರೆದಿದ್ದ ರಾಮಾಯಣವನ್ನು ಓದುತ್ತಿದ್ದನು. ಬಂಗಾಳಿ ಭಾಷೆಯಲ್ಲಿದ್ದ ಆ ರಾಮಾಯಣವನ್ನು ರವೀಂದ್ರರೂ ಕೇಳುತ್ತಿದ್ದರು. ಒಂದೊಂದು ದಿನ ಕಿಶೋರಿ ಭಟರ್ಜಿ ಎಂಬಾತನು ಅಲ್ಲಿಗೆ ಬಂದು ತಾನು ಕಟ್ಟಿದ್ದ ರಾಮಾಯಣದ ಕವನವನ್ನು ಗಟ್ಟಿಯಾಗಿ ಹೇಳತೊಡಗುವನು. ತಾನು ರಚಿಸಿದ್ದ ಕವನವನ್ನು ಹೇಳುತ್ತ, ಅದರ ಸೊಗಸಿಗೆ ತಾನೇ ತಲೆದೂಗುತ್ತ, ಆತನು ಹರ್ಷಿಸುವನು. ಕೃತ್ತಿವಾಸ ಕವಿಯ ರಾಮಾಯಣದ ಓದು ನಿಂತು ಹೋಗುವುದು. ಕಿಶೋರಿ ಭಟರ್ಜಿಯು ತನ್ನ ಪದ್ಯಗಳನ್ನು ಒಂದೊಂದಾಗಿ ಹಾಡುತ್ತ, ಅಭಿನಯಕ್ಕೂ ಪ್ರಾರಂಭಿಸಿ, ಕೈ ಕಾಲುಗಳನ್ನು ಕುಣಿಸುತ್ತ, ಕಣ್ಣುಗಳನ್ನು ತಿರುಗಿಸುತ್ತ ಕುಣಿದಾಡುವನು. ರವೀಂದ್ರರನ್ನು ಅವನು 'ದಾದಾಭಾಯಿ' ಎಂದು ಕರೆಯುತ್ತಿದ್ದನು. ರವೀಂದ್ರರ ಧ್ವನಿಯು ಬಹಳ ಇಂಪಾಗಿದ್ದುದರಿಂದ, ಅವರು ಊರಿನಿಂದ ಊರಿಗೆ ಹೋಗುತ್ತಿದ್ದ ನಾಟಕದವರ ಗುಂಪಿಗೆ ಸೇರಿ ಅದನ್ನು ಉಪಯೋಗಿಸುವಂತಿರಲಿಲ್ಲವೇ ಎಂದು ಅವನಿಗೆ ವಿಷಾದ. ರವೀಂದ್ರರು ಮಾತ್ರ ನಾಟಕಕ್ಕೆ ಸೇರಿದ್ದರೆ ಅವರು ಬಹಳ ಪ್ರಸಿದ್ಧರಾಗುತ್ತಿದ್ದರೆಂಬುದು ಅವನ ತೀರ್ಮಾನ. ಅವನ ಪಟ್ಟ ತಲೆಯು ಹೊಳೆಯುತ್ತಿದ್ದುದನ್ನು ಕಂಡ ಹರ್ಷದ ಜೊತೆಗೆ, ರವೀಂದ್ರರಿಗೆ ಈ ಹೊಗಳಿಕೆಯಿಂದಲೂ ಮತ್ತಷ್ಟು ಹರ್ಷ ಉಂಟಾಗುತ್ತಿದ್ದಿತೆಂದು ತೋರುತ್ತದೆ. ಆಳುಗಳಿಂದ ಏಟು ತಿನ್ನುತ್ತಿದ್ದಾಗ, ಒಂದೊಂದು ದಿನವಾದರೂ ಈ ಬಗೆಯ ಮಾತುಗಳು ಕಿವಿಗೆ ಬಿದ್ದರೆ, ಯಾವ ಹುಡುಗನಿಗೆ ತಾನೆ ಸಂತೋಷವಾಗುವುದಿಲ್ಲ? ಕೃತ್ತಿವಾಸನ ರಾಮಾಯಣವನ್ನೂ ಭಟರ್ಜಿಯ ಕವನವನ್ನೂ ಕೇಳಿ ಕೇಳಿ ರವೀಂದ್ರರಿಗೆ ರಾಮಾಯಣದ ಕಥಾಭಾಗಗಳೆಲ್ಲ ಗೊತ್ತಿದ್ದುವು. ಲಕ್ಷ್ಮಣನು ಗೆರೆಯನ್ನು ಹಾಕಿ, ಸೀತಾದೇವಿ ಅದನ್ನು ದಾಟಕೂಡದೆಂದು ಹೇಳಿ ಹೋಗಿದ್ದುದು, ಸಂನ್ಯಾಸಿ ವೇಷದ ರಾವಣನಿಗೆ ಭಿಕ್ಷವನ್ನು ನೀಡಲು ಆಕೆ ಆ ಗೆರೆಯನ್ನು ದಾಟಿ ಬಂದುದು, ರಾವಣನು ಅವಳನ್ನು ಲಂಕೆಗೆ ಸಾಗಿಸಿಕೊಂಡು ಹೋದುದು,



ಅಲ್ಲಿ ಅವಳು ರಾಕ್ಷಸಿಯರ ಮಧ್ಯದಲ್ಲಿ ಕಷ್ಟಪಟ್ಟುದು – ಇವೆಲ್ಲ ಬಾಲ ರವೀಂದ್ರರ ಮನಸ್ಸಿಗೆ ನಾಟಿದ್ದುವು. ಶ್ಯಾಮನು ಸೀಮೆಸುಣ್ಣದಲ್ಲಿ ಬರೆದಿದ್ದ ಗೆರೆಯನ್ನು ದಾಟಿದರೆ ತಮಗೆಲ್ಲಿ ವಿಪತ್ತು ಯಾವ ರೂಪದಲ್ಲಿ ಒದಗಿಬಿಡುವುದೋ – ಎಂದು ತಲ್ಲಣಿಸಿ ಅವರು, ಶ್ಯಾಮನಿಂದ ಅನುಮತಿ ಬರುವವರೆಗೂ ಅನೇಕ ಘಂಟೆಗಳ ಕಾಲ ಗೆರೆಯನ್ನು ದಾಟದೆ ಅಲ್ಲೇ ಇದ್ದು ಬಿಡುವರು.

ಶ್ಯಾಮನು ಅವರ ಸುತ್ತಲೂ ಗೆರೆಯನ್ನು ಬರೆಯುವಾಗ ಒಂದು ಕಿಟಕಿಯ ಬಳಿಯಲ್ಲಿ ಕುಳ್ಳಿರಿಸುತ್ತಿದ್ದುದು ಅವರಿಗೆ ಒಂದು ಉಪಕಾರ. ಏಕೆಂದರೆ, ಅವರು ಎದ್ದುನಿಂತು ಕಿಟಕಿಯ ಹೊರಗೆ ಸ್ವಲ್ಪ ದೂರದಲ್ಲಿ ಕಾಣುತ್ತಿದ್ದ ಕೊಳವನ್ನು ನೋಡಿ ಸಂತೋಷಪಡಲು ಅದರಿಂದ ಅವಕಾಶ. ಆ ಕೊಳಕ್ಕೆ ಹೋಗುವ ಮೆಟ್ಟಲುಗಳನ್ನು ನೋಡಿದರೆ ಅವರಿಗೊಂದು ಸಂತೋಷ. ಅದರ ಪಶ್ಚಿಮದಲ್ಲಿದ್ದ ದೊಡ್ಡ ಆಲದ ಮರವನ್ನೂ, ದಕ್ಷಿಣದಲ್ಲಿ ಇದ್ದ ತೆಂಗಿನ ಮರಗಳ ಸಾಲನ್ನೂ ನೋಡಿ ನೋಡಿ ಅವರು ಹರ್ಷಿಸುತ್ತಿದ್ದರು. ತಮ್ಮ ಸುತ್ತಲೂ ಶ್ಯಾಮನು ಬರೆದಿದ್ದ ಗೆರೆಯನ್ನು ದಾಟುವುದಕ್ಕಿಲ್ಲದ ಹಿಂಸೆಯೇ ಆಗ ಅವರ ಮನಸ್ಸಿನಿಂದ ಮಾಯವಾಗಿ, ಅವರು ಚಿತ್ರದ ಪುಸ್ತಕವನ್ನು ನೋಡಿದಷ್ಟು ಸಂತೋಷದಿಂದ ಕಿಟಕಿಯಿಂದ ಹೊರಗೆ ಕಾಣುತ್ತಿದ್ದ ನೋಟವನ್ನು ನೋಡುತ್ತಿದ್ದರು. ಅದನ್ನು ನೋಡಿ ನೋಡಿ, ನೆರೆಯವರಲ್ಲಿ ಯಾರು ಯಾರು ಯಾವ ಯಾವ ಹೊತ್ತಿಗೆ ಕೊಳಕ್ಕೆ ಸ್ನಾನಕ್ಕೆ ಬರುತ್ತಿದ್ದರೆಂಬುದನ್ನು ಕೂಡ ಅವರು ಖಚಿತವಾಗಿ ಅರಿತಿದ್ದರು. ಹಾಗೆ ಬಂದವರಲ್ಲಿ ಯಾರು ಹೇಗೆ ಸ್ನಾನ ಮಾಡುವರೆಂಬುದನ್ನೂ ಅವರು ಚೆನ್ನಾಗಿ ಗೊತ್ತುಮಾಡಿಕೊಂಡಿದ್ದರು. ಅದನ್ನು ಅವರು ಹೀಗೆ ವರ್ಣಿಸಿದ್ದಾರೆ : ''ಒಬ್ಬರು ತಮ್ಮ ಕಿವಿಗಳನ್ನು ಬೆರಳುಗಳಿಂದ ಮುಚ್ಚಿಕೊಂಡು, ಬೇಗ ಮೂರುಸಲ ಮುಳುಗುಹಾಕಿ ಹೊರಟುಹೋಗುತ್ತಿದ್ದರು. ಮತ್ತೊಬ್ಬರು ನೀರಿನಲ್ಲಿ ಮುಳುಗು ಹಾಕಲು ಹೆದರಿ, ತಮ್ಮ ಒದ್ದೆಯ ಚೌಕವನ್ನು ನೀರಿನಲ್ಲಿ ಅದ್ದಿ ಅದ್ದಿ ತಮ್ಮ ತಲೆಯಮೇಲೆ ಹಿಂಡಿಕೊಂಡು, ಅದರಿಂದ ಬಿದ್ದ ನೀರಿನಿಂದಲೇ ಸ್ನಾನವನ್ನು ಮುಗಿಸಿ ತೃಪ್ತಿಪಟ್ಟುಕೊಳ್ಳುತ್ತಿದ್ದರು. ಮತ್ತೊಬ್ಬರು ನೀರಿನಲ್ಲಿಳಿದು, ಅದರ ಮೇಲೆ ತೇಲುತ್ತಿದ್ದ ಕಶ್ಮಲವನ್ನೆಲ್ಲ ಕೈಗಳಿಂದ ಆ ಕಡೆಗೆ ಈ ಕಡೆಗೆ ತಳ್ಳಿ ಅವು ಮತ್ತೆ ತೇಲಿಬಂದು ಸೇರುವಷ್ಟರಲ್ಲಿ

ತಟಕ್ಕನೆ ಮುಳುಗುಹಾಕಿ ಮೇಲಕ್ಕೆ ಬರುವರು. ಮಗದೊಬ್ಬರು ಕೊಳದಮೇಲಿನ ಮೆಟ್ಟಲಿನಿಂದ ಯಾವ ಸಿದ್ಧತೆಯೂ ಇಲ್ಲದೆ ಒಮ್ಮಿಂದೊಮ್ಮೆಗೇ ನೀರಿಗೆ ಹಾರಿಬಿಡುವರು. ಇನ್ನೊಬ್ಬರು ನಿಧಾನವಾಗಿ ಹೆಜ್ಜೆಯಮೇಲೆ ಹೆಜ್ಜೆಯನ್ನಿಡುತ್ತ, ಪ್ರಾತಃಕಾಲದ ಸ್ತೋತ್ರ ಪಾಠವನ್ನು ಮೆಲ್ಲಗೆ ಹೇಳಿಕೊಳ್ಳುತ್ತ ನಡೆಯುವರು. ಮತ್ತೂ ಒಬ್ಬರು ಬಹಳ ಆತುರವಾಗಿ ಕೊಳಕ್ಕೆ ಬಂದು ಸ್ನಾನ ಮಾಡಿದೊಡನೆಯೇ ಬೇಗ ಒದ್ದೆಯಲ್ಲಿ ಮನೆಗೆ ತೆರಳುವರು. ಇನ್ನೊಬ್ಬರು ಆತುರವೇನೂ ಇಲ್ಲದೆ, ತೀರ ನಿಧಾನವಾಗಿ ಸ್ನಾನ ಮಾಡಿ, ಸಾವಕಾಶವವಾಗಿ ಮೈ ಕೈ ಉಜ್ಜಿಕೊಂಡು ಚೊಕ್ಕಟವಾಗಿ ಸ್ನಾನಮಾಡಿ ಒದ್ದೆಯ ಬಟ್ಟೆಯನ್ನು ಬಿಚ್ಚಿ ಒಣಗಿದ ಮಡಿಬಟ್ಟೆಯನ್ನುಟ್ಟು ತೋಟದಲ್ಲಿ ಒಂದೆರಡು ಸಲ ಸುತ್ತಾಡಿ, ಹೂಗಳನ್ನು ಕೊಯ್ದುಕೊಂಡು, ಅವರು ಸ್ನಾನ ಮಾಡಿದ್ದ ಸೌಖ್ಯವು ಅವರನ್ನು ನೋಡಿದವರ ಮನಸ್ಸಿಗೆಲ್ಲ ವ್ಯಾಪಿಸುವಂತೆ ಸೊಗಸಿನಿಂದ ಮನೆಗೆ ಹಿಂತಿರುಗುವರು. ಮಧ್ಯಾಹ್ನದವರೆಗೂ ಜನರು ಹೀಗೆ ಸ್ನಾನ ಮಾಡುವರು. ಆ ಬಳಿಕ ಕೊಳದ ಬಳಿಗೆ ಯಾರೂ ಸುಳಿಯುತ್ತಿರಲಿಲ್ಲ.'' ರವೀಂದ್ರರು ಶ್ಯಾಮನು ಹಾಕಿದ್ದ ಗೆರೆಯನ್ನು ದಾಟುವು ದಕ್ಕಿಲ್ಲದಾಗ ಕಿಟಕಿಯಿಂದಾಚೆಗೆ ಕೊಳದ ಬಳಿಯಲ್ಲಿ ಏನೇನು ನಡೆಯುತ್ತಿದ್ದಿತೆಂಬುದನ್ನು ಬೇಸರವಿಲ್ಲದೆ ನೋಡಿ ನೋಡಿ ಹರ್ಷಿಸುತ್ತಿದ್ದರು. ಆದಕಾರಣ, ಅವನ ಅಪಕಾರವೂ ಅವರಿಗೆ ಉಪಕಾರವೇ ಆಯಿತು.

ತಾವು ನೋಡಿಕೊಳ್ಳಬೇಕಾಗಿದ್ದ ಮಕ್ಕಳನ್ನು ಬೆದರಿಕೆ ಯಲ್ಲಿಟ್ಟು ಹಿಂಸೆಮಾಡುತ್ತಿದ್ದರೆ, ಅವು ತೊಂದರೆಪಡಿಸು ವುದಿಲ್ಲವೆಂದು ಯೋಚಿಸಿ ಶ್ಯಾಮನೇ ಮುಂತಾದ ಆಳುಗಳು ಹಾಗೆ ಕಿರುಕುಳಕೊಡುತ್ತಿದ್ದರೆಂದು ತೋರುವುದು. ದೇವೇಂದ್ರನಾಥ ಠಾಕೂರರು ಮನೆಯಲ್ಲಿ ಇರುತ್ತಲೇ ಇರಲಿಲ್ಲ, ಅವರ ಹಿರಿಯ ಮಗನೂ ವೇದಾಂತ ಗ್ರಂಥಗಳಲ್ಲಿ ನಿರತನಾಗಿರುತ್ತಿದ್ದರೇ ಹೊರತು, ತಮ್ಮ ತಮ್ಮಂದಿರನ್ನು ಆಳುಗಳು ಹೇಗೆ ನೋಡಿಕೊಳ್ಳು ತ್ತಿದ್ದರೆಂಬುದಕ್ಕೆ ಗಮನ ಕೊಡುತ್ತಿರಲಿಲ್ಲ, ಇದರಿಂದ ಆಳುಗಳಿಗೆ ನಿರಾತಂಕ ವಾಯಿತು. ಮಕ್ಕಳನ್ನು ನೋಡಿಕೊಳ್ಳುವ ಹೊರೆಯೆಲ್ಲ ತಮ್ಮ ಮೇಲೆ ಬಿದ್ದ ಬೇಸರವೂ, ಅವರ ಕ್ರೂರ ವರ್ತನೆಗೆ ಕಾರಣವಾಯಿತು. ಶ್ಯಾಮ ಮುಂತಾದ ಕೆಲವರ ಸ್ವಭಾವವೂ ದಯೆಯಿಲ್ಲದ ವಕ್ರ ಸ್ವಭಾವವಾಗಿರಬೇಕು. ಏಕೆಂದರೆ, ಬಾಲ ರವೀಂದ್ರರೂ ಮತ್ತು ಅವರ ಜೊತೆಯವರೂ ತಮ್ಮನ್ನು ಶಿಕ್ಷೆ ಮಾಡಬೇಕಾಗುವಂತೆ ಎಂದೂ ನಡೆದು ಕೊಂಡವರಲ್ಲ, ಅವರು ಆದಷ್ಟು ನಯವಾಗಿಯೇ ನಡೆದು ಕೊಳ್ಳುತ್ತಿದ್ದರು. ಹಾಗಿದ್ದೂ ಅವರನ್ನು ಹೊಡೆಯುವುದು, ಗುದ್ದುವುದು, ಅವರ ಕಿವಿಗಳನ್ನು ಹಿಂಡುವುದು, ಮುಂತಾದ ರೀತಿಗಳಲ್ಲಿ ಹಿಂಸೆ ಮಾಡಬೇಕಾದರೆ, ಆಳುಗಳ ವಕ್ರ ಸ್ವಭಾವವೇ ಅದಕ್ಕೆ ಕಾರಣವಾಗಿರಬೇಕು. ಆಳುಗಳು ಸದಾ ಹಿಂಸೆ ಮಾಡುತ್ತಿರಲಿಲ್ಲ, ಆಗಾಗ ಅವರು ರಾಮಾಯಣ ಮಹಾಭಾರತಗಳ ಕಥೆಗಳನ್ನೂ, ಇತರ ಕಥೆಗಳನ್ನೂ ಹೇಳುತ್ತಿದ್ದರು; ಮಕ್ಕಳನ್ನು ಆಡಿಸುತ್ತಿದ್ದರು. ಆಳುಗಳೂ ತಮ್ಮನ್ನು ಆಗಾಗ ಹಿಂಸಿಸುತ್ತಿದ್ದರೂ ಸಹ, ಮನೆಯವರು ತಮ್ಮನ್ನು ನೋಡಿಕೊಳ್ಳುವುದರಲ್ಲಿ ಮಿತಿಮೀರಿದ ಆಸಕ್ತಿ ವಹಿಸದಿದ್ದ ಕಾರಣ, ತಮ್ಮ ಪಾಡಿಗೆ ತಾವು ಸ್ವತಂತ್ರರಾಗಿ ವರ್ತಿಸುವುದಕ್ಕೆ ಸರಾಗವಾಯಿತೆಂದು ರವೀಂದ್ರರೇ ಸೂಚಿಸಿದ್ದಾರೆ.

ಬಾಲ ರವೀಂದ್ರರನ್ನೂ, ಅವರ ಜೊತೆಯವರನ್ನೂ ನೋಡಿಕೊಳ್ಳಲು ನೇಮಕವಾಗಿದ್ದ ಮತ್ತೊಬ್ಬ ಆಳು ವ್ರಜೇಶ್ವರ. ಅವನು ಶುಚಿಯಾಗಿರುವುದರಲ್ಲಿ ಬಹಳ ಕಟ್ಟುನಿಟ್ಟು. ಅವನು ಸ್ನಾನ ಮಾಡಬೇಕಾದರೆ, ನೀರಿನ ಮೇಲಿನ ಕಶ್ಮಲವನ್ನು ಬಹಳ ಎಚ್ಚರಿಕೆಯಿಂದ ಆ ಕಡೆಗೂ ಈ ಕಡೆಗೂ ತಳ್ಳಿ ತನ್ನ ಕಡೆಗೆ ಒಂದು ಕಸದ ಅಥವಾ ಪಾಚಿಯ ತುಂಡಾದರೂ ತೇಲಿಬರುವ ಮೊದಲೇ ಸ್ನಾನ ಮಾಡಿ ಬರುತ್ತಿದ್ದನು. ಅವನು ತನ್ನ ಕೈಯನ್ನು ಮೈಗೆ ಸೋಕದಂತೆ ವಾಲಿಸಿಕೊಂಡು ನಡೆಯುತ್ತಿದ್ದುದನ್ನು ಕಂಡು, ತಾನೇ ಒಗೆದು ಧರಿಸಿದ್ದ ಬಟ್ಟೆಗಳಿಂದ ಕೂಡ ತನ್ನ ಮೈಗೆ ಕೊಳೆಯು ಅಂಟಬಿಡುವುದೇನೋ ಎಂದು ಭಾವಿಸಿದ್ದಂತೆ ಬಾಲ ರವೀಂದ್ರರಿಗೆ ತೋರುತ್ತಿದ್ದಿತು. ಅವನ ಮಡಿಯಂತೂ ಬಹಳ ಹೆಚ್ಚು. ತಾನು ಸ್ನಾನಮಾಡಿ ಬಂದರೆ, ನೆಲದಮೇಲೆ ನಡೆದುಬಂದರೇ ತನಗೆ ಮೈಲಿಗೆ ಎಂದು ತೋರುವಂತೆ ಅವನು ಮುಖವನ್ನು ಗಂಟಿಕ್ಕಿ ನಡೆದುಬರುತ್ತಿದ್ದನು. ಮಕ್ಕಳ ತಟ್ಟೆಗಳಿಗೆ ರೊಟ್ಟಿಗಳನ್ನು ಹಾಕಿದರೆ ಮೈಲಿಗೆಯಾದೀತೆಂದು ಬಹಳ ಮೇಲಿನಿಂದ ಎತ್ತಿಹಾಕುತ್ತಿದ್ದನು. ಅವನು ನಗುವ ಸ್ವಭಾವದವನಾಗಿರಲಿಲ್ಲ. ಬಹಳ ಹಣಗಾರರಾಗಿದ್ದವರ ಮನೆಯಲ್ಲಿ ಕೆಲಸಮಾಡಿ ಯಜಮಾನನ ದುರ್ದಶೆಯ ದೆಸೆಯಿಂದ ದೇವೇಂದ್ರನಾಥ ಠಾಕೂರರ ಮನೆಗೆ ಬಂದಿದ್ದವನು ವ್ರಜೇಶ್ವರ. ಹಿಂದಿನ ವೈಭವದ ಸವಿನೆನಪೂ, ದೇವೇಂದ್ರನಾಥ ಠಾಕೂರರ ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವ ಕೆಲಸವು ತನ್ನ ತೂಕಕ್ಕೆ ತಡೆಯದೆಂಬ ಕರೆ ಕರೆಯೂ ಮನಸ್ಸನ್ನು ಹಿಂಡುತ್ತಿರುವಲ್ಲಿ ಅವನು ನಗುತ್ತಿರುವ ಬಗೆ ಹೇಗೆ? ಅವನ ಮುಖದ ಚರ್ಮವೇ ಜಿಡ್ಡಿಲ್ಲದ ಒಣಚರ್ಮ; ಅವನದು ಉದ್ದವಾದ ಮುಖ; ಯಾವಾಗ ನೋಡಿದರೂ ಸೆಡೆತುಕೊಂಡಿರುತ್ತಿದ್ದುದೇ ಅದರ ಸ್ವಭಾವ. ಆದಕಾರಣ, ಆ ಮುಖದಲ್ಲಿ ನಗೆ ಮಿನುಗಿದರೆ ಒಪ್ಪುತ್ತಲೂ ಇರಲಿಲ್ಲ. ಉದ್ದವಾಗಿ ಒರಟಾಗಿದ್ದ ತಲೆಗೂದಲು; ಕುರುಚು ಗಡ್ಡ; ಕಪ್ಪಗೆ ದಪ್ಪವಾಗಿದ್ದ ಬಲವಾದ ದೇಹ; ವಿಶಾಲವಾದ ಕಣ್ಣುಗಳು; ಗೊಗ್ಗರವಾದ ದೊಡ್ಡ ಧ್ವನಿ. ಕಲ್ಕತ್ತಾ ನಗರದವರಿಗೆ ವಿಲಕ್ಷಣವಾಗಿ ತೋರುತ್ತಿದ್ದ ಹಳ್ಳಿಗಾಡಿನ ಮಾತುಗಳು, ತಾನೆಷ್ಟು ಮುಖ್ಯ ಎಂಬುದನ್ನು ತೋರಿಸಿಕೊಳ್ಳು ವುದಕ್ಕಾಗಿ ಉದ್ದೇಶಿಸಿದ್ದಂತೆ ತೋರುತ್ತಿದ್ದ ಒಂದು ಬಗೆಯ ಎಳೆತದ ಮಾತುಗಾರಿಕೆ; ಹಿಂದೊಮ್ಮೆ ಉಪಾಧ್ಯಾಯ ನಾಗಿದ್ದ ಕಾರಣ,





ಆಗಿನದೇ ಆಗಿದ್ದ ಒಂದು ಬಗೆಯ ದರ್ಪ ಬೇರೆ.

ಹೊರಗೆ ನೋಡುವುದಕ್ಕೇನೊ ವ್ರಜೇಶ್ವರನು ನಗುವುದನ್ನೇ ಮರೆತಿದ್ದ ಕಠಿಣ ಸ್ವಭಾವದವನೆಂದು ತೋರುತ್ತಿದ್ದರೂ, ಅವನ ಮನಸ್ಸು ಮಾತ್ರ ಬಹಳ ಮೃದು. ಮಕ್ಕಳನ್ನು ಕಂಡರೆ ಅವನಿಗೆ ಪ್ರೀತಿ. ಅವನು ಬಾಲ ರವೀಂದ್ರರನ್ನಾಗಲಿ, ಅವರ ಜೊತೆಯವರನ್ನಾಗಲಿ ಹಿಂಸಿಸು ತ್ತಿರಲಿಲ್ಲ, ಅವನು ಆದರದಿಂದ ಅವರಿಗೆ ಪುರಾಣಗಳ ಕಥೆ ಗಳನ್ನು ಹೇಳುತ್ತಿದ್ದನು. ಆದರೂ, ಯಾವ ದುರುದ್ದೇಶ ವಿಲ್ಲದಿದ್ದರೂ ವ್ರಜೇಶ್ವರನು ಒಂದು ವಿಚಾರದಲ್ಲಿ ಮಾತ್ರ, ಮಕ್ಕಳ ಅಸಮಾಧಾನಕ್ಕೆ ಪಾತ್ರನಾಗಿದ್ದನು. ಅವನು ಅಫೀಮನ್ನು ಸೇವಿಸುತ್ತಿದ್ದುದರಿಂದ ಅವನಿಗೆ ಹೊಟ್ಟೆಯ ಆತುರವು ಬಹಳ ಹೆಚ್ಚು. ಆದಕಾರಣ, ಮಕ್ಕಳ ಹೊಟ್ಟೆಗೆ ಹೋಗಬೇಕಾಗಿದ್ದ ಆಹಾರವಸ್ತುಗಳಲ್ಲಿ ಹೆಚ್ಚು ಭಾಗವನ್ನು ಅವನು ತಾನೇ ಮಿಗಿಸಿಕೊಳ್ಳುತ್ತಿದ್ದನು. ಬೆಳಗ್ಗೆ ಮಕ್ಕಳಿಗೆ ಹಸುವಿನ ಹಾಲನ್ನು ಕೊಡುವ ಕೆಲಸವು ಅವನದು. ಆಗ ತನಗಾಗಿ ಆದಷ್ಟು ಹಾಲನ್ನು ಮಿಗಿಸಿಕೊಂಡು ತಾನೇ ಅದನ್ನು ಕುಡಿಯುತ್ತಿದ್ದನು. ಮಕ್ಕಳಿಗೆ ಗರಗುರೊಟ್ಟಿ ಮುಂತಾದ ಸಾಮಾನುಗಳನ್ನು ಹಂಚುವ ಕೆಲಸವೂ ಅವನದೇ. ಅವನು ಗರಗುರೊಟ್ಟಿಗಳನ್ನು ಒಂದು ಮರದ ತಟ್ಟೆಯಲ್ಲಿ ಪೇರಿಸಿಟ್ಟು ಕೊಂಡು, ಮಕ್ಕಳಿಗೆ ಒಂದೊಂದು ರೊಟ್ಟಿಯನ್ನೋ ಅಥವಾ ದೇವರು ಒಳ್ಳೆಯ ಮನಸ್ಸು ಕೊಟ್ಟಾಗ ಎರಡೆರಡು ರೊಟ್ಟಿಗಳನ್ನೋ ಅವರವರ ತಟ್ಟೆಗೆ ಹಾಕಿ, ಆ ಬಳಿಕ ಒಂದು ರೊಟ್ಟಿಯನ್ನು ಕೈಯಲ್ಲಿ ಹಿಡಿದು ''ಇನ್ನೂ ಬೇಕೇನು ? ಇನ್ನೂ ಬೇಕೇನು ?'' ಎಂದು ಕೇಳುವನು. ಬೇಡವೆಂದು ಹುಡುಗರು ತನಗೆ ಹೇಳಲೆಂಬುದು ಅವನು ಅವರಿಂದ ಬಯಸುತ್ತಿದ್ದ ಉತ್ತರ. ಅವರೂ ಅದೇ ಉತ್ತರವನ್ನು ಹೇಳುತ್ತಿದ್ದುದು ವಾಡಿಕೆ. ರೊಟ್ಟಿಗಳನ್ನು ತಟ್ಟೆಗಳಿಗೆ ಹಾಕುವಾಗ ಸಹ ಅವನು ''ಹಾಕಬೇಕಾಗಿದೆಯಲ್ಲ!'' ಎಂದು ಕೊರಗುತ್ತಿದ್ದಂತೆ ತೋರುವ ರೀತಿಯಲ್ಲಿ ಹಾಕು ತ್ತಿದ್ದನೆಂದೂ, ''ಇನ್ನೂ ಬೇಕೇನು ?'' ಎಂದು ಕೇಳಿದಾಗ ತಾವುಗಳೂ ಬೇಡವೆಂದ ಮೇಲೆ ತಾವು ಮನಸ್ಸನ್ನು ಮಾರ್ಪಡಿಸಿ ಮತ್ತೆ ಬೇಕೆಂದು ಹೇಳಲು ಅವಕಾಶಕೊಡು ತ್ತಿರಲಿಲ್ಲವೆಂದೂ ರವೀಂದ್ರರೇ ಬರೆದಿದ್ದಾರೆ. ಬೇಡವೆಂದು ಮಕ್ಕಳು ಹೇಳಿದೊಡನೆಯೇ ಅವನು ಅವುಗಳನ್ನು ತನ್ನ

ತಟ್ಟೆಗೆ ಹಾಕಿಕೊಂಡು ತಿನ್ನಲು ಪ್ರಾರಂಭಿಸುತ್ತಿದ್ದುದೇ ಅವನ ಪದ್ಧತಿಯೆಂದು ತೋರುತ್ತದೆ. ಮಕ್ಕಳಿಗೆ ತಿಂಡಿಯ ಸಾಮಾನುಗಳನ್ನು ಕೊಂಡುಕೊಡುವುದಕ್ಕಾಗಿ ಹಿರಿಯರು ವ್ರಜೇಶ್ವರನ ಕೈಯಲ್ಲಿ ಹಣವನ್ನು ಕೊಡುತ್ತಿದ್ದರು. ಆ ಹಣದಲ್ಲಿ ಅಗ್ಗದ ಬೆಲೆಯ ಸಾಮಾನುಗಳನ್ನು ಮಾತ್ರವೇ ಕೊಂಡು ತಂದು ಹಣವನ್ನು ಮಿಗಿಸಬೇಕೆಂಬುದು ಅವನಿಗಿದ್ದ ಆಶೆ. ''ಮಧ್ಯಾಹ್ನದ ಮೇಲೆ ಇವೊತ್ತು ತಿನ್ನಲು ಏನು ಬೇಕು?'' ಎಂದು ಬೆಳಗ್ಗೆಯೇ ಅವನು ಕೇಳುವನು. ಅಗ್ಗದ ಬೆಲೆಗೆ ಬರುವ ಸಾಮಾನನ್ನು ತರಬೇಕೆಂದು ಮಕ್ಕಳು ಕೇಳಿದರೆ ಅವನಿಗೆ ಪರಮ ಸಂತೋಷ. ಆ ಮಕ್ಕಳೂ ಏನನ್ನೂ ಅರಿಯದ ಹಾಲುಗಲ್ಲದ ಹಸುಳೆಗಳು. ಅವನು ಅಗ್ಗದ ಸಾಮಾನು ಗಳನ್ನು ಕೇಳಿದರೆ ಮಾತ್ರವೇ ಭಲಾ ಎಂದು ಬೆನ್ನು ತಟ್ಟಿ, ಅವೇ ಅತ್ಯಂತ ಒಳ್ಳೆಯ ಸಾಮಾನು ಗಳೆಂದು ಹೇಳುತ್ತಿದ್ದನು. ಮಕ್ಕಳು ಅವನ ಮಾತುಗಳನ್ನೇ ನಂಬಿ, ಪುರಿಯನ್ನೋ ಅಥವಾ ಗುಗ್ಗರಿಯನ್ನೋ ಅಥವಾ ಹುರಿದ ನೆಲಗಡಲೆ ಕಾಯಿಗಳನ್ನೋ ತರಹೇಳುತ್ತಿದ್ದುವು. ಅದನ್ನು ಕೇಳಿ ಅವನಿಗೆ ಬಹಳ ಹರ್ಷವಾಗುತ್ತಿದ್ದಿತು. ಆರೋಗ್ಯಕರವಾದ ಅತ್ಯುತ್ತಮವಾದ ಉಪಹಾರದ ವಸ್ತುಗಳೆಂದರೆ ಅವೇ – ಎಂದು ಅವನು ಬೋಧಿಸು ತ್ತಿದ್ದನು. ಮಕ್ಕಳಿಗೆ ಸುಲಭವಾಗಿ ಅರಗದ ಕಡಲೆಯ ಉಸಲಿ, ನೆಲಗಡಲೆಯ ಕಾಯಿಗಳು, ಮುಂತಾದುವು ಗಳನ್ನೇ ಅವನು ಸಾಮಾನ್ಯವಾಗಿ ತಂದು ತಿನ್ನಿಸುತ್ತಿದ್ದನು.

ಹೀಗೆ ಅಜೀರ್ಣದ ಸಾಮಾನುಗಳನ್ನು ತಿನ್ನಿಸಿದರೂ, ಮನೆಯಲ್ಲಿ ರೊಟ್ಟಿ ಮುಂತಾದುವುಗಳನ್ನು ಹಂಚುವಾಗ ಕಡಮೆಯಾಗಿಯೇ ಕೊಟ್ಟು ಹೊಟ್ಟೆ ತುಂಬದಂತೆ ಮಾಡಿದರೂ ಬಾಲ ರವೀಂದ್ರರ ಆರೋಗ್ಯವು ಸ್ವಲ್ಪವೂ ಕೆಡಲಿಲ್ಲ. ತಾವು ಬಯಸಿದಷ್ಟು ಹೆಚ್ಚಿನ ಪರಿಮಾಣದಲ್ಲಿ ಮನಸ್ಸಿಗೆ ತೃಪ್ತಿಯಾಗುವ ಮಟ್ಟಿಗೆ ತಿನ್ನುತ್ತಿದ್ದ ಮಕ್ಕಳಿಗಿಂತ ಅವರೇ ಬಲವಾಗಿದ್ದರು. ಅವರು ಪೂರ್ಣಾರೋಗ್ಯ ದಿಂದಿದ್ದರೆಂದೇ ಹೇಳಬಹುದು. ಅಜೀರ್ಣದಿಂದ ಹೊಟ್ಟೆನೋವು ಬಂದುದನ್ನು ಅವರು ಎಂದೂ ಅನುಭವಿಸಿರಲಿಲ್ಲ. ಗುಗ್ಗರಿ ಮುಂತಾದುವನ್ನೂ ಅವರು ಅರಗಿಸಿಕೊಳ್ಳುತ್ತಿದ್ದರು. ಅವರಿಗೆ ಒಂದು ದಿನವೂ ನೆಗಡಿ ಯಾದುದೂ ಇಲ್ಲ. ನೆಗಡಿಯಾಗಲೆಂದು ಬಯಸಿ ಅವರು ಮೈಯನ್ನೆಲ್ಲ ನೀರಿನಲ್ಲಿ ನೆನೆಯಿಸಿ, ಒದ್ದೆಯ ಅಂಗಿಯನ್ನೂ ಒದ್ದೆಯ ಷರಾಯಿ ಮತ್ತು ಒದ್ದೆಯ ಕಾಲುಚೀಲಗಳನ್ನೂ ಹಾಕಿಕೊಂಡರೂ ಸಹ ತಮಗೆ ನೆಗಡಿಯಾದುದನ್ನು ಕಂಡರಿಯರು. ಚಳಿಗಾಲದಲ್ಲಿ ಅವರು ಇಬ್ಬನಿಗೆ ಮೈಯೊಡ್ಡಿ ಮಲಗಿಬಿಡುತ್ತಿದ್ದರು. ಅವರ ತಲೆಯ ಕೂದಲೂ ಬಟ್ಟೆಗಳೂ ಒದ್ದೆಯಾಗುತ್ತಿದ್ದುವು. ಆದರೂ ಅವರಿಗೆ ಕೆಮ್ಮು ಬರುತ್ತಿರಲಿಲ್ಲ. ವ್ರಜೇಶ್ವರನು ಅವರಿಗೆ ಸ್ವಲ್ಪವೇ ತಿಂಡಿಯನ್ನು ಕೊಡುತ್ತಿದ್ದುದೂ ಒಂದು ಉಪಕಾರವಾಗಿ ಪರಿಣಮಿಸಿತು. ಅದರಿಂದ ಅವರು ಆರೋಗ್ಯವಾಗಿರಲು ಸಹಾಯವಾಯಿತು. ಅವರಿಗೆ ಜ್ವರ ಬರುತ್ತಿದ್ದುದು ಕೂಡ ಬಹಳ ವಿರಳವಾಗಿ ಮಾತ್ರ. ಅದರ ವಿಷಯವನ್ನು ಅವರೇ ಬಹಳ ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ಅವರು ಹೇಳಿರುವು ದೇನೆಂದರೆ : ''ನನಗೇನಾದರೂ ಒಂದು ವೇಳೆ ಜ್ವರ ಬಂದರೆ, ಯಾರೂ ಅದನ್ನು ಜ್ವರವೆಂದು ಕರೆಯುತ್ತಿರಲಿಲ್ಲ. ಮೈ ಬೆಚ್ಚಗಾಗಿದೆಯೆಂದು ಮಾತ್ರವೇ ಹೇಳುತ್ತಿದ್ದರು.



ಆಗಿನ ಕಾಲದಲ್ಲಿ ನಾನು 'ಥರ್ಮಾಮೀಟರ್' ಎಂಬುದನ್ನೇ ಕಂಡುದಿಲ್ಲ. ವೈದ್ಯ ನೀಲಮಾಧವರು ಬರುತ್ತಿದ್ದರು. ಅವರು ನನ್ನ ಮೈ ಮುಟ್ಟಿನೋಡಿ ಮೊದಲನೆಯ ದಿನ ನನಗೆ ಹರಳೆಣ್ಣೆಯನ್ನು ಕುಡಿಸಿ ಉಪವಾಸ ಮಾಡಬೇಕೆಂದು ಹೇಳುವರು. ಅದೇ ಅವರ ಚಿಕಿತ್ಸೆ. ಒಂದೆರಡು ಏಲಕ್ಕಿ ಕಾಯಿಗಳನ್ನು ಬಿಡಿಸಿ ಪುಡಿಮಾಡಿ ಹಾಕಿದ ಬಿಸಿನೀರನ್ನು ಕುಡಿಯಬಹುದೆಂದು ಹೇಳುವರು. ಈ ಉಪವಾಸವೂ ಚಿಕಿತ್ಸೆಯೂ ಮುಗಿದ ಮೇಲೆ ಮೂರನೆಯ ದಿನ ಅನ್ನ ಹಾಕಿದರೆ, ಅದು ಸ್ವರ್ಗಲೋಕದಿಂದ ಬಂದಿದ್ದಂತೆ ರುಚಿಯಾಗಿ ತೋರುತ್ತಿದ್ದಿತು; ದೇವತೆಗಳಿಗೆ ಯೋಗ್ಯವಾದ ಆಹಾರವೆಂದು ತೋರುತ್ತಿದ್ದಿತು. ಹೆಚ್ಚು ಕಾಲ ಜ್ವರದಿಂದ ನಾನು ನರಳಿಯೇ ಇಲ್ಲ. ಮಲೇರಿಯಾ ಜ್ವರದ ಹೆಸರನ್ನೇ ನಾನು ಕೇಳಿರಲಿಲ್ಲ. ಕ್ವಿನೈನು ತೆಗೆದುಕೊಂಡ ನೆನಪೇ ನನಗಿಲ್ಲ. ಹರಳೆಣ್ಣೆಯು ಮಾತ್ರ ನಾನು ಕುಡಿಯಲಾರದ ಔಷಧವಾಗಿ ಬಾಲ್ಯದಲ್ಲಿ ಅನೇಕವೇಳೆ ಅದನ್ನು ಕುಡಿದಿದ್ದೇನೆ. ಶಸ್ತ್ರಚಿಕಿತ್ಸೆಯನ್ನಂತೂ ನಾನು ಎಂದೂ ಪಡೆದುದಿಲ್ಲ. ಇವೊತ್ತಿನವರೆಗೂ ನನಗೆ ದಡಾರವಾಗಲಿ ಅಥವಾ ಸೀತಾಳ ಸಿಡುಬಾಗಲಿ ಎದ್ದುದಿಲ್ಲ. ಬಾಲ್ಯದಲ್ಲಿ ನನ್ನ ದೇಹವು ಪೂರ್ಣಾರೋಗ್ಯದಿಂದಿದ್ದಿತು. ನನ್ನಷ್ಟು ಆರೋಗ್ಯವಾಗಿ ತಮ್ಮ ಮಕ್ಕಳೂ ಇರಬೇಕೆಂದೂ ರೋಗದ ನೆವ ಹೇಳಿ ಉಪಾಧ್ಯಾಯನ ಕೈಯಿಂದ ತಪ್ಪಿಸಿ ಕೊಳ್ಳುವುದು ತಮ್ಮ ಮಕ್ಕಳಿಗೆ ಸಾಧ್ಯವಿರಬಾರದೆಂದೂ ಬಯಸುವ ತಾಯಿಯರು ವ್ರಜೇಶ್ವರನ ಹಾಗಿರುವ ಸೇವಕನನ್ನು ಹುಡುಕಿ ನೇಮಿಸಬೇಕು. ಅವನು ಆಹಾರದ ವೆಚ್ಚವನ್ನೂ ಕಡಮೆ ಮಾಡುವನು. ಅಲ್ಲದೆ ಈಗಿನ ದಿನಗಳಲ್ಲಿ ಮಿಷನ್ ಹಿಟ್ಟೂ ಬೆರಕೆ ತುಪ್ಪವೂ ಬಳಕೆ ಯಲ್ಲಿರುವುದರಿಂದ ಹೆಚ್ಚಾಗಿ ತಿಂದರೆ ರೋಗ ಬರುವ ಕಾರಣ, ಅದಕ್ಕೆ ಅವಕಾಶವನ್ನೇ ಅವನು ತಪ್ಪಿಸಿ ವೈದ್ಯರಿಗೆ ಕೊಡುವ ಹಣವನ್ನೂ ಅವನು ಉಳಿಸುವನು.''

ಮಕ್ಕಳಿಗೆ ದೆವ್ವಗಳ ಕಥೆಗಳನ್ನು ಹೇಳಿ ಅವುಗಳ ಮನಸ್ಸಿನಲ್ಲಿ ಭಯದ ಸಸಿಯನ್ನು ಬೆಳೆಯಿಸುವುದು ಆಳುಗಳ ವಾಡಿಕೆ. ಆಳುಗಳು ಮಕ್ಕಳನ್ನು ನೋಡಿಕೊಳ್ಳುವವರೆಲ್ಲರ ಮನೆಯ ಅನುಭವವೂ ಅದೇ. ಮಕ್ಕಳ ಮನಸ್ಸಿನ ಮೇಲೆ ಅದರಿಂದ ಬಹಳ ಕೆಟ್ಟ ಪರಿಣಾಮವುಂಟಾಗುತ್ತದೆ; ಕಾರಣವಿಲ್ಲದೆಯೇ ಹೆದರಿಕೊಳ್ಳುವ ಗುಣವು ಮಕ್ಕಳಲ್ಲಿ ವೃದ್ಧಿಯಾಗುತ್ತದೆ. ದೆವ್ವಗಳ ಸುಳ್ಳು ಕಥೆಗಳನ್ನು ಕೇಳುವುದು ರವೀಂದ್ರರಿಗೂ ತಪ್ಪಲಿಲ್ಲ. ಆಳುಗಳು ದೆವ್ವಗಳ ಕಥೆಗಳನ್ನು ಹೇಳಿ ಮಕ್ಕಳ ಎದೆಯನ್ನು ನಡುಗಿಸಿಬಿಡುತ್ತಿದ್ದರು. ದೆವ್ವಗಳ ಕಥೆಗಳನ್ನೇನೊ ಮಕ್ಕಳು ಆಶೆಯಿಂದ ಕೇಳಿದರೂ, ಆಳುಗಳ ಕೊಠಡಿಯಿಂದ ತಮ್ಮ ತಾಯಿಯವರಿದ್ದ ಕೊಠಡಿಗೆ ಹೋಗುವುದಕ್ಕೆ ಕೂಡ ಮಕ್ಕಳಿಗೆ ಭಯ. ಕಿಟಕಿಗಳು ಹೆಚ್ಚಾಗಿಲ್ಲದೆ ಕೊಂಚ ಕತ್ತಲೆಯಾಗಿರುವ ಕೊಠಡಿಗಳಲ್ಲಿ ದೆವ್ವಗಳಿರುವುವೆಂಬ ನಂಬಿಕೆ; ಅದಕ್ಕೆ ಕಾರಣ, ಆಳುಗಳು ಉಪ್ಪುಕಾರ ಹಚ್ಚಿ ಹೇಳುತ್ತಿದ್ದ ದೆವ್ವಗಳ ಕಥೆಗಳು. ಆ ಮಕ್ಕಳೂ ಆ ಕೊಠಡಿಗಳಿಗೆ ಹೋಗಲು ದಿಗಿಲು. ಗುಹೆಯಂತಿರುವ ದೊಡ್ಡ ಬಾಯಿಗಳೂ ಮೊರಗಳಂತಿರುವ ಕಿವಿಗಳೂ ಇರುವ ದೆವ್ವಗಳು ಎದೆಯಮೇಲಿರುವ ವಿಕಾರವಾದ ಕಣ್ಣುಗಳಿಂದ ನೋಡುತ್ತ, ಹೆಜ್ಜೆಗಳು ಹಿಂದಕ್ಕೆ ತಿರುಗಿದ್ದ ಸೊಟ್ಟ ಕಾಲುಗಳಿಂದ ಆ ಕೊಠಡಿಗಳಲ್ಲಿ ಓಡಾಡುತ್ತಿದ್ದಂತೆ ಆ ಮಕ್ಕಳಿಗೆ ಭಾವನೆ. ದೆವ್ವಗಳ ಕಥೆಗಳನ್ನು ಕೇಳಿ ದೆವ್ವಗಳ ಘೋರವಾದ ಆಕಾರಗಳನ್ನು ಮನಸ್ಸಿನೆದುರಿಗೆ ಕಲ್ಪಿಸಿ ಕೊಂಡು, ಬಾಲ ರವೀಂದ್ರರಿಗೆ ಬಹಳ ಭಯವಾಗು ತ್ತಿದ್ದಿತು. ಅವರು ''ಈ ದೆವ್ವಗಳ ಆಕಾರಗಳನ್ನು ನನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡಿರುತ್ತಿದ್ದ ಕಾರಣ, ಮನೆಗೆ ಸೇರಿದ್ದ ಕೈತೋಟಕ್ಕೆ ಹೋದರೆ ಕೂಡ, ದಿಗಿಲಿನಿಂದ ನನ್ನ ಎದೆಯು ಡವಗುಟ್ಟುತ್ತಿದ್ದಿತು. ಕಾಲುಗಳು ನಡುಗುತ್ತಿದ್ದುವು'' ಎಂದು ಹೇಳಿದ್ದಾರೆ. ಹೆಣ್ಣು ದೆವ್ವ ಹೂವೀಳೆಯ ಮಾಡಿ ದೊಡ್ಡ ''ಕಂಚು'' ಕೊಟ್ಟ ಕಥೆ, ಕಾಲುಗಳನ್ನೇ ಸೌದೆ ಗಳಂತೆ ಒಲೆಗಿಟ್ಟು ಉರಿಸಿ ಅಡಿಗೆ ಮಾಡುತ್ತಿದ್ದ ಕಥೆ, ಮುಂತಾದ ಹಾಳು ಕಥೆಗಳಿಂದ ನಮ್ಮ ದೇಶದ ಮಕ್ಕಳ ಕೋಮಲವಾದ ಮನಸ್ಸಿನಮೇಲೆ ಉಂಟಾಗುವ ಕೆಟ್ಟ ಪರಿಣಾಮವನ್ನು ವರ್ಣಿಸಲಳವಲ್ಲ. ಧನಿಕರ ಮನೆಯ ಮಕ್ಕಳಿಗೆ ದೆವ್ವಗಳ ಕಾಟ; ಬಡವರ ಮನೆಯ ಮಕ್ಕಳಿಗೆ ಗುಮ್ಮನ ಕಾಟ. ಹಣಗಾರರ ಮಕ್ಕಳನ್ನು ದೆವ್ವಗಳ ಕಥೆಯಿಂದ ಆಳುಗಳು ಹೆದರಿಸಿದರೆ, ಬಡವರ ಮನೆಗಳಲ್ಲಿ ಮಕ್ಕಳನ್ನು ಗುಮ್ಮ ಹಿಡಿದುಕೊಂಡು ಹೋಗುವನೆಂದು ತಾಯಿಯರೇ ಹೆದರಿಸುತ್ತಾರೆ.

*(ಬೆಂಗಳೂರಿನ ಸತ್ಯಶೋಧನ ಪುಸ್ತಕ ಭಂಡಾರ ೧೯೫೨ರಲ್ಲಿ ಪ್ರಕಟಿಸಿದ, ಸಿ. ಕೆ. ವೆಂಕಟರಾಮಯ್ಯ ಅವರ, 'ಗುರುದೇವ' ಕೃತಿಯ ಎರಡನೇ ಅಧ್ಯಾಯದ ಆಯ್ದಭಾಗ. ಈ ಪುಸ್ತಕ ನವಕರ್ನಾಟಕ ಪ್ರಕಾಶನದಿಂದ ಮರುಮುದ್ರಣ ಗೊಳ್ಳಲಿದೆ.)*



# 'ಎಂಡೋಸಲ್ಫಾನ್' ಎಂಬ ಅಸಾಮ ಬಿನ್ ಲಾಡೆನ್



*ಅಲ್ ಖಾಯ್‌ದಾ ಸಂಘಟನೆಯ ಹಾಗೆ ಇದೂ ವಿಮಾನದ ಮೂಲಕವೇ ಭಯೋತ್ಪಾತದ ವಿಕಾರ ಮುಖಗಳನ್ನು ಪ್ರದರ್ಶಿಸಿತು. ಒಸಾಮಾ ಬಿನ್ ಲಾಡೆನ್‌ನ ಹತ್ಯೆಯಾದ ಸಂದರ್ಭದಲ್ಲೇ ಇದಕ್ಕೂ ಜಾಗತಿಕ ನಿಷೇಧ ಹಾಕಲಾಯಿತು. ಅದರ ಹಾಗೆ ಇದೂ ಇನ್ನು ಹತ್ತಾರು ವರ್ಷಗಳವರೆಗೆ ತನ್ನ ವಿಷದ ಪ್ರಭಾವವನ್ನು ತೋರಿಸುತ್ತಲೇ ಇರುತ್ತದೆ. ಇದರ ಹೆಸರು ಎಂಡೊಸಲ್ಫಾನ್. ಇದೊಂದು 'ಅವಿನಾಶಿ ಸಾವಯವ ಮಲಿನಕಾರಕ' – ಅಸಾಮ.*

*– ನಾಗೇಶ ಹೆಗಡೆ*

**ನಾಗೇಶ ಹೆಗಡೆ**

**ಆ**ಕಾಶದಲ್ಲಿ ವಿಮಾನ ಹಾರುತ್ತಿದೆ ಎಂದರೆ ಹಳ್ಳಿಯ ಮಕ್ಕಳಿಗೆ ಖುಷಿಯೋ ಖುಷಿ. ೧೯೮೦ರಲ್ಲಿ ಕಾಸರಗೋಡು ಜಿಲ್ಲೆಯ ಪಡ್ರೆ ಎಂಬ ಊರಿನ ಮಕ್ಕಳೂ ವಿಮಾನ ಬಂದಾಗಲೆಲ್ಲ ಚಪ್ಪಾಳೆ ತಟ್ಟಿ ತಟ್ಟಿ, ಹಾಡಿ ಕುಣಿಯುತ್ತಿದ್ದರು. ತಾಯಂದಿರೂ ರಚ್ಚೆ ಹಿಡಿದ ಮಕ್ಕಳನ್ನು ಅಂಗಳಕ್ಕೆ ತಂದು ವಿಮಾನ ತೋರಿಸುತ್ತಿದ್ದರು. ತನ್ನ ಬಾಳಿನ ಕುಡಿಯನ್ನೇ ಹೊಸಕಿ ಹಾಕಲು ವಿಮಾನ ಬರುತ್ತಿತ್ತೆಂದು ಆಗ ಯಾವ ಅಮ್ಮನಿಗೂ ಗೊತ್ತಿರಲಿಲ್ಲ.

ಆಸುಪಾಸಿನ ಗುಡ್ಡಗಳಲ್ಲಿ ಬೆಳೆದ ಗೇರು ಮರಗಳು ಹೂಬಿಟ್ಟಾಗ ಎಂಡೊಸಲ್ಫಾನ್ ಸಿಂಪರಣೆಗೆಂದು ಆಗಾಗ ಅಲ್ಲಿಗೆ ವಿಮಾನ ಬರುತ್ತಿತ್ತು. ಸತತ ಸುಮಾರು ೧೫ ವರ್ಷಗಳವರೆಗೆ ಸಿಂಪರಣೆ ಮಾಡುತ್ತಿದ್ದಂತೆ ಪಡ್ರೆಯ ಕೆಲವರಿಗೆ ಗುಮಾನಿ ಬರತೊಡಗಿತ್ತು. ಊರಿನ ಹಸುಗಳಿಗೆ ಪದೇ ಪದೇ ಗರ್ಭಸ್ರಾವ ಆಗತೊಡಗಿತ್ತು. ಹಳ್ಳಕೊಳ್ಳಗಳ ಬದಿಯಲ್ಲಿ ಕೇರೆ ಹಾವು, ಓತಿಕ್ಯಾತ, ಜೇನ್ನೊಣ, ಹಕ್ಕಿಪಕ್ಷಿಗಳೆಲ್ಲ ಕ್ರಮೇಣ ಕಣ್ಮರೆ ಆಗಿದ್ದವು. ತಮ್ಮ ಊರಿನ ಇಷ್ಟೆಲ್ಲ ಮಕ್ಕಳು ಏಕೆ ವಿಕಲಾಂಗರಾಗಿ, ಬುದ್ಧಿಮಾಂದ್ಯರಾಗಿ ಹುಟ್ಟುತ್ತಿದ್ದಾರೆ, ಏಕೆ ಅಷ್ಟೆಲ್ಲ ಜನರಿಗೆ ಕ್ಯಾನ್ಸರ್ ಕಾಯಿಲೆ ಬರುತ್ತಿದೆ ಎಂದು ಪಡ್ರೆಯ ಪಕ್ಕದ ಊರಿನ ಡಾಕ್ಟರ್ ಮೋಹನ್ ಕುಮಾರ್ ತನಿಖೆಗೆ ಹೊರಟರು.

ಅಂದು ಆರಂಭವಾದ ಎಂಡೊಸಲ್ಫಾನ್ ಕರಾಳ ಕತೆ ನೂರೊಂದು ತಿರುವುಗಳನ್ನು ಪಡೆದು ಕೊನೆಗೂ ಇದೀಗ ಅಂತ್ಯ ಕಂಡಿದೆ. ಈ ವಿಷವನ್ನು ಪ್ರಪಂಚದಿಂದ ಉಚ್ಚಾಟಿಸಲು ನಿರ್ಧಾರ ಕೈಗೊಳ್ಳಲಾಗಿದೆ. ಒಂದು ವಿಧದಲ್ಲಿ ಇದು ಅಲ್‌ಖೈದಾ ಕತೆಯಂತೆಯೇ ಇದೆ. ವಿಮಾನಗಳಿಂದ ಆರಂಭವಾದ ಅದರ ಅಟ್ಟಹಾಸ ಒಸಾಮಾ ಬಿನ್ ಲಾಡೆನ್‌ನ ಹತ್ಯೆಯಲ್ಲಿ ಮುಗಿದ ಹಾಗೆ, ವಿಮಾನ ಸಿಂಪರಣೆಯ ಮೂಲಕ ಆರಂಭವಾದ ಕರಾಳ ಘಟನಾವಳಿಗಳು ಲಾಡೆನ್ ಹತ್ಯೆಯ ವೇಳೆಯಲ್ಲೇ ಅಂತ್ಯ ಕಂಡಿದೆ. ಆದರೆ ಕತೆ ಮುಗಿಯುವುದಿಲ್ಲ; ಅಲ್ ಖೈದಾದ ಅನೇಕ ರೂಪಗಳು ಎಲ್ಲೆಲ್ಲೋ ಅವಿತಿರುವ ಹಾಗೆ, ಎಂಡೊಸಲ್ಫಾನ್ ಕೂಡ ತನ್ನ ವಿಕಾರ ಮುಖಗಳನ್ನು ದಶಕಗಳ ಕಾಲ ತೋರುತ್ತಲೇ ಇರುತ್ತದೆ.

ಇದರ ಹಿಂದಿನ ಚರಿತ್ರೆಯನ್ನು ತುಸು ನೋಡೋಣ : ಎರಡನೆಯ ಜಾಗತಿಕ ಯುದ್ಧ ಮುಗಿದ ಮೇಲೆ ವಿಶ್ವದ ಎಲ್ಲ ಕಡೆ ಆಹಾರ ಬೆಳೆಯುವ ಪೈಪೋಟಿ ಆರಂಭವಾಯಿತು. 'ಖಡ್ಗಗಳನ್ನು ನೇಗಿಲ ಗುಳವನ್ನಾಗಿಸಿ' ನೆಲದ ಮೇಲೆ ಯುದ್ಧ ಸಾರಲಾಯಿತು. ಮಿಲಿಟರಿ ಶಸ್ತ್ರಾಸ್ತ್ರಗಳನ್ನು ಝುಳಪಿಸುವಂತೆ ನೆಲವನ್ನು ಪ್ಯಾಟನ್ ಟ್ಯಾಂಕ್ ಮಾದರಿಯ ಟಿಲ್ಲರ್ ಯಂತ್ರಗಳಿಂದ, ರಿಪ್ಪರ್‌ಗಳಿಂದ ಭೇದಿಸಿ, ಅರಣ್ಯಗಳನ್ನು, ಜೌಗು ಭೂಮಿಗಳನ್ನು ನೆಲಸಮ ಮಾಡಿ, ನೀರಾವರಿ ಕಾಲುವೆಗಳನ್ನು ಹರಿಸಿ, ಅದಕ್ಕೆಂದು ಡೈನಮೈಟ್ ಸಿಡಿಸಿ, ನದಿಗಳನ್ನು ಅಡ್ಡ ತಿರುಗಿಸಿ, ವಾರ್ ಫ್ಯಾಕ್ಟರಿಗಳ ಮಾದರಿಯಲ್ಲಿ ರಸಗೊಬ್ಬರ, ಪೀಡೆನಾಶಕಗಳನ್ನು ಉತ್ಪಾದಿಸಿ ಬಾಂಬರ್ ಮಾದರಿಯಲ್ಲಿ ವಿಮಾನದ ಮೂಲಕ ವಿಷ ರಸಾಯನಗಳನ್ನು ಸಿಂಪರಣೆ ಮಾಡಿ,



ಭೀಮಗಾತ್ರದ ಹಾರ್ವೆಸ್ಟರ್ ಯಂತ್ರಗಳನ್ನು ಜಗತ್ತಿನೆಲ್ಲೆಡೆ ಬಳಸಿ ಹಸಿವೆಯನ್ನು ಹೊಸಕಿ ಕೃಷಿಕ್ರಾಂತಿ ಸಾಧಿಸಲಾಯಿತು. ಏಕಜಾತಿಯ ಸಸ್ಯಗಳನ್ನು ಸಾವಿರಾರು ಎಕರೆ ಭೂಮಿಯಲ್ಲಿ ಬೆಳೆಸಿದ್ದರ ಪರಿಣಾಮವಾಗಿ, ಕೀಟಗಳ ಹಾವಳಿ ಹೆಚ್ಚಿದ್ದರಿಂದ ಇನ್ನಷ್ಟು, ಮತ್ತಷ್ಟು ಉಗ್ರ ರಸಾಯನಗಳ ಉತ್ಪಾದನೆ ಅನಿವಾರ್ಯವಾಯಿತು. ಜೀವಲೋಕದ ಮೇಲೆ ವಿಷದ ಸುರಿಮಳೆ ಸುರಿಸಿದ ಪರಿಣಾಮ ಗೊತ್ತಾಗಲು ದಶಕಗಳೇ ಬೇಕಾದವು.

**ಮೌನ ವಸಂತ**

ರ್‍ಯಾಚೆಲ್ ಕಾರ್ಸನ್ ಹೆಸರಿನ ಅಮೆರಿಕನ್ ಮಹಿಳೆ ಈ ಕೀಟನಾಶಕದ ವಿರುದ್ಧ ಮೊದಲ ಅಲಾರ್ಮ್ ಮೊಳಗಿಸಿದಳು. ಕೀಟಗಳನ್ನಷ್ಟೇ ಅಲ್ಲ, ಈ ಕೀಟನಾಶಕಗಳು ಕಪ್ಪೆ, ಮೀನು, ಪಕ್ಷಿ ಪ್ರಾಣಿಗಳನ್ನೂ ಕೊಲ್ಲುತ್ತವೆಂದು ಹೇಳಿ, 'ಸೈಲೆಂಟ್ ಸ್ಪ್ರಿಂಗ್'(ಮೌನ ವಸಂತ) ಹೆಸರಿನ ಪುಸ್ತಕ ಬರೆದಳು. ಈ ಒಂದು ಗ್ರಂಥದಿಂದಾಗಿ ಘಾತುಕ ಪೀಡೆನಾಶಕ ಕೆಮಿಕಲ್‌ಗಳ ವಿರುದ್ಧ ಜನಾಂದೋಲನವೇ ಆರಂಭವಾಯಿತು. ಅಮೆರಿಕವನ್ನು ಮೊದಲ್ಗೊಂಡು ಅನೇಕ ಶ್ರೀಮಂತ ದೇಶಗಳು ಈ ಕೊಳಕು ರಸಾಯನಗಳನ್ನು ಕೃಷಿಯಲ್ಲಿ ಬಳಸದಂತೆ ಬಿಗಿಯಾದ ನಿಷೇಧ ಹೇರುತ್ತ ಬಂದವು.

ಅಷ್ಟೇ ದೇಶಗಳು ನಿಷೇಧ ಹೇರಿದರೆ ಸಾಲದು; ಯಾವ ದೇಶವೂ ಇವನ್ನು ಉತ್ಪಾದಿಸಬಾರದು. ಏಕೆಂದರೆ ಈ ವಿಷವಸ್ತುಗಳಿಗೆ ರಾಜಕೀಯ ಗಡಿ ಇಲ್ಲ. ಸಾವಿರಾರು ಕಿಲೊಮೀಟರ್ ದೂರದವರೆಗೆ ಗಾಳಿ, ನೀರು, ಹಿಮ, ಧೂಳಿನೊಂದಿಗೆ ಇವು ಸಂಚರಿಸುತ್ತವೆ. ಆದ್ದರಿಂದ ವಿಶ್ವಸಂಸ್ಥೆಯ ಪರಿಸರ ವಿಭಾಗ ಈ ವಿಷವಸ್ತುಗಳ ಮೇಲೆ ಕಣ್ಣಿಟ್ಟು ಅವುಗಳನ್ನು ನಿಷೇಧಿಸುವಂತೆ ವಿವಿಧ ದೇಶಗಳ ಮನವೊಲಿಸಲೆಂದೇ "ಸ್ಟಾಕ್‌ಹೋಮ್ ಕನ್ವೆಂಶನ್"ಅನ್ನು ೧೯೯೫ರಲ್ಲಿ ಆರಂಭಿಸಿತು. ಜಗತ್ತಿನ ಎಲ್ಲೆಡೆ ಉತ್ಪಾದನೆಯಾಗುತ್ತಿರುವ ವಿಷವಸ್ತುಗಳನ್ನು 'ಪಿಒಪಿ' (ಪರ್ಸಿಸ್ಟೆಂಟ್ ಆರ್ಗ್ಯಾನಿಕ್ ಪೊಲ್ಯೂಟಂಟ್ಸ್ – ಅಂದರೆ ಅವಿನಾಶಿ ಸಾವಯವ ಮಲಿನಕಾರಕಗಳು) ಎಂದು ಹೆಸರಿಸಿ, ಅಂಥವುಗಳನ್ನೆಲ್ಲ ಪಟ್ಟಿ ಮಾಡತೊಡಗಿತು. ಪರಿಸರದಲ್ಲಿ ದೀರ್ಘಕಾಲದವರೆಗೆ ಗಟ್ಟಿ ಕೂತಿರುವ ರಾಸಾಯನಿಕ ವಸ್ತುಗಳು ಮತ್ತು ಸಸ್ಯ, ಪ್ರಾಣಿಗಳ ದೇಹದಲ್ಲಿ ಸಂಚಯವಾಗಿ ಕೆಡುಕು ಉಂಟುಮಾಡುತ್ತಲೇ ಹೋಗುವ ವಸ್ತುಗಳು ಈ ಪಟ್ಟಿಯಲ್ಲಿ ಬರುತ್ತವೆ. ೧೨೮ ರಾಷ್ಟ್ರಗಳು ಸ್ವೀಡನ್ ದೇಶದ ಸ್ಟಾಕ್‌ಹೋಮ್ ನಗರದಲ್ಲಿ ಆಗಾಗ ಸಭೆ ಸೇರಿ ಯಾವುದನ್ನು ನಿಷೇಧಿಸಬೇಕು, ಏಕೆ ನಿಷೇಧಿಸಬೇಕು, ನಿಷೇಧಿಸಬಾರದು ಎಂಬೆಲ್ಲ ಚರ್ಚೆ ನಡೆಸುತ್ತವೆ. ಮೊದಲ ಹಂತದಲ್ಲಿ ಹನ್ನೆರಡು ಪ್ರಮುಖ ವಿಷ ರಸಾಯನಗಳನ್ನು (ಅವಕ್ಕೆ ಡರ್ಟಿ ಡಝನ್ ಎನ್ನುತ್ತಾರೆ) ನಿಷೇಧಿಸಲು ತೀರ್ಮಾನಿಸಲಾಗಿತ್ತು. ಆ ಹನ್ನೆರಡರಲ್ಲಿ ನಮಗೆ ಪರಿಚಿತವಿರುವ ಡಿಡಿಟಿ ಕೂಡ ಬರುತ್ತದೆ. ಭಾರತ ಮತ್ತು ಇತರ ಕೆಲವು ರಾಷ್ಟ್ರಗಳು ಡಿಡಿಟಿ ತಮಗೆ ಬೇಕೇಬೇಕೆಂದೂ, ಇಲ್ಲಾಂದರೆ ಸೊಳ್ಳೆಗಳ ಮೂಲಕ ಬರುವ ಮಲೇರಿಯಾ ನಿಯಂತ್ರಣ ಸಾಧ್ಯವಾಗದೆಂದೂ ವಾದಿಸಿದ್ದವು. ಆದಕ್ಕೆ ಮನ್ನಣೆ ಕೊಟ್ಟು ಡಿಡಿಟಿಯನ್ನು 'ನಿಯಂತ್ರಿತ ಬಳಕೆ'ಯ ಪಟ್ಟಿಯಲ್ಲಿ ಸೇರಿಸಿ, ಕ್ರಮೇಣ ಅದನ್ನು ಕೈಬಿಡುವಂತೆ ಕೆಲವು ದೇಶಗಳಿಗೆ ಅವಕಾಶ ಮಾಡಿಕೊಡಲಾಯಿತು.

**ಹಲ್ಕಾ ಹನ್ನೆರಡು**

ಹೀಗೆ ನಿಯಂತ್ರಿತ ಬಳಕೆಯ ವಿಷವಸ್ತುಗಳು ನಮ್ಮಲ್ಲಿ ಸಾಕಷ್ಟಿವೆ. ಅವುಗಳನ್ನು ಆಮೇಲೆ ಚರ್ಚಿಸೋಣ. ಈ ಮಧ್ಯೆ ಎಂಡೊಸಲ್ಫಾನ್‌ನ ದುಷ್ಪರಿಣಾಮಗಳು ಅನೇಕ ದೇಶಗಳಲ್ಲಿ ಕಾಣತೊಡಗಿದ್ದವು. ಅಮೆರಿಕದಂಥ ಕೆಲವು ದೇಶಗಳು ಸ್ವಯಂಪ್ರೇರಿತವಾಗಿ ಅವುಗಳ ಬಳಕೆಯ ಮೇಲೆ ಕಟ್ಟುನಿಟ್ಟಿನ ನಿಗಾ ಇಟ್ಟು ಈಗಂತೂ ಸಂಪೂರ್ಣ ನಿಷೇಧಿಸಿವೆ. ಅದಕ್ಕೂ 'ಡರ್ಟಿ ಡಝನ್'ಗಳ ಹಾಗೆ ಇಡೀ ಜಗತ್ತಿನಲ್ಲಿ ಸಾರ್ವತ್ರಿಕ ನಿಷೇಧ ಹಾಕೋಣವೆಂದು ಸ್ಟಾಕ್‌ಹೋಮ್ ಸಭೆಯಲ್ಲಿ ಪ್ರಸ್ತಾವನೆ ಇಡಲಾಯಿತು.

ಕಾಸರಗೋಡಿನ ದುರಂತದ ದಾರುಣ ಚಿತ್ರಣ ಅಲ್ಲಿನ ಮಾಧ್ಯಮಗಳಲ್ಲಿ ಪದೇ ಪದೇ ಬಿತ್ತರವಾಗುತ್ತ ಬಂದಂತೆ ಕೇರಳ ಸರಕಾರ ಎಂಡೊಸಲ್ಫಾನ್ ಬಳಕೆಗೆ ನಿಷೇಧ ಹಾಕಿತು. ನಮ್ಮ ಬೆಳ್ತಂಗಡಿ ತಾಲ್ಲೂಕಿನ ಕೊಕ್ಕಡ, ಪಟ್ರಮೆ ಎಂಬ ಊರುಗಳಲ್ಲಿ ಕೂಡ ನಮ್ಮದೇ ಗೇರು ಅಭಿವೃದ್ಧಿ ನಿಗಮದವರು ವಿಷ ಸುರಿಮಳೆ ಸುರಿಸಿದ್ದರಿಂದ ಅಲ್ಲೂ ಕ್ಯಾನ್ಸರ್, ವಿಕಲಾಂಗ ಶಿಶುಗಳ ಜನನವೇ ಮುಂತಾದ ವಿಕಾರಗಳು ಕಂಡುಬಂದಿದ್ದವು. ಕರ್ನಾಟಕವೂ ನಿಷೇಧ ಹಾಕಿತು. ಆದರೆ ಸಂಸತ್ತಿನಲ್ಲಿ ನಿರ್ಣಯವಾಗದ ವಿನಾ ಕೃಷಿ ವಿಷಗಳನ್ನು ರಾಜ್ಯ ಸರಕಾರ ಹೆಚ್ಚೆಂದರೆ ಆರು ತಿಂಗಳವರೆಗೆ ನಿಷೇಧಿಸಬಹುದು ಅಷ್ಟೆ. (ಕೇರಳದಲ್ಲಿ ಇದನ್ನು ಪರಿಸರ ಮಾಲಿನ್ಯದ ಕಾನೂನುಗಳ ಅಡಿಯಲ್ಲಿ ನಿಷೇಧಿಸಲಾಗಿದೆ). ಅದೂ ಅಲ್ಲದೆ, ನಿಷೇಧ ಹಾಕಿದ್ದು ಸರಿಯಲ್ಲ ಎಂದು ಎಕ್ಸೆಲ್ ಕಂಪನಿ ಹೈಕೋರ್ಟ್‌ನಲ್ಲಿ ಬೇರೆ ದಾವೆ ಹೂಡಿದೆ.

ಹಾಗೆ ನೋಡಿದರೆ, ಅನಕ್ಷರತೆ, ಅಜ್ಞಾನ ಜಾಸ್ತಿ ಇರುವ ಭಾರತ ದೇಶ ಇದನ್ನು ಎಂದೋ ನಿಷೇಧಿಸಬೇಕಿತ್ತು. ಆದರ ಬದಲಿಗೆ ಸುರಕ್ಷಿತವೆನಿಸಿದ ಬದಲೀ ಕೀಟನಾಶಕಗಳು ಬಳಕೆಗೆ ಬರಬೇಕಿದ್ದವು. ಆದರೆ ನಮ್ಮಲ್ಲಿ ಅನಕ್ಷರತೆ, ಅಜ್ಞಾನದ ಜತೆಗೆ ಇನ್ನೂ ನಾಲ್ಕಾರು ಅನಿಷ್ಟಗಳು ಕೃಷಿರಂಗವನ್ನು ಕಾಡುತ್ತಿವೆ. ಮುಖ್ಯವಾಗಿ ನಮ್ಮ ಕೃಷಿ ವಿಜ್ಞಾನಿಗಳು ಬೇರೊಂದು ಬಗೆಯ 'ಪಿಒಪಿ'(ಪ್ಯಾಕೇಜ್ ಆಫ್ ಪ್ರಾಕ್ಟೀಸ್)ಗೆ ಜೋತು ಬಿದ್ದವರು. ಯಾವ ಬೆಳೆಗೆ ಎಷ್ಟು ಗೊಬ್ಬರ, ಎಷ್ಟು ಬೀಜ, ಎಷ್ಟು ವಿಷವನ್ನು ಸುರಿಯಬೇಕು ಎಂಬುದರ ಬಗ್ಗೆ ಐವತ್ತು ವರ್ಷಗಳ ಹಿಂದೆ ಯಾರೋ ಬರೆದಿದ್ದನ್ನೇ ವಿದ್ಯಾರ್ಥಿಗಳಿಗೂ ರೈತರಿಗೂ ಹೇಳುತ್ತ ಹೋಗುವುದೇ ತಮ್ಮ ಪರಮ ಕರ್ತವ್ಯ ಎಂದು ಭಾವಿಸಿದವರು. 'ಎರಡು ವಾರಕ್ಕೊಮ್ಮೆ ಎಂಡೊಸಲ್ಫಾನ್ ಸಿಂಪರಣೆ ಮಾಡಬೇಕು' ಎಂದು 'ಪಿಒಪಿ'ಯಲ್ಲಿ ಬರೆದಿದ್ದರೆ ಅದನ್ನೇ ತಮ್ಮ ಜೀವನದುದ್ದಕ್ಕೂ ಹೇಳುತ್ತಾರೆ ವಿನಾ ಅಲ್ಲಿ ರೈತನ ಮೇಲಾಗಲೀ, ಅಲ್ಲಿನ ಮಣ್ಣು, ನೀರಿನ ಮೇಲಾಗಲೀ ಏನು ಪರಿಣಾಮ ಆಗಿದೆ ಎಂಬುದನ್ನು ಕಣ್ಣೆತ್ತಿ ನೋಡುವುದಿಲ್ಲ. ಹೋಗಲಿ ರೈತನ ಕಡೆ ನೋಡಲು ಬಿಡುವಿಲ್ಲದಿದ್ದರೆ ಅತ್ತ ಅಮೆರಿಕ, ಸ್ವೀಡನ್, ಜಪಾನ್ ಕಡೆ ನೋಡುತ್ತಾರೆಯೆ, ಅದೂ ಇಲ್ಲ. ಅಲ್ಲಿ ಎಂಡೊಸಲ್ಫಾನ್ ಬಳಕೆಯನ್ನು ಕೈಬಿಟ್ಟಿದ್ದಾರೆ ಎಂಬುದೂ ಇವರ ಗಮನಕ್ಕೆ ಬಂದಿರುವುದಿಲ್ಲ. ನೋಡಿದ್ದಿದ್ದರೆ, ನಮ್ಮಲ್ಲೂ ಈ ವಿಷವನ್ನು ಅತಿ ಹೆಚ್ಚಾಗಿ ಬಳಸುತ್ತಿರುವ ಯಾವುದೋ ತಾಲ್ಲೂಕನ್ನೊ, ಹೋಬಳಿಯನ್ನೊ ಅಥವಾ ಒಂದು ಊರನ್ನೊ ಸುತ್ತಾಡಿ ಅಲ್ಲಿನ ಪ್ರಾಣಿಪಕ್ಷಿ, ಜನ-ಜಾನುವಾರುಗಳ ಮೇಲೆ ಏನು ಪರಿಣಾಮ ಆಗುತ್ತಿದೆ ಎಂಬುದರ ಸಮೀಕ್ಷೆ ಮಾಡಿ ವರದಿ ಮಾಡಬಹುದಿತ್ತು.



'ಭಾರತದ ಕೃಷಿ ಸಂಶೋಧನ ಮಂಡಲಿ' (ಐಸಿಎಆರ್) ಎಂಬುದೊಂದು ಮಹಾ ಸಂಸ್ಥೆ ಇದೆ. ಅದಕ್ಕೆ ಕೃಷಿಯ ಉತ್ಪಾದನೆಯನ್ನು ಹೆಚ್ಚಿಸುವ ಕಡೆ ಲಕ್ಷ್ಯವಿದೆಯೇ ವಿನಾ ಕೃಷಿಕನ ಗತಿಸ್ಥಿತಿಯ ಕಡೆ ಗಮನವಿಲ್ಲ. ಇನ್ನು, 'ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಲಿ' ಎಂಬ ಮಹಾಸಂಸ್ಥೆಯೂ ಇದೆ. ಅದಕ್ಕೂ ಕೃಷಿಗೂ ಯಾವ ಸಂಬಂಧವೂ ಇಲ್ಲ. ಹಾವೇರಿ, ರಾಣೆಬೆನ್ನೂರಿನಂಥ ಪಟ್ಟಣಗಳಲ್ಲಿ ಕೃಷಿ ವಿಷಗಳನ್ನು ಮಾರುವ ಅಂಗಡಿಗಳು ಮಾರಿಗೊಂದು ಮೊಳಕ್ಕೊಂದು ಇವೆ. ಅಲ್ಲಿ ಮಾರುವ ವಿಷವಸ್ತುಗಳನ್ನು ನೋಡಬೇಕು. ಕನ್ನಡದಲ್ಲಿ ಲೇಬಲ್ ಇರುವುದಿಲ್ಲ, ಎಚ್ಚರಿಕೆ ಇರುವುದಿಲ್ಲ, ಎಲ್ಲಿ, ಎಂದು ತಯಾರಾಗಿದ್ದು ಎಂಬ ವಿವರಗಳೂ ಇರುವುದಿಲ್ಲ. ಹೈಸ್ಕೂಲೂ ಓದಿರದ ವಿಷದ ವ್ಯಾಪಾರಿಯೇ ಅಲ್ಲಿ ಕೃಷಿತಜ್ಞ, ಪಶುವೈದ್ಯ, ಆರೋಗ್ಯ ತಜ್ಞ, ಆಲ್ ಇನ್ ವನ್. 'ಎಮ್ಮೆಗೆ ಉಣ್ಣಿ ಸಮಸ್ಯೆಯೆ? ಈ ಪೌಡರ್ ಹಚ್ಚಿ; ಬೀದಿನಾಯಿಯನ್ನು ಕೊಲ್ಲಬೇಕೆ, ಈ ಕೇಕ್ ತಿನ್ನಿಸಿ; ಭತ್ತಕ್ಕೆ ಜಗಿಹುಳು ಬಾಧೆಯೆ ಈ ದ್ರಾವಣ ಹೊಡೆಯಿರಿ. ಗೆದ್ದಲು ಹೆಚ್ಚಾಗಿವೆಯೆ ಈ ಪುಡಿ ಉದುರಿಸಿ' ಎನ್ನುತ್ತ ಎತ್ತಿ ಎತ್ತಿ ಕೊಡುತ್ತಾನೆ ವಿನಾ ಆತನಿಗೆ ಆ ವಿಷಗಳ ಮೂಲ ಹೆಸರೂ ಗೊತ್ತಿರುವುದಿಲ್ಲ. ಕಂಪನಿಗಳು ಯಾವ ವಿಷಕ್ಕೆ ಜಾಸ್ತಿ ಕಮಿಶನ್ ಕೊಡುತ್ತವೆಯೊ ಅದನ್ನು ಆದಷ್ಟೂ ಹೆಚ್ಚು ಹೆಚ್ಚು ಮಾರಾಟ ಮಾಡಿ ತನ್ನ ಲಾಭಾಂಶವನ್ನು ಹೆಚ್ಚಿಸುವುದೇ ಆತನ ಗುರಿ ಇದೆ ವಿನಾ ಜೇನ್ನೊಣ ಸಾಯುತ್ತವೆಯೊ, ಕೊಕ್ಕರೆ ಸಾಯುತ್ತವೊ ಅವನ್ನು ಕಟ್ಟಿಕೊಂಡು ಅವನಿಗೇನಾಗಬೇಕು?

### ದುಸ್ಸಾಹಸ ಸರಮಾಲೆ

ವಿಷ ಉತ್ಪಾದಿಸುವ ಕಂಪನಿಗಳದ್ದು ಇನ್ನೊಂದು ಕತೆ. ಎಂಡೊಸಲ್ಫಾನ್ ವಿಷವನ್ನು ಸರಕಾರವೂ 'ಹಿಂದೂಸ್ತಾನ್ ಇನ್‌ಸೆಕ್ಟಿಸೈಡ್ ಲಿಮಿಟೆಡ್' ಹೆಸರಿನಲ್ಲಿ ಉತ್ಪಾದಿಸುತ್ತಿದೆ. 'ಎಕ್ಸೆಲ್ ಗ್ರೂಪ್' ಹೆಸರಿನ ಖಾಸಗಿ ಕಂಪನಿಯೂ ಉತ್ಪಾದಿಸುತ್ತಿದೆ. ಲಾಭ ಗಳಿಕೆಯೇ ಅವಕ್ಕೆ ಮುಖ್ಯ ವಿನಾ, ಸುರಕ್ಷಿತ ಬದಲೀ ವಿಷಗಳ ಬಗ್ಗೆ ಅವು ಯಾವ ಸಂಶೋಧನೆಯನ್ನೂ ಮಾಡಿಲ್ಲ. ಪಡ್ರೆ ದುರಂತದ ವಿಷಯ ಜಗಜ್ಜಾಹೀರಾದ ತಕ್ಷಣ ಅವು ಸತ್ಯವನ್ನು ಮುಚ್ಚಿಹಾಕಲು ಮಾಡಿದ ದುಸ್ಸಾಹಸಗಳ ಸರಣಿ ಕುರಿತು ಗ್ರಂಥವನ್ನೇ ಬರೆಯಬಹುದು (ಮಲೆಯಾಳಿ ಭಾಷೆಯಲ್ಲಿ 'ಎಣ್ಮಕಜೆ' ಹೆಸರಿನ ಕಾದಂಬರಿ ಬಂದಿದೆ. ಕನ್ನಡಕ್ಕೂ ಅನುವಾದವಾಗಿದೆ). ತನಿಖೆಗೆ ಅಡ್ಡಗಾಲು ಹಾಕಿದ್ದು, ವಿಜ್ಞಾನಿಗಳನ್ನು ಖರೀದಿಸಿದ್ದು, ನ್ಯಾಯಾಲಯಗಳನ್ನು, ಜನಪ್ರತಿನಿಧಿಗಳನ್ನು ತಪ್ಪು ದಾರಿಗೆ ಎಳೆಯಲು ಯತ್ನಿಸಿದ್ದು, ಒಂದೆರಡಲ್ಲ. ಗುಜರಾತಿನಲ್ಲಿರುವ ಖಾಸಗಿ ಕಂಪನಿಯಂತೂ 'ಎಂಡೊಸಲ್ಫಾನ್‌ಗೆ ನಿಷೇಧ ಹಾಕಬೇಡಿ' ಎಂದು ಸಾರಲೆಂದು ಏಳೆಂಟು ಸಾವಿರ ಜನರನ್ನು ಸೇರಿಸಿ ಬೀದಿ ಮೆರವಣಿಗೆ ಮಾಡಿಸಿದ್ದೂ ವರದಿಯಾಗಿತ್ತು. ಅಲ್ಲಿನ ಸರಕಾರ ಸತ್ಯಾಂಶ ತನಿಖೆಗೆಂದು ಸಮಿತಿ ರಚಿಸಿ ಎಮ್.ಎಸ್. ವಿಶ್ವವಿದ್ಯಾಲಯದ ಕುಲಪತಿ (ಔಷಧ ವಿಜ್ಞಾನಿ) ಪ್ರೊ|| ಆರ್. ಕೆ. ಗೋಯಲ್ ಅವರನ್ನು ಮುಖ್ಯಸ್ಥರನ್ನಾಗಿ ನೇಮಕ ಮಾಡಿತು. ಆ ಸಮಿತಿಯಲ್ಲಿ ಕೆಲವು ಕೃಷಿ ವಿಜ್ಞಾನಿಗಳಿದ್ದರು. ವಿಷ ಉತ್ಪಾದಿಸುವ ಕಂಪನಿಯ ಅಧಿಕಾರಿ ಕೂಡ ಒಬ್ಬ ಸದಸ್ಯನಾಗಿದ್ದ. ಅಂದಮೇಲೆ ಅದರ ಶಿಫಾರಸು ಏನಿದ್ದೀತೆಂದು ನಾವು ಊಹಿಸಬಹುದು. ಈ ಸಮಿತಿ ಪಡ್ರೆಗೂ ಹೋಗಲಿಲ್ಲ. ರೋಗಗ್ರಸ್ತರ ಪತ್ತೆಗೂ ಯತ್ನಿಸಲಿಲ್ಲ. ಈ ವಿಷಕ್ಕೆ ನಿಷೇಧ ಹಾಕಿದ ದೇಶಗಳಿಂದ ತಜ್ಞರ ವರದಿಯನ್ನೂ ತರಿಸಲಿಲ್ಲ. ಫ್ಯಾಕ್ಟರಿಗೆ ಭೇಟಿ ನೀಡಿ, ಕೆಲವು ರೈತರನ್ನು ಭೇಟಿ ಮಾಡಿ, 'ಇದರಿಂದ ಏನೂ ಅಪಾಯವಿಲ್ಲ, ಮುಂದೆಯೂ ಬಳಸುತ್ತಿರಬಹುದು' ಎಂಬ ವರದಿಯನ್ನು ಮೊನ್ನೆ ಮಾರ್ಚ್ ತಿಂಗಳಲ್ಲಿ ಸಲ್ಲಿಸಿತು.

ವಿಜ್ಞಾನಿಗಳ ಸಮೂಹಕ್ಕೇ ನಾಚಿಕೆ ತರುವ ಇಂಥ ವರದಿಗಳ ಸಾಲಿನಲ್ಲಿ ಇದು ತೀರ ಈಚಿನದು ಅಷ್ಟೆ. ಕಳೆದ ವರ್ಷ ಕುಲಾಂತರಿ ಬದನೆ ನಿಷೇಧಿಸಬೇಕೆಂದು ಅನೇಕ ರಾಜ್ಯಗಳು ಒತ್ತಾಯಿಸಿದಾಗ, ಕೇಂದ್ರ ಪರಿಸರ ಸಚಿವರು ದೇಶದ ಆರು ಮಹೋನ್ನತ ವಿಜ್ಞಾನ ಸಂಸ್ಥೆಗಳ ಮುಖ್ಯಸ್ಥರನ್ನು ಒಳಗೊಂಡ ಒಂದು ತನಿಖಾ ಸಮಿತಿಯನ್ನು ರಚಿಸಿದ್ದರು. ಕುಲಾಂತರಿ ತಂತ್ರಜ್ಞಾನವನ್ನು ಹಾಡಿ ಹೊಗಳುವ ಎಂಜಲು ಸಾಹಿತ್ಯವನ್ನು ಅಲ್ಲಿಂದಿಷ್ಟು ಇಲ್ಲಿಂದಿಷ್ಟು ಕದ್ದು ತೇಪೆಹಚ್ಚಿ ತಯಾರಿಸಿದ ಆ ವರದಿ ಅದೆಂಥ ನಾಚಿಕೆಗೇಡಿನದಾಗಿತ್ತು ಎಂದರೆ 'ಇದು ಗಟಾರದ ವಿಜ್ಞಾನ' ಎಂದು ಹೆಸರಾಂತ ಕೃಷಿನೀತಿ ತಜ್ಞ ಡಾ|| ದೇವಿಂದರ್ ಶರ್ಮಾ ಟೀಕಿಸಿ ಬರೆದಿದ್ದು ನಾನಾ ದೇಶಗಳಲ್ಲಿ ಪ್ರಕಟವಾಯಿತು.

ಜೀವಜಂತುಗಳನ್ನು ಕೊಲ್ಲಲೆಂದು ಮನುಷ್ಯ ಯಾವುದೇ ವಿಷವನ್ನು ಬಳಸಿದರೂ ಅದು ಮನುಷ್ಯನಿಗೂ ಘಾಸಿ ಮಾಡುತ್ತದೆ. ಏಕೆಂದರೆ ನಾವು ಅದೆಷ್ಟೇ ಎತ್ತರದ ಮಹಡಿಯಲ್ಲಿ ವಾಸಿಸುತ್ತಿದ್ದರೂ ನಿಸರ್ಗದಿಂದ ದೂರವಿರಲು ಸಾಧ್ಯವಿಲ್ಲ. ಪಿಓಪಿಗಳ ಅಜಾಗರೂಕ ಬಳಕೆಯಿಂದ ಕ್ಯಾನ್ಸರ್, ನಪುಂಸಕತೆ, ಬಂಜೆತನ ಅಷ್ಟೇ ಅಲ್ಲ, ಖಿನ್ನತೆ, ಬದುಕಿನ ಬಗ್ಗೆ ಜಿಗುಪ್ಸೆ, ಆತ್ಮಹತ್ಯೆಯ ಕಡೆ ಸೆಳೆತವೇ ಮುಂತಾದ ನಾನಾ ಬಗೆಯ ಮಾನಸಿಕ ಕ್ಲೇಶಗಳೂ ಉಂಟಾಗುತ್ತವೆ ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳಿವೆ. ವಿಯೆಟ್ನಾಂ ಯುದ್ಧದಲ್ಲಿ ಗೆರಿಲ್ಲಾಗಳನ್ನು ಪತ್ತೆಹಚ್ಚಲೆಂದು ಅಮೆರಿಕ ಸರಕಾರ 'ಏಜೆಂಟ್ ಆರೆಂಜ್' ಎಂಬ ಕಳೆನಾಶಕವನ್ನು ಸಿಂಪಡಿಸಿದ್ದರಿಂದ ವಿಕಲಾಂಗ ಮನುಷ್ಯರ ಸಂತತಿಯೇ ಈಗಲೂ ಹುಟ್ಟುತ್ತಿದೆ. ಜಪಾನಿನ ಮಿನಾಮಾಟಾ ಎಂಬಲ್ಲಿ ಪಾದರಸದ ವಿಷ ನೀರಿಗೆ ಸೇರಿದ್ದರಿಂದ ೧೭೮೪ ಜನರು ಸತ್ತರು. ಹತ್ತು ಸಾವಿರಕ್ಕೂ ಹೆಚ್ಚು ಜನರಿಗೆ ಪರಿಹಾರ ಘೋಷಿಸಲಾಯಿತು. ಅಷ್ಟೇಕೆ, ನಮ್ಮದೇ ಭೋಪಾಲ್ ದುರಂತದಲ್ಲಿ ೨೬ ವರ್ಷಗಳ ನಂತರವೂ ಜನರು ಸಾಯುತ್ತಲೇ ಇದ್ದಾರೆ.

### ಜನರೇ ಹೇರಬಹುದಾದ ನಿಷೇಧ

ಸ್ಟಾಕ್‌ಹೋಮ್ ನಿರ್ಣಯದ ಪ್ರಕಾರ ಭಾರತವೂ ಎಂಡೊಸಲ್ಫಾನ್ ಬಳಕೆಯನ್ನು ಹಂತಹಂತವಾಗಿ ಕಡಿಮೆ ಮಾಡಲು ಒಪ್ಪಿದೆ. ಅಂಗಡಿಗಳಿಂದ ಸಂಪೂರ್ಣ ಕಣ್ಮರೆಯಾಗಲು ಕನಿಷ್ಠ ಹತ್ತು ವರ್ಷಗಳೇ ಬೇಕು. ಈ ವಿಷವಸ್ತು ಒಮ್ಮೆ ನಮ್ಮ ಶರೀರಕ್ಕೆ ಹೋದರೆ, ಅದು ಕೊಬ್ಬಿನ ಕಣಗಳಲ್ಲಿ ಸೇರಿಕೊಂಡು, ನಾವು ಬದುಕಿರುವ ವರೆಗೂ ತೊಂದರೆ ಕೊಡುತ್ತಲೇ ಇರುತ್ತದೆ. ಸರಕಾರ ನಿಧಾನಗತಿಯಲ್ಲಿ ನಿಷೇಧ ಹಾಕುವುದನ್ನು ಕಾಯುತ್ತ ಕೂರುವ ಬದಲು, ನಾಗರಿಕ ಸಮಾಜವೇ ಅದನ್ನು ನಿಷೇಧಿಸಲು ಸಾಧ್ಯವಿದೆ. ಕಡೇಪಕ್ಷ ಇಂಥ ವಿಷಗಳ ಬಗ್ಗೆ ಪ್ರಜ್ಞೆ ಮೂಡಿಸಲು ಯತ್ನಿಸಬಹುದಾಗಿದೆ. ವಿಷಗಳನ್ನು ಮಾರುವ ಅಂಗಡಿಗಳ ಎದುರು ಬ್ಯಾನರ್ ಕಟ್ಟಿ ಕರಪತ್ರ ಬಿತ್ತರಿಸುತ್ತ, ಶಾಂತಿಯುತ ಸಂಚಲನ ಸೃಷ್ಟಿಸುವುದು; ವಿಷವನ್ನು ಅತಿಯಾಗಿ ಬಳಸುವ ಹಳ್ಳಿಗಳಲ್ಲಿ ಆರೋಗ್ಯ ಸಮೀಕ್ಷೆ ನಡೆಸುವುದು; ಅಲ್ಲಿನ ಅಂಗವಿಕಲ ಮಕ್ಕಳಿಗೆ, ಉಬ್ಬಸವಿರುವ ಹಿರಿಯರಿಗೆ ಪರಿಹಾರದ ಹಕ್ಕೊತ್ತಾಯ ಮಾಡುವುದು; ಬದಲೀ ಸುರಕ್ಷಿತ ಪೀಡೆ ನಿವಾರಕಗಳನ್ನು ಒದಗಿಸುವಂತೆ ಕೃಷಿ ಇಲಾಖೆಯ ಅಧಿಕಾರಿಗಳ ಹಾಗೂ ವಿಜ್ಞಾನಿಗಳ ಮೇಲೆ, 'ಸಾವಯುವ ಮಿಷನ್'ನ ಪದಾಧಿಕಾರಿಗಳ ಮೇಲೆ ಒತ್ತಡ ತರುವುದು ಇವೆಲ್ಲವೂ ಸುರಕ್ಷಿತ ನಾಳೆಗಳತ್ತ ಸಮಾಜವನ್ನು ಮುನ್ನಡೆಸುವ ವಿಧಾನಗಳೇ ಆಗಿವೆ. (ಇದೀಗ ಬಂದ ವರದಿ: ಮಾಹಿತಿ ಹಕ್ಕು ಚಲಾಯಿಸಿ ಪಡೆದ ಅಂಕಿಅಂಶಗಳ ಪ್ರಕಾರ, ದಕ್ಷಿಣ ಕನ್ನಡದ ೯೬ ಹಳ್ಳಿಗಳ ಸುತ್ತಲಿನ ಗೇರು ಮರಗಳಿಗೆ ೭೦ ಸಾವಿರ ಲೀಟರ್ ಎಂಡೊಸಲ್ಫಾನ್ ಸುರಿಯಲಾಗಿದೆ; ಪುತ್ತೂರಿನ ಮರ್ಧಾಲಾ ಎಂಬ ಒಂದೇ ಊರಿನಲ್ಲಿ ೬೦ಕ್ಕೂ ಹೆಚ್ಚು ಜನರು ಕಾಯಿಲೆ ಬಿದ್ದಿದ್ದಾರೆ).

'ಆಹಾರವೇ ನಿನ್ನ ಔಷಧವಾಗಲಿ' ಎಂದು ವೈದ್ಯಪಂಡಿತ ಹಿಪ್ಪೊಕ್ರಟಿಸ್ ತುಂಬ ಹಿಂದೆಯೇ ಹೇಳಿದ್ದ. ಈಗಿನ ಲಾಭಕೋರ ಆಧುನಿಕ ತಂತ್ರಜ್ಞಾನ ನಮ್ಮ ಆಹಾರವನ್ನೇ ವಿಷಮಯ ಮಾಡಿ ನಮ್ಮನ್ನೆಲ್ಲ ಆಸ್ಪತ್ರೆಗಳಿಗೆ ಅಟ್ಟುತ್ತಿದೆ. ಸಕ್ಕರೆ ಕಾಯಿಲೆ, ರಕ್ತದೊತ್ತಡ, ಹೃದ್ರೋಗಗಳ ಮಟ್ಟಿಗೆ ಭಾರತ ದೇಶ ವಿಶ್ವದಲ್ಲೇ ಮೊದಲ ಸ್ಥಾನಕ್ಕೆ ಏರಿದೆ. ಈ ಕಾಯಿಲೆಗಳ ಬೇರುಗಳೆಲ್ಲ ನಮ್ಮ ಮಣ್ಣಿನಲ್ಲೇ ಇವೆ. ಯಾರು ಕೇಳಬೇಕು ಅವನ್ನ?


ನಾಗೇಶ ಹೆಗಡೆ

ಮೈತ್ರಿಗ್ರಾಮ, ಸೂಲಿಕೆರೆ ಅಂಚೆ

ಕೆಂಗೇರಿ ಹೋಬಳಿ, ಬೆಂಗಳೂರು - ೫೬೦ ೦೬೦



## ದೀಪಧಾರಿಣಿ (ಫ್ಲಾರೆನ್ಸ್ ನೈಟಿಂಗೇಲ್ ಬದುಕು-ಸಾಧನೆ)

*ಬಿ. ಜಿ. ಕುಸುಮಾ*

**ಪುಟ : ೬೦**

**ಬೆಲೆ : ರೂ. ೪೦**

**ನವಕರ್ನಾಟಕ ಪ್ರಕಾಶನ**

ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೯೯, ಬೆಂಗಳೂರು - ೫೬೦ ೦೦೧

*ರೋಗಿಗಳ ಶುಶ್ರೂಷೆ ಮಾಡುವುದು ಅತ್ಯಂತ ಕೀಳುಮಟ್ಟದ ಕೆಲಸವೆಂದು ತಿಳಿದಿದ್ದ ಅಂದಿನ ಕಾಲದಲ್ಲಿ ದಾದಿಯರ ಕೆಲಸಕ್ಕೆ ಘನತೆ-ಗೌರವಗಳನ್ನು ತಂದುಕೊಟ್ಟ ಮಹಿಳೆ ಫ್ಲಾರೆನ್ಸ್ ನೈಟಿಂಗೇಲ್. ವಿಕ್ಟೋರಿಯನ್ ಯುಗದಲ್ಲಿ ನಡೆದ ಕ್ರಿಮಿಯಾ ಯುದ್ಧ ಭೀಕರವಾಗಿತ್ತು. ಗಾಯಾಳು ಯೋಧರನ್ನು ಆಸ್ಪತ್ರೆಗಳಲ್ಲಿ ಅತೀವ ಅಸಡ್ಡೆಯಿಂದ ನೋಡಲಾಗುತ್ತಿತ್ತು. ಅಂತಹ ಸಮಯದಲ್ಲಿ ತನ್ನ ತಂಡದೊಂದಿಗೆ, ಉಪಯುಕ್ತ ಸಾಮಗ್ರಿಗಳೊಂದಿಗೆ ಸೇನಾ ಆಸ್ಪತ್ರೆಗೆ ತೆರಳಿ ಮಾನವೀಯ ನೆಲೆಯಲ್ಲಿ ರೋಗಿಗಳನ್ನುಪಚರಿಸಿದರು. ಆಕೆ ಪಟ್ಟ ಪಾಡನ್ನು ಈ ಪುಸ್ತಕ ಓದಿಯೇ ತಿಳಿಯಬೇಕು. ದೀಪವೊಂದನ್ನು ಹಿಡಿದುಕೊಂಡು ಪ್ರತಿದಿನವೂ ಪ್ರತಿರೋಗಿಯನ್ನೂ ಗಮನಿಸುತ್ತ ಅವರಲ್ಲಿ ಆತ್ಮವಿಶ್ವಾಸ-ಬದುಕುವ ಆಸೆಗಳನ್ನು ಚಿಗುರಿಸುತ್ತ ಈಕೆ ನಡೆಯುತ್ತಿದ್ದರೆ ಸಾವು ಹಿಂದೆ ಸರಿಯುತ್ತಿತ್ತು. ಅಂದಿನ ಆಸ್ಪತ್ರೆಗಳ ವ್ಯವಸ್ಥೆಯನ್ನೇ ಬದಲಾಯಿಸಿ ರೋಗಿಗೆ ಅಗತ್ಯವಾದುದನ್ನು ಒದಗಿಸಿ ದಾದಿಯ ಕರ್ತವ್ಯವೇನೆಂದು ಜಗತ್ತಿಗೆ ಸಾರಿ ಹೇಳಿ ವಿಕ್ಟೋರಿಯಾ ರಾಣಿಯಿಂದ ಪ್ರಶಂಸೆ ಪಡೆದವಳು ನೈಟಿಂಗೇಲ್. ಅಂದು ಆಕೆ ಹಾಕಿಕೊಟ್ಟ ಮೇಲ್ಪಂಕ್ತಿಯಂತೆಯೇ ಇಂದು ಕೂಡ ದಾದಿಯರ ತರಬೇತಿ ಮತ್ತು ಕೆಲಸ ಕಾರ್ಯಗಳು ನಡೆಯುತ್ತಿವೆ. ವೈದ್ಯ ಹೇಗೆ ಅಗತ್ಯವೋ ದಾದಿಯೂ ಕೂಡ ಅಷ್ಟೇ ಅತ್ಯಗತ್ಯವೆಂದು, ಔಷಧಿಯಷ್ಟೇ ಶುಶ್ರೂಷೆಯೂ ಮಹತ್ವದ್ದೆಂದು ಜಗತ್ತಿಗೇ ಸಾರಿ ಹೇಳಿದ ಮಹಿಳೆ ಈಕೆ.*

## ಹಂಪಿ ಜೀವಜಾಲ ಜಾನಪದ

*ಡಾ॥ ಮೊಗಳ್ಳಿ ಗಣೇಶ್*

**ಪುಟ : x + ೨೦೮** **ಬೆಲೆ : ರೂ. ೧೦೦**

**ಡಾ॥ ಮಂಜುನಾಥ ಬೇವಿನಕಟ್ಟಿ**, ನಿರ್ದೇಶಕರು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬

*ಜಾನಪದ ಲೋಕ ಒಂದು ಕಾಲದಲ್ಲಿ ಬಾಳಿ ಬದುಕಿದ್ದ ಸಂಸ್ಕೃತಿಯೊಂದು ಮೆಲ್ಲನೆ ಇಲ್ಲಿ ಅನಾವರಣಗೊಂಡಿದೆ. ಬಲು ಸೂಕ್ಷ್ಮವಾಗಿ ಪ್ರಕೃತಿಯೊಂದಿಗಿನ ಜೀವಜಾಲದೊಂದಿಗೆ ಅವಿನಾ ಸಂಬಂಧ ಇದ್ದ ಅಂದಿನ ಜನರು ಮುಗ್ಧವಾಗಿ ಕೆಲವು ಉಪಯುಕ್ತ ನಂಬಿಕೆಯೊಂದಿಗೆ ಪರಿಸರಕ್ಕೆ ಸ್ಪಂದಿಸಿದ್ದರು. ಮನುಷ್ಯ ಪ್ರಕೃತಿಯಲ್ಲಿರುವ ಎಲ್ಲವನ್ನೂ ಪ್ರೀತಿ-ಗೌರವದೊಂದಿಗೆ ಕಂಡಾಗಲೇ ಅವನು ಉಳಿಯಬಲ್ಲ ಎಂಬ ಅಂಶವೊಂದು ಈ ಪುಸ್ತಕದುದ್ದಕ್ಕೂ ಬೆಸೆದುಕೊಂಡಿದೆ. ನಿಸರ್ಗಕ್ಕೆ ವಿರುದ್ಧವಾಗಿ ನಡೆಯತೊಡಗಿದ ಅವನಿಂದು ತಾನು ಸುಖವಾಗಿದ್ದೇನೆಂಬ ಭ್ರಮೆಯೊಂದಿಗೆ ಪರಸ್ಪರ ಜೀವಜಾಲದ ಅವಲಂಬನೆಯನ್ನು ಕಡೆಗಣಿಸಿದ್ದಾನೆ. ಹಿಂದೆ ಜಾನಪದ ಸಂಸ್ಕೃತಿಯಲ್ಲಿ ಈ ಅವಲಂಬನೆಗೆ ಮಹತ್ವ ನೀಡಿ ಭೂಮಿಯಲ್ಲಿನ ಎಲ್ಲದಕ್ಕೂ ಮನ್ನಣೆಯಿತ್ತು. ಮೊಗಳ್ಳಿ ಗಣೇಶ್ ಅವರು ಇಲ್ಲಿ ಹಂಪಿಯ ಪರಿಸರದಲ್ಲಿನ ಸಸ್ಯ-ಪ್ರಾಣಿ-ಪಕ್ಷಿ-ಕೀಟ – ಮುಂತಾದ ಜೈವಿಕ ಪ್ರಭೇದಗಳನ್ನು ಪರಿಚಯಿಸಿದ್ದಾರೆ. ಜಾನಪದೀಯ ನೆಲೆ-ನಂಬಿಕೆ ಇದಕ್ಕೆ ಪೂರಕ. ಮನುಷ್ಯನೂ ಒಳಗೊಂಡಂತೆ ಜೀವಜಾಲದ ಒಟ್ಟು ಅವಲಂಬನೆಯ ಸಂಬಂಧ ಕೆಲವು ಚಿಕ್ಕಪುಟ್ಟ ಸ್ವಾರಸ್ಯಕರ ಕಥೆಗಳೊಂದಿಗೆ ನಿರೂಪಿಸಲಾಗಿದೆ. ವಿಕಾಸದ ಹಂತದಲ್ಲಿ ಕಾಲಾಂತರದಲ್ಲಿ ಅಳಿದ-ಅಳಿವಿನಂಚಿನಲ್ಲಿರುವ ಎಷ್ಟೋ ಜೈವಿಕ ಪ್ರಭೇದಗಳ ಬಗ್ಗೆಯೂ ಉಲ್ಲೇಖವಿದೆ. ನಿನ್ನೆಯ-ಇಂದಿನ-ನಾಳೆಯ ಜೀವಜಾಲದ ನಿರಂತರ ಕೊಂಡಿಗಳು ಅದೆಷ್ಟು ಅದ್ಭುತವೆಂದು ಇಲ್ಲಿ ನಾವು ಮನಗಾಣುತ್ತೇವೆ.*



## ವಿಜ್ಞಾನ ಸಾಹಿತ್ಯ ೨೦೦೭

*ಸಂ. : ಡಾ॥ ಬಿ. ಎಸ್. ಶೈಲಜಾ*

**ಪುಟ : x + ೨೪೦** **ಬೆಲೆ : ರೂ. ೮೦**

**ವಿ. ಎನ್. ಮಲ್ಲಿಕಾರ್ಜುನಸ್ವಾಮಿ**, ರಿಜಿಸ್ಟ್ರಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

*ಕೆಲವೇ ದಶಕಗಳ ಹಿಂದೆ ಕನ್ನಡದಲ್ಲಿ ವಿಜ್ಞಾನದ ಬರವಣಿಗೆ ಸಾಕಷ್ಟಿರಲಿಲ್ಲ. ವಿಜ್ಞಾನದ ತಿಳುವಳಿಕೆಗೆ ಇಂಗ್ಲಿಷ್ ಭಾಷೆಯನ್ನು ಅವಲಂಬಿಸಬೇಕಾಗಿತ್ತು. ಇಂದು ಕೂಡ ಕನ್ನಡದಲ್ಲಿ ಸಾಕಷ್ಟು ನಿಯತಕಾಲಿಕೆಗಳಿಲ್ಲದಿದ್ದರೂ ಪುಸ್ತಕಗಳ ಮೂಲಕ ಕನ್ನಡಿಗರಿಗೆ ವಿಜ್ಞಾನದ ಮಾಹಿತಿ ಸಾಕಷ್ಟು ಸಿಗುತ್ತಿದೆ. ವಿಜ್ಞಾನದ ಬರಹಗಾರರು ತಮ್ಮ ತಮ್ಮ ಕ್ಷೇತ್ರಗಳಲ್ಲಿನ ಅನುಭವಗಳನ್ನು ಲೇಖನ-ಪುಸ್ತಕಗಳ ಮೂಲಕ ಓದುಗರಿಗೆ ತಲುಪಿಸುತ್ತಿದ್ದಾರೆ. ಪ್ರಪಂಚದಾದ್ಯಂತ ವಿಜ್ಞಾನ ಜನಪ್ರಿಯಗೊಳ್ಳುತ್ತಿದ್ದು, ಶೋಧನೆ ಮುಂದುವರಿಯುತ್ತಿದ್ದು, ಹೊಸ ಹೊಸ ಆವಿಷ್ಕಾರಗಳಿಂದ ಸ್ವಾರಸ್ಯಕರ ಸಂಗತಿಗಳು ಬಯಲಾಗುತ್ತಿವೆ. ವಿಜ್ಞಾನವು ಇಂದು ನಮಗೆ ಸುಖಸೌಕರ್ಯಗಳನ್ನು ಕಲ್ಪಿಸಿಕೊಟ್ಟಿದೆಯಾದರೂ ಅದರ ಅವಗುಣಗಳನ್ನು ಕಡೆಗಣಿಸುವಂತಿಲ್ಲ. ನಾವು ವಿಜ್ಞಾನದ ಸಾಧಕ ಬಾಧಕಗಳನ್ನು ಅರಿತುಕೊಂಡರೆ ಮಿತವಾಗಿ ಬಳಸಿಕೊಳ್ಳುವ ವಿವೇಕ ತೋರಿದರೆ ಖಂಡಿತವಾಗಿ ನೆಮ್ಮದಿಯಿಂದಿರಲು ಸಾಧ್ಯ. ಅದಕ್ಕೆ ಈ ವಿಜ್ಞಾನ ಲೇಖನಗಳು ಸಹಾಯ ಮಾಡುತ್ತವೆ. ವಿಜ್ಞಾನದ ವಿವಿಧ ಶಾಖೆಗಳಿಗೆ ಸಂಬಂಧಿಸಿದ ಸ್ವಾರಸ್ಯಕರ ಬರವಣಿಗೆ ಇಲ್ಲಿ ಮೂಡಿಬಂದಿದೆಯಲ್ಲದೆ ಇವುಗಳಿಗೆ ಜಾಗತಿಕ ವ್ಯಾಪ್ತಿ ಇದೆ. ವಿಜ್ಞಾನವು ಅಭಿವೃದ್ಧಿ ಹೊಂದಲಾರಂಭಿಸಿದಂದಿನಿಂದ ಇಂದಿನ ಮೊಬೈಲ್ ತಂತ್ರಜ್ಞಾನದವರೆಗೂ ಅಪೂರ್ವ ಮಾಹಿತಿ ಸಿಗುತ್ತದೆ. ವಿಜ್ಞಾನದ ಅವಲಂಬನೆಯಿಲ್ಲದೆ ಇಂದಿನ ಮಾನವ ಕ್ಷಣವನ್ನೂ ಕಳೆಯಲಾರ ಎಂಬುದು ಆಶ್ಚರ್ಯ ಉಂಟುಮಾಡಿದೆ.*

## ಪೂರ್ವಾವಲೋಕನ (ವಸಾಹತು ಪ್ರಜ್ಞೆ ಮತ್ತು ಸಾಂಸ್ಕೃತಿಕ ಅಧ್ಯಯನ)

*ಎಸ್. ಎನ್. ಬಾಲಗಂಗಾಧರ; ಕನ್ನಡಕ್ಕೆ : ರಾಜಾರಾಮ ಹೆಗಡೆ, ಸದಾನಂದ ಜೆ. ಎಸ್.*

**ಪುಟ : ೨೯೬** **ಬೆಲೆ : ರೂ. ೧೫೦**

**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦



*ಸಮಾಜ ವಿಜ್ಞಾನ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದ ಬರಹಗಳಿವು. ಪಾಶ್ಚಾತ್ಯ ಮತ್ತು ಪೌರ್ವಾತ್ಯ ಎಂಬ ಎರಡು ಪ್ರಧಾನ ಸಂಸ್ಕೃತಿಯ ಧಾರೆಗಳಿಂದು ಜಗತ್ತಿನ ಜನರ ಮುಂದಿವೆ. ಅಧ್ಯಯನಕ್ಕಾಗಿ ಅವುಗಳ ಒಳಹೊಕ್ಕು ವಿಶ್ಲೇಷಿಸಲು ನಮ್ಮ ಜೀವಮಾನವೇ ಸಾಲದೆನಿಸುವಷ್ಟು ಸಾಂಸ್ಕೃತಿಕ ವಿವಿಧತೆಗಳು ಅಲ್ಲಿವೆ. ಹೀಗಿರುವಾಗ ಯಾವ ದೇಶದ ಯಾವ ಸಂಸ್ಕೃತಿಯನ್ನೂ ಉತ್ತಮ ಅಥವಾ ಕನಿಷ್ಠ ಎಂದು ಗೆರೆಯೆಳೆದು ಪರಿಗಣಿಸುವಂತಿಲ್ಲ. ಯುರೋಪಿಯನ್ನರ ವಸಾಹತುಗಳು ಅಲ್ಲಲ್ಲಿ ಸ್ಥಾಪನೆಯಾಗಲು ಪ್ರಾರಂಭಿಸಿದಂದಿನಿಂದ ಆಯಾ ಪ್ರಾದೇಶಿಕ ಜನರೊಂದಿಗೆ ಸಂಸ್ಕೃತಿಗಳು ಸಾಕಷ್ಟು ವಿನಿಮಯಗೊಂಡಿವೆ; ಸಂಘರ್ಷಕ್ಕೂ ಎಡೆಗೊಟ್ಟಿವೆ. ಯೂರೋಪ್‌ನ ಜನರನ್ನು ವಿಶೇಷ ನಾಗರಿಕರೆಂದು ಪರಿಗಣಿಸಿ, ಅವರನ್ನು ಅನುಕರಿಸಿ ತಮ್ಮತನವನ್ನು ಬಿಟ್ಟುಕೊಟ್ಟವರಿದ್ದಾರೆ. ಹೀಗೆ ಸಾಂಸ್ಕೃತಿಕ ಭಿನ್ನತೆಗಳ ಅಧ್ಯಯನ ಇಲ್ಲಿರುವ ಲೇಖನಗಳಿಗೆ ಮೂಲಪ್ರೇರಣೆಯೆನ್ನಬಹುದು. ಭಾರತೀಯ ಸಂಸ್ಕೃತಿಯನ್ನು ಪಾಶ್ಚಾತ್ಯ ಸಂಸ್ಕೃತಿಗಿಂತ ಭಿನ್ನವಾಗಿಸುವ ಅಂಶ ಯಾವುದು ಎಂಬ ಹುಡುಕಾಟ ಇಲ್ಲಿದ್ದು ಮುಂದೆ ಜಾತ್ಯತೀತತೆ, ಮಾನವತಾವಾದ, ರಿಲಿಜನ್ ಬಗ್ಗೆಯೂ ವಿಸ್ತಾರವಾದ ಬರಹಗಳಿವೆ. ಜಗತ್ತಿನಲ್ಲೆಲ್ಲ ಹಬ್ಬಿರುವ ಜನಾಂಗ ದ್ವೇಷ, ಭಾರತದ ಜಾತಿ ವ್ಯವಸ್ಥೆಯ ಪದ್ಧತಿ, ಬುಡಕಟ್ಟು ಜನಾಂಗದ ದಮನ ಇವೆಲ್ಲ ಪ್ರಗತಿಗೆ ಅಡ್ಡಿಯಾಗಬಹುದಾದ ಅಂಶಗಳೆಂದು ಗುರುತಿಸಿ ಚರ್ಚಿಸಲಾಗಿದೆ. ಒಟ್ಟಿನಲ್ಲಿ ಬಹು ಸಂಸ್ಕೃತಿಗಳು ಒಟ್ಟಾಗಿ ತಮ್ಮ ತಮ್ಮಲ್ಲಿರುವ ಒಳ್ಳೆಯ ಅಂಶಗಳನ್ನು ಮಾತ್ರ ಸ್ವೀಕರಿಸಬೇಕೆಂಬ ಅಭಿಪ್ರಾಯ ಇಲ್ಲಿದೆ.*

**ನಮ್ಮದಿದು ಇತಿಹಾಸ** (ಸ್ಥಳೀಯ ಚರಿತ್ರೆಗಳು ಮತ್ತು ಸಂಸ್ಕೃತಿಗಳು)
*ಎಚ್. ಎಸ್. ಗೋಪಾಲ ರಾವ್*
**ಪುಟ : xvi + ೧೬೦** **ಬೆಲೆ : ರೂ. ೧೦೦**
**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ ವಿಜಯನಗರ, ಬೆಂಗಳೂರು - ೫೬೦ ೦೪೦

ಇತಿಹಾಸಕ್ಕೆ ಸಂಬಂಧಿಸಿದ ವಿವರಗಳು ಮತ್ತು ಸಂಸ್ಕೃತಿ ಸಂಬಂಧವಾದ ವಿವರಣೆಯನ್ನು ಶಾಸನದ ಆಧಾರಗಳ ಮೇಲೆ ಇಲ್ಲಿ ಪ್ರಸ್ತುತಪಡಿಸಲಾಗಿದೆ. ನಡೆದುಹೋದ ಯಾವುದೇ ಘಟನೆಯು ಅಕ್ಷರ ರೂಪದಲ್ಲಿ ದಾಖಲಿಸಲ್ಪಟ್ಟು ಸಂರಕ್ಷಿಸಲ್ಪಟ್ಟಾಗ ಅದೊಂದು ಶಾಶ್ವತ ಮಾಹಿತಿಯಾಗುತ್ತದೆ ಸೂರ್ಯ-ಚಂದ್ರ-ತಾರೆಗಳಿರುವವರೆಗೂ ಕೀರ್ತಿ ಅಮರವಾಗಿರಲಿ ಎಂಬುದು ಮಾನವನ ಹೆಬ್ಬಯಕೆ, ಅದಕ್ಕಾಗಿ ಅವನು ಬಾಯಿಮಾತಿನಲ್ಲೇ ಉಳಿದು ಬಂದಿದ್ದನ್ನು ಕಲ್ಲು ಮತ್ತು ತಾಮ್ರಗಳ ಮೇಲೆ ಕೆತ್ತಿಟ್ಟು ಇನ್ನೂ ಸುರಕ್ಷಿತವಾಗಿರುವಂತೆ ಮಾಡಿದ. ಮುಂದೆ ಬಹುಕಾಲದವರೆಗೂ ಚರಿತ್ರೆಯಲ್ಲಿ ಏನು ನಡೆದಿತ್ತೆಂಬುದರ ಸತ್ಯ, ಸ್ಪಷ್ಟ ಚಿತ್ರಣ ಸಿಗುವಂತಾಯಿತು. ಶಾಸನಗಳ ಅಧ್ಯಯನವು ಇತಿಹಾಸದ ಒಂದು ಭಾಗವೇ ಆಗಿಹೋಯಿತು. ಘಟನೆಗಳು ಕ್ಷಣಕ್ಷಣವೂ ನಡೆಯುತ್ತಲೇ ಇದ್ದು ಪ್ರತಿಯೊಂದನ್ನು ದಾಖಲಿಸುವುದು ಅಸಾಧ್ಯ. ಅತೀವ ಶೌರ್ಯಪ್ರದರ್ಶನ ಮಾಡಿದ ವೀರ, ಮಾನವ ಕಲ್ಯಾಣಕ್ಕಾಗಿ ಮಾಡಿದ ತ್ಯಾಗ ಮತ್ತು ಅದ್ಭುತವೆಂದು ಪರಿಗಣಿತವಾದದ್ದು ಇವುಗಳು ಚರಿತ್ರೆಯಲ್ಲಿ ದಾಖಲಾಗುತ್ತವೆ. ಅಂತಹ ವಿಶೇಷಗಳನ್ನು ಸಂಗ್ರಹಿಸಿದ ಈ ಪುಸ್ತಕದಲ್ಲಿ ವಿವಿಧ ಶಿಲ್ಪಗಳ ಮೂಲಕ ವಿವರಣೆ ಒದಗಿಸಲಾಗಿದೆ. ನಡೆದುಹೋದುದನ್ನು ತಿಳಿದುಕೊಳ್ಳುವುದರ ಮೂಲಕ, ನಮ್ಮ ಭವ್ಯ ಪರಂಪರೆಯನ್ನು ಅಭ್ಯಾಸ ಮಾಡುವುದರ ಮೂಲಕ ನಾವು ಇನ್ನು ಮುಂದೆ ಏನು ಮಾಡಿದರೆ, ಹೇಗೆ ನಡೆದುಕೊಂಡರೆ ಕ್ಷೇಮ ಎಂಬ ವಿವೇಕ-ಜಾಗೃತಿ ನಮ್ಮಲ್ಲಿ ಮೂಡಬೇಕು. ಇತಿಹಾಸದಿಂದ ಮನುಷ್ಯ ಬಹಳಷ್ಟು ಪಾಠ ಕಲಿಯಬಹುದು. ಇತಿಹಾಸವನ್ನವಲೋಕಿಸುತ್ತಲೇ ಇಂದಿನ ಹೆಜ್ಜೆಗಳನ್ನು ಸರಿಯಾಗಿ ಕ್ರಮಿಸಿದಲ್ಲಿ ಭವಿಷ್ಯ ಭವ್ಯವಾಗಲೂಬಹುದು.




**ಕಪ್ಪೆ ಅರಭಟ್ಟನ ಶಾಸನ** (ಹದಿಮೂರು ದಶಕಗಳ ಸಮಗ್ರ ಅಧ್ಯಯನ)
*ಸಂ. : ಷ. ಶೆಟ್ಟರ್*
**ಪುಟ : ೧೦೮** **ಬಿಡಿ ಪ್ರತಿ ಬೆಲೆ : ರೂ. ೮೦**
**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಮನುಷ್ಯನಿಗೆ ಶಾಶ್ವತವಾದುದರ ಕಡೆಗೆ ಒಲವು. ತಾನು ಕಂಡುದನ್ನು, ಅನುಭವಿಸಿದ್ದನ್ನು ಮುಂದಿನವರಿಗೆ ತಿಳಿಸುವ ಹಂಬಲ. ಅತಿ ಪ್ರಾಚೀನ ಕಾಲದಲ್ಲಿ ಮೌಖಿಕವಾಗಿ ಒಬ್ಬರಿಂದೊಬ್ಬರಿಗೆ ಮಾಹಿತಿ ಸಿಗುತ್ತಿತ್ತು. ಲಿಪಿ ಬಂದ ನಂತರ, ಕಲ್ಲಿನ ಹಾಗೂ ಲೋಹಗಳ ಮೇಲೆ ಕೆತ್ತಲ್ಪಟ್ಟದ್ದು ಬಹುಕಾಲ ಉಳಿಯಬಹುದೆಂದು ಮನಗಂಡಾಗ ಬರೆದು-ಕೊರೆದು ಇಡಲಾರಂಭಿಸಿದ. ಮಳೆ-ಗಾಳಿ-ಬೆಂಕಿಗಳಿಂದಲೂ ನಾಶವಾಗದ ಇವುಗಳನ್ನು ಶಾಸನಗಳೆಂದು ಕರೆದರು. ಸುಮಾರು ಒಂದು ಸಾವಿರ ವರ್ಷಕ್ಕಿಂತಲೂ ಹಳೆಯದಾದ ಬಾದಾಮಿ ಶಾಸನವೆಂದು ಪ್ರಸಿದ್ಧವಾದ ಕಪ್ಪೆ ಅರಭಟ್ಟನ ಶಾಸನವೊಂದನ್ನು ಕುರಿತು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸಲಾಗಿದೆ. ಬಹುವಿದ್ವಾಂಸರಿಂದ ಚರ್ಚಿತವಾದ, ವಿವಿಧ ಅಭಿಪ್ರಾಯಗಳನ್ನು ಹೊಂದಿದ ಇದನ್ನು ಬಹುಕೋನಗಳಿಂದ ವಿಮರ್ಶಿಸಲಾಗಿದ್ದು ಓದುಗರಿಗೆ ಸ್ವಾರಸ್ಯಕರ ಮಾಹಿತಿ ಸಿಗುತ್ತದೆ. ಶಾಸನಗಳ ಭಾಷೆ ಅಂದಿನ ಜನರ ಆಡುಭಾಷೆ ಅಥವಾ ಬರಹ ಭಾಷೆ. ಇಂದಿನ ಅಕ್ಷರ ವಿನ್ಯಾಸದ ಮತ್ತು ಪದ್ಧತಿಯ ನಿಖರತೆ ಅಲ್ಲಿಲ್ಲ. ಅಲ್ಲಿ ಅಕ್ಷರ ವಿನ್ಯಾಸಕ್ಕಿಂತ ಉಚ್ಚಾರ ಮುಖ್ಯ. ಶಾಸನಗಳನ್ನು ಅಭ್ಯಸಿಸುವುದು, ಅರ್ಥೈಸುವುದು ನಿಪುಣ ವಿದ್ವಾಂಸರಿಂದ ಮಾತ್ರ ಸಾಧ್ಯ. ಗುಣ ವಿಶೇಷಗಳನ್ನು ಹಾಡಿ ಹೊಗಳುವ, ನಡೆದ ಘಟನೆಯನ್ನು ನಿರೂಪಿಸುವ ಶಾಸನಗಳು ಇತಿಹಾಸದ ಅಧ್ಯಯನದ ಒಂದು ಭಾಗವಾಗಿ ಬೆಳೆದುಬಂದುದಷ್ಟೇ ಅಲ್ಲದೆ ಮೂಕಸಾಕ್ಷಿ ಹೇಳುತ್ತಾ ಅವು ಕೆಲವು ಸಮಸ್ಯೆಗಳನ್ನು ಪರಿಹರಿಸುತ್ತವೆ, ಕೆಲವು ಗೊಂದಲಗಳನ್ನು ಸೃಷ್ಟಿಸುತ್ತವೆ ಎನ್ನುವುದಕ್ಕಿಂತ ವಿದ್ವಾಂಸರ ಕೈಯಳತೆಗೆ ಅವು ಸಿಕ್ಕಿಲ್ಲ ಎನ್ನುವುದು ಸೂಕ್ತ. ಶಾಸನಗಳನ್ನು ಅಭ್ಯಾಸ ಮಾಡುವವರಿಗೆ ಕೈಪಿಡಿಯಂತಿದೆ ಈ ಪುಸ್ತಕ.

**– ಇಂದಿರಾಕುಮಾರಿ**
*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಭೂಮಿ ತೂಗುವ ಹಕ್ಕಿ** (ಕವನ ಸಂಕಲನ) ಜಿ. ಎಸ್. ಉಬರಡ್ಕ
**ಪುಟ : ೮೪** **ಬೆಲೆ : ರೂ. ೪೨**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/A, ಮೊದಲನೇ ಮಹಡಿ, ಎಂ.ಆರ್.ಎನ್. ಬಿಲ್ಡಿಂಗ್, ಕನಕಪುರ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಎಂ.ವಿ.ಸೀ. ಮರೆಯಲಾಗದ ನೆನಪು**
ಸಂ. : ಎಂ. ಎಸ್. ಭಾಸ್ಕರ್
**ಪುಟ : ೭೨** **ಬೆಲೆ : ರೂ. ೬೦**
**ಲಿಪಿ ಪ್ರಕಾಶನ,** ನಂ. ೧, ಬ್ಯೂಗಲ್‌ರಾಕ್ ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ನಿರ್ಧಾರಗಳನ್ನು ಕೈಗೊಳ್ಳುವುದು ಹೇಗೆ ?**
ಎಚ್. ಜಿ. ಸೋಮಶೇಖರ ರಾವ್
**ಪುಟ : ೫೬** **ಬೆಲೆ : ರೂ. ೬೦**
**ಸಿಂಚನ ಪ್ರಕಾಶನ,** ಕನ್ನಡ ವೇದಿಕೆ, ಎಸ್.ಎಸ್.ಎಂ.ಆರ್.ವಿ. ಕಾಲೇಜು ಆವರಣ, ೩೬ನೇ ಅಡ್ಡರಸ್ತೆ, ೨೬ನೇ ಮೈನ್, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧

**ಮೌನಧ್ಯಾನ** (ಕವನ ಸಂಕಲನ) ಎಸ್ಕೆ ಕೊನೆಸಾಗರ
**ಪುಟ : ೫೮** **ಬೆಲೆ : ರೂ. ೩೦**
**ಸಂಗಮ ಪ್ರಕಾಶನ,** ನವನಗರ, ಹುನಗುಂದ - ೫೮೭ ೧೧೮, ಬಾಗಲಕೋಟೆ ಜಿಲ್ಲೆ

**ನಂಬಿಕೆಯೇ ಜೀವನ** (ವಿಚಾರ ಕಥನ) ಬಿ. ಕೆ. ಶ್ರೀನಿವಾಸ
**ಪುಟ : ೧೨೬** **ಬೆಲೆ : ರೂ. ೯೫**
**ಶ್ರೀಹರ್ಷ ಪ್ರಕಾಶನ,** ೧೧/೩ ಬ್ಯಾಡರಹಳ್ಳಿ, ಹೊಸಹಳ್ಳಿ ಜಿ. ಪಾಳ್ಯ, ಮಾಗಡಿರಸ್ತೆ, ವಿಶ್ವನೀಡಂ ಅಂಚೆ, ಬೆಂಗಳೂರು - ೫೬೦ ೦೯೧

**ಕೊಂದವರಾರು** (ನಾಟಕ) ಪ್ರಸನ್ನ
**ಪುಟ : ೧೨೦** **ಬೆಲೆ : ರೂ. ೧೦೦**
**ಒಂಟದನಿ ಪ್ರಕಾಶನ,** ಕವಿ-ಕಾವ್ಯ, ಹೆಗ್ಗೋಡು - ೫೭೭ ೪೧೭, ಸಾಗರ

**ಹೊತ್ತು ಕಂತುವ ಮುನ್ನ** (ಆತ್ಮಕಥನ)
ಡಾ|| ಸಾರಾ ಅಬೂಬಕ್ಕರ್
**ಪುಟ : ೨೧೪** **ಬೆಲೆ : ರೂ. ೧೫೦**
**ಚಂದ್ರಗಿರಿ ಪ್ರಕಾಶನ,** ೨-೨೧-೧೬೩೧/೨, ಸೂಕ್ಷ್ಮತರಂಗ ನಿಲಯ ರಸ್ತೆ, ಮಂಗಳೂರು - ೫೭೫ ೦೦೬

**ಸಿಹಿನೀರ ಕೊಳ** (ಕವಿತೆಗಳು) ಸಿಪಿಲೆ ಸತೀಶ್
**ಪುಟ : ೫೨** **ಬೆಲೆ : ರೂ. ೨೦**
**ಸಾಗವಾನಿ ಪ್ರಕಾಶನ,** ನಂ. ೨೯೬೨, 'ಸುಮ', ೧೩ನೇ 'ಬಿ' ಮುಖ್ಯರಸ್ತೆ, ಅತ್ತಿಗುಪ್ಪೆ, ವಿಜಯನಗರ, ಬೆಂಗಳೂರು - ೪೦

**ಅರ್ಧಾಂಗಿ ಒಂದು ನೆನಪು...** (ಕವನ ಸಂಕಲನ)
ಮುಂಡವಾಡ ಚೆನ್ನಪ್ಪ
**ಪುಟ : ೧೦೬** **ಬೆಲೆ : ರೂ. ೭೫**
**ಕಸ್ತೂರಿ ಪ್ರಕಾಶನ,** 'ಕಸ್ತೂರಿ' ಶ್ರೀ ಕೊಟ್ಟೂರೇಶ್ವರ ಬ್ರಿಡ್ಜ್ ಹತ್ತಿರ, ಬೈಪಾಸ್ ರಸ್ತೆ, ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ

**ಕರ್ನಾಟಕ ಲೋಚನ** (ಷಾಣ್ಮಾಸಿಕ ವಿದ್ವತ್ ಪತ್ರಿಕೆ)
ಸಂ. : ಪ್ರೊ. ಜಿ. ಅಬ್ದುಲ್ ಬಷೀರ್
**ಪುಟ : ೧೦೨** **ಬಿಡಿ ಪ್ರತಿ ಬೆಲೆ : ರೂ. ೩೦**
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,** ಬಿ.ಎಂ.ಶ್ರೀ. ಕಲಾಭವನ, ೨ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೦

**ಇತಿಹಾಸ ದರ್ಪಣ** (ತ್ರೈಮಾಸಿಕ) ಸಂ. : ಹಂ. ಗು. ರಾಜೇಶ್
**ಪುಟ : ೭೨** **ಬೆಲೆ : ನಮೂದಿಸಿಲ್ಲ**
**ಇತಿಹಾಸ ದರ್ಪಣ,** ನಂ. ೩೩-A, ಐ.ಟಿ.ಐ. ಕಾಲೇಜ್ ಹತ್ತಿರ, ಕೆಂಪೇಗೌಡ ನಗರ, ವಿಶ್ವನೀಡಂ ಅಂಚೆ, ಬೆಂಗಳೂರು - ೫೬೦ ೦೯೧

**ಮಸಾಲೆ ಚುರಮುರಿ** (ಅಂಕಣ ಬರಹಗಳು)
ಪ್ರೊ|| ಧರಣೇಂದ್ರ ಕರಕುರಿ
**ಪುಟ : ೧೫೮** **ಬೆಲೆ : ರೂ. ೧೦೦**

**ಕುಂಚ ಮತ್ತು ಬಣ್ಣ** (ಕವನ ಸಂಕಲನ)
ಪ್ರೊ|| ಧರಣೇಂದ್ರ ಕರಕುರಿ
**ಪುಟ : ೫೬** **ಬೆಲೆ : ರೂ. ೪೦**

**ಒಂದು ಮುರುಕು ಖುರ್ಚಿ** (ನಾಟಕ) ಇಸ್ಮಾಯಿಲ್ ಸುರಾನಾ
ಅನು : ಪ್ರೊ|| ಧರಣೇಂದ್ರ ಕರಕುರಿ
**ಪುಟ : ೫೬** **ಬೆಲೆ : ರೂ. ೩೫**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಸುಮುಖ ಪ್ರಕಾಶನ,** ನಂ. ೧೭೪೩/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಭ**ಯೋತ್ಪಾದನೆಯನ್ನು ಜಾಗತೀಕರಣಗೊಳಿಸಿದ ಭೂಪ ಒಸಾಮಾ ಬಿನ್ ಲಾಡೆನ್‌ಅಮೆರಿಕಾದ ಸೇನೆಯ ಗುಂಡಿಗೆ ಹತನಾದ. ಇದು ಅನಿರೀಕ್ಷಿತವೇನಲ್ಲ. ಹತ್ತು ವರ್ಷಗಳಿಂದ ಅವನ ಬೆನ್ನಟ್ಟಿತ್ತು ಅಮೆರಿಕಾ. ನ್ಯೂಯಾರ್ಕ್ ನಗರದ ಜಾಗತಿಕ ವಾಣಿಜ್ಯ ಕೇಂದ್ರದ ಕಟ್ಟಡದ ಮೇಲೆ ದಾಳಿ ನಡೆಸಿ ಜಗತ್ತನ್ನೇ ತಲ್ಲಣಗೊಳಿಸಿದ ಬಿನ್ ಲಾಡೆನ್ ಕಟ್ಟಿದ ಅಲ್‌ಖೈದಾ ಸಂಘಟನೆ ಇನ್ನೂ ಜೀವಂತ, ದೇಶದೇಶಗಳಲ್ಲಿ ಹರಡಿಕೊಂಡಿದೆ. ಲಾಡೆನ್ ಹತ್ಯೆಯಿಂದ ಪ್ರಪಂಚದಲ್ಲಿ ಭಯೋತ್ಪಾದನೆ ಅಂತ್ಯಗೊಳ್ಳದು. ೧೯೯೨ರಿಂದಲೇ ಲಾಡೆನ್ ಅಮೆರಿಕಾದ ಶತ್ರು. ಆಗಲೇ ಅಲ್‌ಖೈದಾ ನ್ಯೂಯಾರ್ಕ್‌ನಲ್ಲಿ ಬಾಂಬು ಸಿಡಿಸಿತ್ತು. ಅಮೆರಿಕಾ ಪಾಕಿಸ್ತಾನದ ಮೇಲೆ ನಿರಂತರವಾಗಿ ಅತಿಕ್ರಮಣ ನಡೆಸಿದೆ. ಆಫ್ಘಾನಿಸ್ತಾನದ ಗಡಿಯಿಂದ ಹಾರಿಸುವ ಡ್ರೋನಿಯರ್ ಕ್ಷಿಪಣಿಗಳು ಪಾಕಿಸ್ತಾನದ ಗಡಿಪ್ರದೇಶಗಳಲ್ಲಿ ಅನೇಕ ಜನಸಾಮಾನ್ಯರನ್ನು ಹತ್ಯೆಗೈದಿವೆ. ಅಮೆರಿಕಾದೊಂದಿಗೆ ನಿಕಟ ಸಂಬಂಧ, ಅದು ನೀಡುವ ನೆರವಿನ ಮೇಲೆ ಅವಲಂಬನೆ ಹೇಗೆ ಒಂದು ರಾಷ್ಟ್ರವನ್ನು ಅದರ ಗುಲಾಮನನ್ನಾಗಿಸುತ್ತದೆ



# ಲಾಡೆನ್ ಹತ್ಯೆಯಾಯಿತು-ಮುಂದೇನು?



ಆಗಿನಿಂದಲೇ ಅಮೆರಿಕಾ ಅವನನ್ನು ಹಿಡಿಯಲು ತೊಡಗಿತ್ತು. ಭಯೋತ್ಪಾದನೆಗೆ ಈತನನ್ನು ಹಚ್ಚಿದ್ದೂ ಅಮೆರಿಕವೆ. ಸೌದಿ ಅರೇಬಿಯದ ಅರಸು ಮನೆತನಕ್ಕೆ ಸೇರಿದ ಶ್ರೀಮಂತ ಕುಟುಂಬದ ಒಸಾಮಾ ಬಿನ್ ಲಾಡೆನ್ ಒಂದು ಕಾಲದಲ್ಲಿ ಅಮೆರಿಕಾದ ಆಪ್ತ. ಆಫ್ಘಾನಿಸ್ತಾನದಲ್ಲಿ ಸೋವಿಯತ್ ಸೇನೆಯ ವಿರುದ್ಧ ಕಾದಾಡಲು ಮುಜಾಹಿದ್ದೀನ್‌ಗಳನ್ನು ಸಂಘಟಿಸಲು ಅಮೆರಿಕಾ ಲಾಡೆನ್‌ಅನ್ನು ಬಳಸಿಕೊಂಡು, ಸಾಕಷ್ಟು ಹಣ ನೀಡಿ, ಶಸ್ತ್ರಾಸ್ತ್ರಗಳನ್ನು ನೀಡಿ ಬೆಳೆಸಿದರು. ಅನಂತರ ಕೈಬಿಟ್ಟರು. ಅವನು ತಿರುಗಿಬಿದ್ದ. ಇದು ಅಮೆರಿಕಾ ಬೆಳೆಸಿಕೊಂಡು ಬಂದಿರುವ ಪರಂಪರೆ. ತಮ್ಮ ಸ್ವಾರ್ಥಸಾಧನೆಗಾಗಿ ಬೇರೆ ಬೇರೆ ದೇಶಗಳಲ್ಲಿ ಬೇಕಾದವರನ್ನು ಹುಟ್ಟುಹಾಕಿ, ಬೆಳೆಸಿ ಆಮೇಲೆ ಕೈಬಿಟ್ಟವರ ದೊಡ್ಡ ಪಟ್ಟಿಯೇ ಇದೆ. ಇರಾಕಿನ ಸದ್ದಾಮ್ ಹುಸೇನ್, ಕಾಂಗೋದ ಷೋಂಬೆ, ಲಿಬಿಯಾದ ಗದಾಫಿ ಮುಂತಾದವರು ಉದಾಹರಣೆ.

ಹಾಗೆಯೇ ಅನ್ಯದೇಶಗಳ ಮೇಲೆ ಎಗ್ಗಿಲ್ಲದೆ ದುರಾಕ್ರಮಣ ನಡೆಸುವುದೂ ಅಮೆರಿಕಾದ ಜಾಯಮಾನ. ಆಫ್ಘಾನಿಸ್ತಾನ, ಇರಾಕ್‌ಗಳ ಆಕ್ರಮಣ ಇತ್ತೀಚಿನದು. ಅನ್ಯದೇಶಗಳ ಸ್ವಾತಂತ್ರ್ಯ, ಸಾರ್ವಭೌಮತ್ವಗಳ ಉಲ್ಲಂಘನೆಯನ್ನು ಅಮೆರಿಕಾ ತನ್ನ ಹಕ್ಕು ಎನ್ನುವಂತೆ ನಡೆದುಕೊಳ್ಳುತ್ತದೆ. ಪರೋಕ್ಷವಾಗಿ ತನ್ನ ಕುಖ್ಯಾತ ಗೂಢಚರ್ಯೆ ಸಂಸ್ಥೆ ಸಿಐಎ ಭಂಟರಿಂದ ನಿರಂತರವಾಗಿ ನಡೆಸುವ ದುಷ್ಕೃತ್ಯಗಳು ಒಂದು ಕಡೆಯಾದರೆ, ನೇರವಾಗಿ ಸೇನೆ ನುಗ್ಗಿಸಿ ಕಾರ್ಯಾಚರಣೆ ನಡೆಸುವುದು ಇನ್ನೊಂದು ಬಗೆ. ಪಾಕಿಸ್ತಾನದಲ್ಲಿ ಐದು ವರ್ಷಗಳಿಂದ ಅಡಗಿ ಕುಳಿತಿದ್ದ ಒಸಾಮಾ ಬಿನ್ ಲಾಡೆನ್‌ಅನ್ನು ಅಮೆರಿಕಾ ಹತ್ಯೆಗೈದದ್ದೂ, ಅತಿಕ್ರಮಣದಿಂದಲೆ. ಪಾಕಿಸ್ತಾನದ ರಾಜಧಾನಿ ಇಸ್ಲಾಮಾಬಾದಿನ ಸಮೀಪದಲ್ಲಿರುವ ಅಬ್ಬೊಟಾಬಾದ್ ಎಂಬಲ್ಲಿ ಐದು ವರ್ಷಗಳಿಂದ ದೊಡ್ಡ ಬಂಗಲೆಯೊಂದರಲ್ಲಿ ಐಷಾರಾಮಿ ಜೀವನ ನಡೆಸುತ್ತಿದ್ದನೆಂದು ಹೇಳಲಾದ ಲಾಡೆನ್ ಮೇಲೆ ಅಮೆರಿಕಾದ ನೌಕಾಪಡೆ ರಾತ್ರೋರಾತ್ರಿ ದಾಳಿ ನಡೆಸಿತು. ಪಾಕಿಸ್ತಾನದ ಸರಕಾರಕ್ಕೆ ಇದರ ಸುಳಿವೂ ಹತ್ತಲಿಲ್ಲ, ನಲವತ್ತು ನಿಮಿಷಗಳ ಗುಂಡಿನ ಸಮರ ನಡೆಸಿದರು. ಇದರಿಂದ ಪಾಕಿಸ್ತಾನ ಸರಕಾರ ಪೇಚಿಗೆ ಸಿಕ್ಕಿದೆ. ಅಮೆರಿಕಾದ ಕ್ರಮ ಹಲವಾರು ಪ್ರಶ್ನೆಗಳಿಗೆ ಎಡೆಕೊಟ್ಟಿದೆ. ಎರಡೂ ದೇಶಗಳ ನಡುವೆ ಸಂಬಂಧಗಳು ಹಳಸಿಕೊಂಡಿವೆ. ಪಾಕ್ ಸರಕಾರ ತನ್ನ ಪ್ರತಿಭಟನೆಯನ್ನು ವ್ಯಕ್ತಗೊಳಿಸದೆ, ಆಕ್ರೋಶ ತೋಡಿಕೊಂಡಿದೆ. ಇನ್ನೇನೂ ಮಾಡುವಂತಿಲ್ಲ, ಏಕೆಂದರೆ ಅಮೆರಿಕಾ ಪಾಕಿಸ್ತಾನದ ಕೈಬಿಡುವಂತಿಲ್ಲ, ಪಾಕಿಸ್ತಾನಕ್ಕೆ ಅಮೆರಿಕಾ ಕೈಬಿಟ್ಟರೆ ಉಳಿಗಾಲವಿಲ್ಲ. ಆದ್ದರಿಂದ ಪಾಕ್-ಅಮೆರಿಕಾ ಸಂಬಂಧಗಳ ಕುರಿತು ಕತೆಕಟ್ಟುವುದು ಸರಿಯಲ್ಲ. ಪಾಕಿಸ್ತಾನ ಏನೇ ಅಬ್ಬರಿಸಿದರೂ ಅವೆಲ್ಲ ಗೋಣಗಾಟ ಅಷ್ಟೆ. ದೊಡ್ಡಣ್ಣನ ಮುಂದೆ ಈ ಆಟವೇನೂ ನಡೆಯದು. ನಮ್ಮ ಮಾಧ್ಯಮಗಳವರು, ಅವರು ನಡೆಸುವ ಒಣ ಚರ್ಚೆಯಲ್ಲಿ ಭಾಗವಹಿಸುವವರು, ಇದನ್ನು ಅರಿತುಕೊಳ್ಳಬೇಕು.

ಅಮೆರಿಕಾದ ಕಾರ್ಯಾಚರಣೆ ಎಲ್ಲ ರೀತಿಯಿಂದಲೂ ಪಾಕಿಸ್ತಾನದ ಮೇಲೆ ನಡೆಸಿದ ದುರಾಕ್ರಮಣ. ಅಲ್‌ಖೈದಾ ಮತ್ತು ತಾಲಿಬಾನ್ ಉಗ್ರರ ವಿರುದ್ಧ ಸಮರ ಸಾರಿರುವ ಎನ್ನುವುದಕ್ಕೆ ಪಾಕಿಸ್ತಾನ ಒಂದು ಉದಾಹರಣೆ. ಭಾರತ ಇದರಿಂದ ಪಾಠ ಕಲಿಯಬೇಕಾಗಿದೆ. ಅಮೆರಿಕಾದೊಂದಿಗೆ ಕೈಜೋಡಿಸಲು ಹಾತೊರೆಯುತ್ತಿರುವ ಮನಮೋಹನ್‌ಸಿಂಗ್ ಮತ್ತು ಕಂಪೆನಿ ಇದನ್ನು ಅರಿಯಬೇಕು. ಪಾಕ್-ಅಮೆರಿಕಾ ಸಂಬಂಧಗಳು ಇನ್ನೇನು ಮುರಿದುಬಿದ್ದಿವೆ, ಅಮೆರಿಕಾದೊಂದಿಗೆ ಮೈತ್ರಿ ಬೆಸೆಯಲು ಭಾರತಕ್ಕೆ ಇದು ಸಕಾಲ ಎಂದು ಪ್ರತಿಪಾದಿಸುವವರು ನಮ್ಮ ದೇಶದಲ್ಲಿ ಕಡಿಮೆ ಏನಿಲ್ಲ. ಹಾಗೆಯೇ, ಭಾರತ ಪಾಕಿಸ್ತಾನದೊಂದಿಗೆ ಮಾತುಕತೆ ಮುಂದುವರಿಸಕೂಡದು, ಭಯೋತ್ಪಾದನೆಗೆ ಮೂಲವಾಗಿರುವ ಆ ದೇಶದೊಂದಿಗೆ ವ್ಯವಹರಿಸಕೂಡದು ಎಂದು ಹೇಳುವವರಿದ್ದಾರೆ. ಅಮೆರಿಕಾ ಲಾಡೆನ್ ಹತ್ಯೆಗೈಯ್ಯಲು ನಡೆಸಿದ ಕಾರ್ಯಾಚರಣೆಯಂತೆಯೇ ಮುಂಬೈ ಸೆಪ್ಟೆಂಬರ್ ೨೬ರ ದಾಳಿಯ ರೂವಾರಿಗಳ ಮೇಲೆ ದಾವೂದ್ ಇಬ್ರಾಹಿಂನ ಮೇಲೆ ಭಾರತ ಕ್ರಮ ಕೈಗೊಳ್ಳಬೇಕು ಎಂದು ವಾದಿಸುವವರಿದ್ದಾರೆ. ಇಂಥ ಹೇಳಿಕೆಗಳೆಲ್ಲ ಹುರುಳಿಲ್ಲದ್ದು, ಬೇಜವಾಬ್ದಾರಿಯದು. ಭಾರತ ಅಮೆರಿಕಾವಲ್ಲ ಎಂಬುದನ್ನು ತಿಳಿದುಕೊಂಡರೆ ಸಾಕು.

ಬಿನ್ ಲಾಡೆನ್ ಸಾವು ಅನೇಕ ಸವಾಲುಗಳನ್ನು ಒಡ್ಡಿದೆ. ಒಂದು : ಅಲ್‌ಖೈದಾ ಪ್ರತೀಕಾರ ಮನೋಭಾವದಿಂದ ಭಯೋತ್ಪಾದನಾ ಕೃತ್ಯಗಳನ್ನು ಕೈಗೊಳ್ಳುವ ಸಾಧ್ಯತೆಗಳಿವೆ. ಅರಬ್ ಮತ್ತು ಇಸ್ಲಾಮಿಕ್ ರಾಷ್ಟ್ರಗಳ ಸಮುದಾಯ ಎದುರಿಸುತ್ತಿರುವ ಸಮಸ್ಯೆಗಳು ಪರಿಹಾರವಾಗುವವರೆಗೆ ಭಯೋತ್ಪಾದನೆ ಅಂತ್ಯಗೊಳ್ಳದು. ಅಮೆರಿಕಾ ಅನುಸರಿಸುತ್ತ ಬಂದಿರುವ ನೀತಿಗಳೇ ಇದಕ್ಕೆ ಕಾರಣ. ಪಾಕಿಸ್ತಾನದಲ್ಲಿ ಐದು ವರ್ಷಗಳಿಂದ ದೊಡ್ಡ ಬಂಗಲೆಯಲ್ಲಿ ವಾಸಿಸುತ್ತಿದ್ದ ಲಾಡೆನ್‌ನ ಸುಳಿವು ಪಾಕಿಸ್ತಾನ ಸರಕಾರಕ್ಕೆ ತಿಳಿದಿರಲಿಲ್ಲವೇ ? ತಿಳಿದಿದ್ದರೂ ಅದು ಸುಮ್ಮನಿತ್ತೆ? ಲಾಡೆನ್‌ಗೆ, ಅಲ್‌ಖೈದಾಗೆ ರಕ್ಷಣೆ ಒದಗಿಸುತ್ತಿರುವುದು ಪಾಕಿಸ್ತಾನದ ಗೂಢಚರ್ಯೆ ಸಂಸ್ಥೆ ಐಎಸ್‌ಐ ಹಾಗೂ ಪಾಕಿಸ್ತಾನ ಸೇನೆಯ ಒಂದು ವಿಭಾಗ. ನಡೆದಿರುವ ವಿದ್ಯಮಾನಗಳನ್ನು ಗಮನಿಸಿದರೆ ಇದು ವೇದ್ಯವಾಗುತ್ತದೆ.

ಘಟನೆಯಿಂದ ಪಾಕಿಸ್ತಾನ ಸರಕಾರ ಮುಜುಗರ ಅನುಭವಿಸುತ್ತಿದೆ. ಹತಾಶೆಯಿಂದ ಅದು ವಿತಂಡ ವಾದ ನಡೆಸುತ್ತಿದೆ. ಅಮೆರಿಕಾದ ಮೂಲಗಳಿಗೆ ಲಾಡೆನ್ ಅಡಗುತಾಣದ ವಿಚಾರ ತಿಳಿದಿರಲು ಸಾಧ್ಯತೆಗಳು ಹೆಚ್ಚು. ಕಾರ್ಯಾಚರಣೆಗೆ ಆಯ್ಕೆ ಮಾಡಿಕೊಂಡ ಘಳಿಗೆಗೆ ಹಲವು ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ರಾಜಕಾರಣ ತಳಕು ಹಾಕಿಕೊಂಡಿರಲು ಸಾಕು. ಎರಡನೇ ಬಾರಿ ಅಧ್ಯಕ್ಷರಾಗಿ ಆಯ್ಕೆಗೆ ಒಬಾಮಾಗೆ ಒಸಾಮ ಹತ್ಯೆ ಒಂದು ಮೆಟ್ಟಿಲು ಆಗುವುದರಲ್ಲಿ ಅನುಮಾನವಿಲ್ಲ. ಅಮೆರಿಕಾದ ಗುಪ್ತಚರ ಸಂಸ್ಥೆ ಎಂಥ ವಿಸ್ತಾರವಾದ ಜಾಲ ಹೊಂದಿದೆ ಎನ್ನುವುದಕ್ಕೆ ಲಾಡೆನ್ ಪ್ರಕರಣ ಇನ್ನೊಂದು ಸಾಕ್ಷಿ. ತನ್ನ ಹಿತಸಾಧನೆಗಾಗಿ ಅಗತ್ಯಬಿದ್ದರೆ ಅಮೆರಿಕಾ ಏನು ಬೇಕಾದರೂ ಮಾಡಲು ಸಿದ್ಧ. ಪ್ರಜಾತಂತ್ರ ಸ್ವಾತಂತ್ರ್ಯಗಳಲ್ಲಿ ಆಸಕ್ತಿ ಇರುವ ಜನತೆ ಎಚ್ಚರದಿಂದಿರಬೇಕಾಗಿದೆ. ಲಾಡೆನ್ ಹತ್ಯೆಯಿಂದ ಬೀಗುತ್ತಿರುವ ಅಮೆರಿಕಾದ ದುಸ್ಸಾಹಸಗಳನ್ನು ಇತಿಹಾಸ ಎಂದಿಗೂ ಕ್ಷಮಿಸದು. ಹಾಗೆಯೇ ದೇಶವೊಂದರ ಗಡಿಯ ಉಲ್ಲಂಘನೆಯೂ ಅಸಹನೀಯ. ರಕ್ತಬೀಜಾಸುರನನ್ನು ಸೃಷ್ಟಿಸುವ ಕಾರ್ಯವನ್ನು ಅಮೆರಿಕಾ ಇನ್ನಾದರೂ ಕೈಬಿಡಲಿ. ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಗೌರವಿಸಲಿ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



ಡಾ|| ಜಿ. ಆರ್. ತಿಪ್ಪೇಸ್ವಾಮಿ ✍

# ಡಾ|| ಎಂ. ಎಸ್. ವೇದಾ ಅವರ ಸಣ್ಣ ಕತೆಗಳು 'ಈತನಕ'ದ ನೆಪದಲ್ಲಿ

**ಡಾ||** ಎಂ. ಎಸ್. ವೇದಾ ಅವರು ೧೯೮೫ರಲ್ಲಿ 'ಕಾವ್ಯಕೂಸು' ಸಂಕಲನದ ಮೂಲಕ ಕಾವ್ಯಕ್ಷೇತ್ರವನ್ನು ಪ್ರವೇಶಿಸಿದರು. ನಂತರ 'ಗಂಗೋತ್ರಿಯಲ್ಲಿ' (೧೯೮೭), 'ಬಿಳಲುಗಳು' (೧೯೮೯), 'ದಾಖಲಾಗುವುದು ಬೇಡ' (೨೦೦೪) ಮತ್ತು ಇತರಕಾವ್ಯ ಸಂಗ್ರಹಗಳನ್ನು ಹೊರತರುವ ಮೂಲಕ ಆಧುನಿಕ ಕಾವ್ಯ ಕ್ಷೇತ್ರದಲ್ಲಿ ತನ್ನದೇ ಆದ ಛಾಪು ಮೂಡಿಸುವ ಕಾಲಕ್ಕಾಗಲೇ ಅವರ ಮನಸ್ಸು ಗದ್ಯದತ್ತ, ಅದರಲ್ಲೂ ಕಥಾ ಸಾಹಿತ್ಯದತ್ತ ಹೊರಳಿತು. 'ಜಮೀನು' (೨೦೦೦), 'ಜಯ' (೨೦೦೪), 'ಕಪ್ಪು ಕಿವಿಯ ಬಿಳಿ ಕುದುರೆಗಳು' (೨೦೦೭) ಕಾದಂಬರಿಗಳನ್ನೂ ರಚಿಸಿ ಕಾದಂಬರಿಕಾರರೆನಿಸಿದರು. ಕಾವ್ಯಕ್ಕೆ ಸಮೀಪವಾದದ್ದು ಸಣ್ಣಕತೆ. ಈ ಎರಡೂ ಪ್ರಮುಖವಾದ ಸೃಜನಶೀಲ ಪ್ರಕಾರಗಳೇ ಆಗಿವೆ. ಕಾವ್ಯರಚನೆಯ ಜೊತೆಜೊತೆಯಲ್ಲಿಯೇ ಕಥಾರಚನೆಯನ್ನು ರೂಢಿಸಿಕೊಂಡು ಬಂದ ವೇದಾ ಅವರು ೧೯೮೮ರಿಂದಲೇ ಅತ್ಯಂತ ಕ್ರಿಯಾಶೀಲರಾದರು. ಕಾಲಕ್ರಮದಲ್ಲಿ 'ಪ್ರೀತಿ ಮತ್ತು ಸಾವು' (೧೯೯೩), 'ಪಾಲು' (೧೯೯೭), 'ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ' (೨೦೦೨), 'ಮುಳ್ಳ ಮನೆಯ ಮೇಲೆ' (೨೦೦೯) ಕಥಾಸಂಕಲನಗಳನ್ನು ಹೊರತಂದರು. ಇದೀಗ ಈ ನಾಲ್ಕು ಸಂಕಲನದ ಕಥೆಗಳು ಇದೇ ಕಾಲಾನುಕ್ರಮಣಿಕೆಯಲ್ಲಿ 'ಎಂ. ಎಸ್. ವೇದಾರ ಸಣ್ಣಕಥೆಗಳು 'ಈತನಕ' ಎಂಬ ಹೆಸರಿನಲ್ಲಿ ಸಮಗ್ರ ಕಥಾಸಂಕಲನದ ಸ್ವರೂಪವನ್ನು ಪಡೆದಿರುವುದು ಸ್ವಾಗತಾರ್ಹ ವಿಷಯ.

ನಿರಂತರವಾಗಿ ಕಥಾರಚನೆಯಲ್ಲಿ ತೊಡಗುವುದು ಮತ್ತು ಅದನ್ನು ಸಮಗ್ರ ಸ್ವರೂಪಕ್ಕೆ ತರುವುದು ಈ ಎರಡೂ ಮಹತ್ವದ ಕಾರ್ಯಗಳೆ. ಯಾಕೆಂದರೆ, ಸೃಜನಶೀಲ ಕ್ರಿಯೆಯಲ್ಲಿ ತೊಡಗುತ್ತಲೇ ಕಾಲ ಬದಲಾವಣೆಯಲ್ಲಿ ಆಗುವ ಪ್ರಕ್ರಿಯೆಯನ್ನು ಕತೆಗಳಲ್ಲಿ ತಂದುಕೊಳ್ಳುವ ದೃಷ್ಟಿಯಿಂದ ತಮ್ಮನ್ನು ತಾವು ಆತ್ಮವಿಮರ್ಶೆಗೆ ಒಳಪಡಿಸಿಕೊಳ್ಳುವ ಆರೋಗ್ಯಕಾರಿ ಬೆಳವಣಿಗೆಯನ್ನು ಗುರುತಿಸಲು ಇಂಥ ಪ್ರಯತ್ನಗಳು ನೆರವಾಗುತ್ತವೆ. ಈ ದೃಷ್ಟಿಯಲ್ಲಿ ವೇದಾ ಅವರ ಪ್ರಯತ್ನ ನಿಜಕ್ಕೂ ಪ್ರಶಂಸಾರ್ಹವಾದುದು. ೮೦-೯೦ರ ದಶಕ ಸಣ್ಣಕಥಾರಚನೆಯ ದೃಷ್ಟಿಯಿಂದ ಪ್ರಮುಖವಾದ ಕಾಲಘಟ್ಟ. ಹಲವು ಸಂವೇದನೆಗಳು ಅಭಿವ್ಯಕ್ತಗೊಂಡ ಸಂದರ್ಭವದು. ಇಂಥ ಸಾಹಿತ್ಯ ಸಮೃದ್ಧಿಯ ಕಾಲದಲ್ಲಿ ಪ್ರಕಟವಾದದ್ದು ವೇದಾ ಅವರ ಪ್ರಥಮ ಕಥಾಸಂಕಲನ 'ಪ್ರೀತಿ ಮತ್ತು ಸಾವು'. ಇದು ಪ್ರಕಟಗೊಂಡದ್ದು ೧೯೯೩ರಲ್ಲಾದರೂ ಈ ಸಂಕಲನದಲ್ಲಿನ ಕತೆಗಳು ರಚನೆಗೊಂಡದ್ದು ಮಾತ್ರ ೧೯೮೮ರಿಂದ ೧೯೯೧ರವರೆಗಿನ ಅವಧಿಯಲ್ಲಿ. ಇದರಲ್ಲಿಯ ಹನ್ನೆರಡು ಕತೆಗಳು ತರಂಗ, ಸುಧಾ, ಮಯೂರ, ತುಷಾರ, ವನಿತಾ, ಮೈಸೂರು ಮಿತ್ರ – ಮುಂತಾದ ಪ್ರತಿಷ್ಠಿತ ವಾರಪತ್ರಿಕೆ, ಮಾಸಪತ್ರಿಕೆ, ದಿನಪತ್ರಿಕೆಗಳಲ್ಲಿ ಪ್ರಕಟಗೊಂಡಂಥವು. ಅಂದರೆ ಈಗಾಗಲೇ ಓದುಗರಿಗೆ ಪರಿಚಿತವಾದಂಥವು.

ಗ್ರಾಮೀಣ ಮತ್ತು ನಗರದಲ್ಲಿನ ಬದುಕನ್ನು ಕುರಿತಾದ ರಚನೆಗಳಿವು. ಗ್ರಾಮ ನೆಲೆಯಲ್ಲಿದ್ದು ನಗರವನ್ನು, ನಗರನೆಲೆಯಲ್ಲಿದ್ದು ಗ್ರಾಮವನ್ನು ಅವಲೋಕಿಸುವ ಪರಿಯೇ ಅತ್ಯಂತ ಕುತೂಹಲಕಾರಿಯಾದದ್ದು. ಗ್ರಾಮಭಾರತವನ್ನು ಕೇಂದ್ರವಾಗಿಸಿಕೊಂಡ ಇಲ್ಲಿಯ ಕತೆಗಳಲ್ಲಿ ಸ್ತ್ರೀಪುರುಷರ ಸಂಬಂಧವನ್ನು ಶೋಧಿಸುತ್ತ ಅದರ ವಸ್ತುಸ್ಥಿತಿಯನ್ನು ಮುಂದಿಡುವ ಕಲೆಗಾರಿಕೆ ಎದ್ದು ಕಾಣುವ ಅಂಶವಾಗಿದೆ. ಈ ಸಂಕಲನದ ಅನುಕ್ತ, ಉರಿದವರು, ಪ್ರೀತಿ ಮತ್ತು ಸಾವು, ಮಳೆಯ ಒಂದು ರಾತ್ರಿಯಲ್ಲಿ, ಹಂದಿ ಮತ್ತು ದಾಯಾದಿ, ಕುರುಕ್‌ಸೇತ್ರವೂ ಕುಂಯ್ಯನೆಂಬ ಬಾಲನ ಕತ್ತಲ ಲೋಕವೂ ಮುಂತಾದ ಕತೆಗಳನ್ನು ಗಮನಿಸಿದರೆ ಅಭಿವ್ಯಕ್ತಿ ಕ್ರಮಗಳಲ್ಲಿ ಮತ್ತು ಭಾಷೆಯ ಬಳಕೆಯಲ್ಲಿ ವೈವಿಧ್ಯತೆಗಳಿರುವುದನ್ನು ಗುರುತಿಸಬಹುದು. ಗ್ರಾಮೀಣ ಬದುಕನ್ನು ಕತೆಯಲ್ಲಿ ತುಂಬಿಕೊಡುವಾಗ ತೋರುವ ಅದಮ್ಯ ಉತ್ಸಾಹವಂತೂ ಎಲ್ಲ ಕತೆಗಳಲ್ಲೂ ಗೋಚರವಾಗುವ ಅಂಶವಾಗಿದೆ. ಪರಂಪರಾಗತ ಬದುಕನ್ನೂ, ಸಮೃದ್ಧವಾದ ಸಾಂಸ್ಕೃತಿಕ ವಿವರಗಳನ್ನೂ ನೀಡುವುದರಲ್ಲಿ, ಅವನ್ನು ರೂಪಕಗಳನ್ನಾಗಿ ರೂಪಿಸುವುದರಿಂದಾಗಿ ಕತೆಗಳು ಕಲಾತ್ಮಕವಾಗಿಯೂ ಕಂಗೊಳಿಸಲು ಸಾಧ್ಯವಾಗಿದೆ. ವಿಭಿನ್ನ ಪರಿಸರಗಳ ಬದುಕಿನ ಸ್ಥಿತ್ಯಂತರಗಳನ್ನೂ ಶೋಧಿಸುವುದು ಗಮನಾರ್ಹ ಸಂಗತಿಯಾಗಿದ್ದು ಪ್ರೀತಿ ಪ್ರೇಮ, ಮೋಸ ವಂಚನೆ, ಸುಖ-ದುಃಖ, ನೀತಿ-ಅನೀತಿ, ನಂಬಿಕೆ, ಆಚಾರ, ವಿಚಾರಗಳು ಕಥಾ ಹಂದರದಲ್ಲಿ ಸಾಂದರ್ಭಿಕವಾಗಿ ಮೂಡುವುದರ ಮೂಲಕ ಸಮಾಜಮುಖಿ ಎನಿಸುತ್ತವೆ.

ವೇದಾ ಅವರ ಕಥಾಸಾಹಿತ್ಯದ ಕೇಂದ್ರವೇ ಬದುಕಿನ ವಿವಿಧ ನೆಲೆಗಳು. ಅದರಲ್ಲೂ ಮಹಿಳಾ ಸಮುದಾಯದ ವಿವಿಧ ಆಯಾಮಗಳನ್ನು ಅವರು ತಮ್ಮ ಕತೆಗಳಲ್ಲಿ ಹೆಕ್ಕಿ ತೆಗೆಯುತ್ತಾರೆ. 'ಅನುಕ್ತ', 'ಉರಿದವರು', 'ಮಳೆಯ ಒಂದು ರಾತ್ರಿಯಲ್ಲಿ', 'ಪಾರೋತಿಯೂ ಪ್ಯಾದೆ ಪಾಪಣ್ಣನೂ' ಮುಂತಾದ ಕತೆಗಳಲ್ಲಿ ಸ್ತ್ರೀ ಶೋಷಣೆಯ ಸಂಗತಿ, ಅದಕ್ಕೆ ಉಂಟಾಗುವ ಪ್ರತಿರೋಧ ಸಹಜವಾಗಿಯೇ ವ್ಯಕ್ತಗೊಂಡಿರುವುದನ್ನು ಗುರುತಿಸಬಹುದು. ಮಂಜು ಪಾತ್ರದಲ್ಲಿ (ಅನುಕ್ತ) ತ್ಯಾಗದೊಂದಿಗೆ ಪ್ರತಿಭಟನೆಯೂ ವ್ಯಕ್ತಗೊಳ್ಳುವುದರಿಂದ ಸ್ತ್ರೀಪರ ಜೀವಪರ ಪ್ರಗತಿಪರವಾದ ಬದುಕಿನ ನಡಿಗೆಯೂ ವ್ಯಕ್ತವಾಗದಿರದು. 'ಅನುಕ್ತ'ದ ಮಂಜುವಿನ ಪಾತ್ರಕ್ಕೆ ವಿರುದ್ಧವಾದ ವ್ಯಕ್ತಿತ್ವವುಳ್ಳ ಪಾತ್ರವೆಂದರೆ 'ಉರಿದವರು' ಕತೆಯ ಅನುವಿನದು. ಈ ಪಾತ್ರದ ಮೂಲಕ ಪುರುಷನಿಗೆ ಸಮಾನವಾಗಿ ದುಡಿಯಲು ಹೊರಟ ಹೆಣ್ಣು ಎದುರಿಸುವ ಸವಾಲುಗಳನ್ನು ಚಿತ್ರಿಸಲಾಗಿದೆ. 'ಮಳೆಯ ಒಂದು ರಾತ್ರಿಯಲ್ಲಿ', 'ಅನುಕ್ತ', 'ಉರಿದವರು' ಕತೆಗಳಿಗಿಂತ ಭಿನ್ನವಾದ್ದು. ಇಲ್ಲಿ ಚಿತ್ರಾಳ ಬದುಕಿನ ತಳಮಳಕ್ಕೆ ಶಿಕ್ಷಣವಿಲ್ಲದುದೇ ಕಾರಣವಾಗುತ್ತದೆ. ಹಾಗೆಯೇ ಶಿಕ್ಷಣ ಪಡೆದವರೆಲ್ಲರೂ ಸಜ್ಜನಿಕೆಯಿಂದ ಕೂಡಿದವರಾಗಿರುತ್ತಾರೆಂದು ಹೇಳುವಂತಿಲ್ಲ. ಅದಕ್ಕೂ ವಸಂತ, ಪಾಟೀಲರೆಂಬ ಅಧ್ಯಾಪಕರ ಮೂಲಕ ಮಾದರಿಗಳು ದೊರಕುತ್ತವೆ. 'ಒಂಟಿ ಮೋಡಗಳು', 'ಚೆಲುವೆ ಮುತ್ತಮ್ಮನ ಪರಸಂಗ' ಇವೆರಡೂ ಕತೆಗಳು ಕೌಟುಂಬಿಕ ಹಿನ್ನೆಲೆಯನ್ನು ಒಳಗೊಂಡಿದ್ದು ಮಹಿಳಾಕೇಂದ್ರಿತವಾದುವೇ ಆಗಿವೆ. 'ಒಂಟಿ ಮೋಡಗಳು'ನಲ್ಲಿ ಪ್ರೀತಿ-ನಂಬಿಕೆಗಳು ಒಂದುಗೂಡಲಾರದಂತಿದ್ದರೆ 'ಚೆಲುವೆ

ಮುತ್ತಮ್ಮನ ಪರಸಂಗ'ದಲ್ಲಿ ಅವನ್ನ ರೂಪಿಸಬಯಸಿ, ಅದು ಸಾಧ್ಯವಾಗದಾಗ ವೈರಾಗ್ಯ ಹೊರಡುವ ಬಗೆ ಇದೆ. ಜೀವನದಲ್ಲಿ ನಿರೀಕ್ಷೆ ಮೀರಿದ ಬವಣೆಗಳೇ ಎದುರಾಗುತ್ತಿರುತ್ತವೆ. ಆದರೆ ಅವು 'ಪ್ರೀತಿ'ಸುವ ಹೃದಯಗಳ ಬಂಧಗಳನ್ನು ಕಳಚಿ ಹಾಕಿ ಕೇಕೆ ಹಾಕುವುದು ಬದುಕಿನ ಬಹು ದೊಡ್ಡ ದುರಂತವೇ ಸರಿ. 'ಸ್ಫೂರ್ತಿ'ಯಿಂದ 'ಕೀರ್ತಿ'ವಂತನಾದ ರಾಮಕೃಷ್ಣ (ಪ್ರೀತಿ ಮತ್ತು ಸಾವು) 'ಸ್ಫೂರ್ತಿಯ ಪ್ರೀತಿಗೆ ಸಾಂಗತ್ಯಕ್ಕೆ ಸಮೀಪಿಸುತ್ತಿದ್ದಂತೆ ಸ್ಫೂರ್ತಿ ಸಾವಿನ ಸಾಂಗತ್ಯದೆಡೆಗೆ ಸಾಗುವುದು ಬಹುದೊಡ್ಡ ದುರಂತ. ಪ್ರೇಮದ ವಿವಿಧ ಆಯಾಮಗಳು ಕತೆಯಲ್ಲಿ ವೈರುಧ್ಯದ ನೆಲೆಯಲ್ಲಿ ಸಾಗಿದರೂ ಆಂತರ್ಯದಲ್ಲಿ ಅದು ಯಶಸ್ಸಿನತ್ತ ಸಾಗುತ್ತಲೇ ಬರುತ್ತದೆ. ಸ್ತ್ರೀಯೊಬ್ಬಳ ಭಾವಲೋಕಕ್ಕೆ ಲಗ್ಗೆ ಹಾಕಿ ಉನ್ನತ ವ್ಯಾಸಂಗದ ಸಲುವಾಗಿ ಅವಳಿಂದ ದೂರವಾಗಿ ಊರಿಗೆ ಮರಳುವ ರಾಮಕೃಷ್ಣನ ವಿಚಿತ್ರ ಸುಖದ ಮರುಕಳಿಕೆ ಕತೆಯಲ್ಲಿ ಆಪ್ತ ವಿವರಗಳಲ್ಲಿ ತೆರೆದುಕೊಳ್ಳುತ್ತದೆ.

'ಮಳೆಯ ಒಂದು ರಾತ್ರಿಯಲ್ಲಿ' ಕತೆಯ ಚಿತ್ರಾಳ ಚಿಂತನೆ ಆಕೆಯ ಬದುಕುವ ಅದಮ್ಯ ಛಲ-ಬಲವನ್ನೂ ನೀಡುತ್ತದೆ. 'ದ್ರವ್ಯ ಪ್ರಧಾನ ಪುರುಷ ಪ್ರಧಾನ'ವೆನ್ನುವ ಈ ಸಮಾಜದಲ್ಲಿ ಚಿತ್ರಾಳ ಅದಮ್ಯ ಜೀವನ ಪ್ರೀತಿ, ದ್ರವ್ಯಾಸಕ್ತಿ ಹಾಗೂ ಪುರುಷ ಪ್ರದರ್ಶನಾಸಕ್ತ ಸಮಾಜಕ್ಕೆ ಮಾದರಿಯಾದುದು. ನೋವು, ನಿರಾಶೆಗಳ ನಡುವೆಯೂ ಪುಟಿಯುವ ಜೀವನಪ್ರೀತಿಯ ಸದಾಶಯ 'ಮಳೆಯ ಒಂದು ರಾತ್ರಿಯಲ್ಲಿ'ದೆ. ಸೋದರ ಸಂಬಂಧಗಳು ದಾಯಾದಿತನಕ್ಕೆ ಸಿಲುಕಿದಾಗ ಬಾಂಧವ್ಯದ ಬದುಕು ಬಂದ್ ಆಗುತ್ತದೆ. ಈ ಬಂದ್‌ಗೆ ಬಳಕೆಯಾಗುವ ಸಾಮಾಜಿಕ ಸಂಬಂಧಗಳೂ ಸಹ ಬಳಸಿ ಬಿಸಾಡುವ ಕ್ರೌರ್ಯಕ್ಕೆ ಸಿಲುಕಿಕೊಳ್ಳುತ್ತವೆ. ಅಂತಹ ಸಂಬಂಧಗಳಲ್ಲಿ 'ಮಾದವ್ವ' ಸಿಲುಕಿಕೊಳ್ಳುವುದು ದಾಯಾದಿತನದ ಕ್ರೌರ್ಯವನ್ನು ತಿಳಿಸುತ್ತದೆ. ಪುರುಷ ಪ್ರಧಾನದ ದಾಯಾದಿತನವು ಸಾಮಾಜಿಕ ಸ್ವಾಸ್ಥ್ಯವನ್ನು ಕದಡುವ ಬಗೆ 'ಹಂದಿ ಮತ್ತು ದಾಯಾದಿ' ಕತೆಯಲ್ಲಿದೆ. ವಿಶಿಷ್ಟ ಆಯಾಮವನ್ನು ಹೊಂದಿರುವ ಹಂದಿಯ ಪ್ರತಿಮಾತ್ಮಕ ಚಿತ್ರಣವಂತೂ ಗಮನ ಸೆಳೆಯುತ್ತದೆ. ಗ್ರಾಮಜೀವನದ ಇನ್ನೊಂದು ಚಹರೆಯನ್ನು ಸಶಕ್ತವಾಗಿ ತೋರಿಸುವ ಈ ಕ್ರಿಯೆಯು ಸಂಸ್ಕೃತಿ ಅಧ್ಯಯನಾಸಕ್ತರಿಗೆ ವಿಶೇಷ ಸಂಗತಿಯೇ ಆಗಿದೆ.

'ಹಂದಿ ಮತ್ತು ದಾಯಾದಿ', 'ಸಾಂತವ್ವನೆಂಬ ಅವ್ವನೂ, ರುದ್ರೇಶಿಯೆಂಬ ಕಂದನೂ', 'ಪಾರೋತಿಯೂ ಪ್ಯಾದೆ ಪಾಪಣ್ಣನೂ', 'ಚೆಲುವೆ ಮುತ್ತಮ್ಮನ ಕಥಾಪ್ರಸಂಗ', 'ಕುರುಕ್‌ಸೇತ್ರವೂ ಕುಂಯ್ಯನೆಂಬ ಬಾಲನ ಕತ್ತಲ ಲೋಕವೂ' – ಈ ಮುಂತಾದ ಕತೆಗಳನ್ನು ಅವಲೋಕಿಸಿದರೆ ಜೀವನಾನುಭವಗಳ ಗ್ರಹಿಕೆಯಲ್ಲಿ ಅಪಾರ ಕುತೂಹಲಿಯಾಗಿರುವ ಕತೆಗಾರ್ತಿ ವೇದಾ ಅವರು ಗ್ರಾಮೀಣ ಭಾರತವನ್ನು ಮತ್ತು ಅದರ ಸ್ಥಿತ್ಯಂತರಗಳನ್ನು, ಆವಿಷ್ಕಾರಗಳನ್ನು ಮನಮುಟ್ಟುವಂತೆ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾರೆ ಎಂಬುದು ಮನದಟ್ಟಾಗುತ್ತದೆ. ಜಾತಿ ಹೆಸರಿನಲ್ಲಿ ಕಪ್ಪು ಚರಿತ್ರೆ ಬರೆಯುವವರ ಸಂಖ್ಯೆ ಜಾಸ್ತಿಯಾಗುತ್ತಿರುವ ಸಂದರ್ಭದಲ್ಲಿ ಪ್ರೀತಿಯ ವ್ಯಾಖ್ಯಾನ ಬರೆಯುವವರು ಕಡಿಮೆಯಾಗುತ್ತಿದ್ದಾರೆಂಬ ನೋವು ಹೊತ್ತ 'ಕಪ್ಪು ಚರಿತ್ರೆಯ ಬಿಳಿ ಟಿಪ್ಪಣಿ' ಕತೆ ಸಂಬಂಧಗಳ ಶೋಧನೆಯಲ್ಲಿ ತೊಡಗಿಬಿಡುತ್ತದೆ. ಇಂತಹ ಆಶಯಗಳ ಹೊಸ ಬಗೆಯ ಶೋಧ ವೇದಾರ ಪ್ರಥಮ ಸಂಕಲನ 'ಪ್ರೀತಿ ಮತ್ತು ಸಾವು'ನಲ್ಲಿ ನಡೆದದ್ದು ಗಮನಾರ್ಹ ಸಂಗತಿ. ಇಲ್ಲಿನ ಕಥೆಗಳು ದೈನಂದಿನ ವಾಸ್ತವತೆ, ಕಲ್ಪನೆ, ಉತ್ಪ್ರೇಕ್ಷೆ, ಕನಸುಗಾರಿಕೆಗಳ ಹದವಾದ ಲೇಪನವನ್ನು ಹೊಂದಿರುವಂತೆ ಕಂಡರೂ ಅವು ಸಹಜವಾಗಿ ನೂತನ ಸೃಷ್ಟಿಯ ಸಾಧ್ಯತೆಗಳಂತೆಯೂ ಗೋಚರವಾಗಿಬಿಡುತ್ತವೆ.

ಸಾಮಾಜಿಕ ಬದುಕು ಮತ್ತು ಅದರ ಸಾಂಸ್ಕೃತಿಕ ಚಿತ್ರಣವನ್ನು ಕಟ್ಟಿಕೊಡುವುದೇ ವೇದಾ ಅವರ ಕತೆಗಳ ಪ್ರಮುಖ ಉದ್ದೇಶವೆನ್ನಬಹುದು. ೧೯೯೩ರಿಂದ ೧೯೯೬ರ ತನಕ ಬರೆದ 'ಪಾಲು' ಸಂಕಲನದ (೧೯೯೭) ಕತೆಗಳನ್ನು ಗಮನಿಸಿದರೆ ಈ ಮಾತು ಮತ್ತಷ್ಟು ಸ್ಪಷ್ಟವಾಗುತ್ತದೆ. ಪ್ರಜಾವಾಣಿ, ತರಂಗ, ತುಷಾರ, ಕರ್ಮವೀರ, ಸಂಚಯ ಮುಂತಾದ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟಗೊಂಡ ವೈವಿಧ್ಯಮಯವಾದ ಹತ್ತು ಕತೆಗಳು ಈ ಸಂಕಲನದಲ್ಲಿವೆ. ಪರಂಪರೆಯೊಡನೆ ಪ್ರಶ್ನೆಗಳನ್ನು ಹೊಂದಿಯೇ ಪರಂಪರೆಯೊಂದನ್ನು ಸೃಷ್ಟಿಸಿ, ಗಂಭೀರ ಸಾಹಿತ್ಯ ನಿರ್ಮಿಸಬೇಕಾದ ಸಂಕ್ರಮಣ ಪರಿಸ್ಥಿತಿಯಲ್ಲಿ ನಾವಿದ್ದೇವೆ. ಇದನ್ನು ಸವಾಲಾಗಿ ಸ್ವೀಕರಿಸಬೇಕೆಂದರೆ ಸವಾಲನ್ನು ಸ್ವೀಕರಿಸುವ ಮುನ್ನ ಬದುಕಿನ ಬಗೆಗಿನ ಸರಳ ಗ್ರಹಿಕೆಗಳು, ಸೂತ್ರಬದ್ಧ ವಿಚಾರಗಳು ಮಾತ್ರ ಇರುವ ದೃಷ್ಟಿಕೋನ ಬದಲಾಗಬೇಕಾಗಿದೆ. ಇಲ್ಲಿಯ ಕತೆಗಳು ಸಹ ಇದನ್ನು ನಿರೀಕ್ಷಿಸಬಲ್ಲವು. 'ಪಾಲು', 'ಗೌರಿ ಬಂದಳು ಯಾತರ ಮ್ಯಾಲೆ ?', 'ಅಲಕಾಳ ಡೈರಿಯ ಪ್ರೀತಿಯ ಪುಟಗಳು, 'ಸೃಷ್ಟಿ' , 'ಹೋಗಿ ಬರಲೆ ಭರತ', 'ಮರಳಿ ಬಾರದ ಶಕುಂತಲೆ' – ಇತ್ಯಾದಿ ಕತೆಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಲು ಸಾಧ್ಯವಿದೆ. ಗ್ರಾಮೀಣರ ಮನಃಸ್ಥಿತಿಯನ್ನು ಚಿತ್ರಿಸುವುದೇ 'ಪಾಲು' ಕತೆಯ ಮುಖ್ಯ ಆಶಯ. ತಾಯವ್ವ ಸಂಪಾದಿಸಿದ ಆಸ್ತಿಯನ್ನು ತನ್ನ ಮಕ್ಕಳು, ಸೊಸೆಯಂದಿರು ಪಾಲು ಮಾಡಿಕೊಳ್ಳುವ ಧಾವಂತದಲ್ಲಿ ತೋರುವ ಚಾಣಾಕ್ಷತೆಯನ್ನು, ಅದರ ಮೂಲಕ ವ್ಯಕ್ತಗೊಳ್ಳುವ ಸ್ವಾರ್ಥವನ್ನು ಚಿತ್ರಿಸಲಾಗಿದೆ. ಇದರ ಪರಿಣಾಮವಾಗಿ ತಾಯವ್ವ ಮಾನಸಿಕವಾಗಿ ಮತ್ತು ದೈಹಿಕವಾಗಿ ಕುಗ್ಗಿಹೋಗುತ್ತಾಳೆ. ಗ್ರಾಮದ ಬದುಕಿನ ಚಿತ್ರಣವನ್ನು ಅಲ್ಲಿಯ ಭಾಷೆಯಲ್ಲಿಯೇ ಹೇಳ ಹೊರಟಿರುವುದು ಕತೆಯ ವಿಶೇಷ. 'ಗೌರಿ ಬಂದಳು ಯಾತರ ಮ್ಯಾಲೆ' ಜನಪದ ನಂಬಿಕೆಯ ತಳಹದಿಯ ಮೇಲೆ ರೂಪುಗೊಂಡ ಕತೆ. ಗೌರಿಹಬ್ಬಕ್ಕೆ ಗೌರಮ್ಮನ

# ಕೈ ಕೆಸರಾದರೆ...

ಬಾಲ್ಯ ಪ್ರೌಢ ವೃದ್ಧಾಪ್ಯದ
ಅರಿವು ಮೂಡದಂತೆ ಕತ್ತಲೆಯಲ್ಲಿಟ್ಟು
ಬದುಕನ್ನು ಬರಿದಾಗಿಸಿ ಗಾಣದೆತ್ತಿನಂತೆ
ಸುತ್ತು ಹಾಕಿ ಸುತ್ತಲಿರುವವರ ಮಧ್ಯೆ
ನಮ್ಮ ಬಾಯಿ ಮೊಸರಾಗುತ್ತಿಲ್ಲ.

ಮಾಡಿದ ಪಾಪ ಕರ್ಮಗಳಿಂದಾಗಿಯೇ
ಪುನರ್‌ಜನ್ಮ ಪಡೆದಿದ್ದೇವೆ ಎಂದು ನಂಬಿ
ಮೂಕ ಪ್ರಾಣಿಗಳಂತೆ ಮಾಲೀಕನ
ಆದೇಶವನ್ನು ಶಿರಸಾವಹಿಸಿ ಪಾಲಿಸುವ
ನಮ್ಮ ಬಾಯಿ ಮೊಸರಾಗುತ್ತಿಲ್ಲ.

ಉಳ್ಳವರು ನಿರ್ಮಿಸಿದ
ಜೇಡರ ಬಲೆಯಲ್ಲಿ ಬಂಧಿಯಾಗಿ
ತುತ್ತಿನ ಚೀಲ ತುಂಬಿಸಿಕೊಳ್ಳಲು
ತತ್ತರಗೊಂಡು ಪರದಾಡುತ್ತಿರುವ
ನಮ್ಮ ಬಾಯಿ ಮೊಸರಾಗುತ್ತಿಲ್ಲ.

ನಿತ್ಯ, ನಿರಂತರ, ನಿರಾತಂಕವಾಗಿ
ದುಡಿದ ದೇಹಕ್ಕೆ ದಣಿವಾರಿಸಿಕೊಳ್ಳಲು
ಸ್ವಂತದೆನ್ನುವದೊಂದು ಸೂರು ಇಲ್ಲದೆ
ಸಾವು ಬದುಕಿನ ಮಧ್ಯೆ ತೊಳಲಾಡುತ್ತಿರುವ
ನಮ್ಮ ಬಾಯಿ ಮೊಸರಾಗುತ್ತಿಲ್ಲ.

**ಈಶ್ವರಪ್ಪ ಕಟ್ಟೀಮನಿ**
ಮನೆ ಸಂ. ೪೮, ಸಾಯಿರಾಮನಗರ, ರಾಘವೇಂದ್ರ ಲೇಔಟ್
ಹಳೇ ಆಕಾಶವಾಣಿ ವಿತರಣಾ ಕೇಂದ್ರ ಹಿಂದುಗಡೆ, ಜೇವರ್ಗಿ ರಸ್ತೆ, ಕಲಬುರ್ಗಿ

ಬೊಂಬೆ ಮಾಡಲು ನದಿಯಲ್ಲಿ ಮುಳುಗಿ ಮಣ್ಣು ತರುವಾಗ ಜೊತೆಗೆ ಬಿದಿರು ಬರುತ್ತದೆ. ಹಬ್ಬದ ಸಡಗರವೆಲ್ಲ ಮಾಯವಾಗಿ ಬಿಡುತ್ತದೆ. ಸಾವು, ನೋವುಗಳನ್ನು ಸಂಕೇತಿಸುವ ಬಿದಿರಿನ ಮೇಲಿರುವ ಮುಳ್ಳಿನ ಮೇಲೆ ನಡೆದಂತೆ ಗೌರಿಯ ಬಾಳು ಎಂಬುದನ್ನು ಸೂಚಿಸುತ್ತದೆ. ಹೆಣ್ಣಿನ ಭಾವನೆಗಳನ್ನು ಸಮಾಜ ಹೇಗೆ ನಿಯಂತ್ರಿಸುತ್ತದೆಂಬುದನ್ನು ಇದಕ್ಕಿಂತಲೂ ಭಿನ್ನವಾಗಿ 'ಅಲಕಾಳ ಡೈರಿಯ ಪ್ರೀತಿಯ ಪುಟಗಳು' ವಿವರಿಸುತ್ತದೆ. ವಯಸ್ಕರು ಮಾಡುವ ಕಟ್ಟುಪಾಡುಗಳು ಬೆಳೆಯುವ ಮನಸ್ಸಿನ ಮೇಲೆ ಉಂಟುಮಾಡುವ ಪ್ರಭಾವಗಳು ಹೇಗೆ ಸಮಸ್ಯೆಯನ್ನು ತಂದೊಡ್ಡುತ್ತವೆಂಬುದನ್ನು ಕಥೆ ಚಿತ್ರಿಸುತ್ತದೆ.

ವೇದಾ ಅವರು ಪುರಾಣ ಪ್ರಸಂಗಗಳನ್ನು ಸಮಕಾಲೀನಗೊಳಿಸಬಲ್ಲರು. ಕತೆಗಳಲ್ಲಿನ ಸನ್ನಿವೇಶಗಳನ್ನು, ಪಾತ್ರಗಳನ್ನು ಪೌರಾಣಿಕ ಸನ್ನಿವೇಶ, ಪಾತ್ರಗಳಿಗೆ ಹೋಲಿಸಿ ನಿರ್ವಚಿಸಬಲ್ಲರು. 'ಹೋಗಿ ಬರಲೆ ಭರತ', 'ಮರಳಿ ಬಾರದ ಶಾಕುಂತಲೆ' ಈ ಎರಡೂ ಕತೆಗಳಲ್ಲಿ ಶಕುಂತಲೆಯ ಬದುಕಿನ ಚಿತ್ರಣವನ್ನು ಪೌರಾಣಿಕ ಪಾತ್ರಕ್ಕಿಂತಲೂ ವಿಭಿನ್ನ ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. 'ಹೋಗಿ ಬರಲೆ ಭರತ' ಎನ್ನುವ ಶಕುಂತಲೆಯ ಮಾತಿನಲ್ಲಿ ಮಗನ ಮೇಲಿನ ಭರವಸೆ ವ್ಯಕ್ತವಾಗುತ್ತದೆ. ತನ್ನನ್ನು ಕರೆಸಿಕೊಳ್ಳುವುದಾಗಿ ಮಾತು ಕೊಟ್ಟು ಮರೆತ ರಾಜನ ನಡತೆಯಿಂದ ಮೊದಲೇ ನೊಂದ ಶಕುಂತಲೆಯನ್ನು ಆಸ್ಥಾನದಲ್ಲಿ ಆತ ನಡೆಸಿಕೊಳ್ಳುವ ರೀತಿಗೆ ಆಕೆ ತೋರುವ ಪ್ರತಿಕ್ರಿಯೆ ಅವಳ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿಯುತ್ತದೆ. ಅವಳ ನಿಷ್ಠುರತೆ ಸ್ವಾಭಿಮಾನದ ಸಂಕೇತವಾಗುತ್ತದೆ. ಈ ಕತೆಯ ಮುಂದುವರಿದ ಭಾಗವಾಗಿ 'ಮರಳಿ ಬಾರದ ಶಾಕುಂತಲೆ' ಕಾಣಿಸುತ್ತದೆ. ವಿಶ್ವಾಮಿತ್ರ, ದುಷ್ಯಂತ ಹಾಗೂ ಭರತ – ಈ ಮೂವರಿಂದಲೂ ಶಕುಂತಲೆಗೆ ಯಾವ ರಕ್ಷಣೆಯೂ ಸಿಗಲಿಲ್ಲ. ಆದರೆ ತನ್ನ ವ್ಯಕ್ತಿತ್ವಕ್ಕೆ ಕುಂದುಬರುತ್ತದೆಂದಾಗ ಯಾರ ಮುಲಾಜಿಗೂ ಒಳಗಾಗದೆ ತನ್ನಿಷ್ಟದಂತೆ ನಡೆಯುವ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಶಕುಂತಲೆ ಸ್ವತಂತ್ರ ಮನೋಧರ್ಮದ ಪ್ರತೀಕವಾಗಿ ಕಾಣಿಸುತ್ತಾಳೆ.

ಹೆಣ್ಣು ಯಾವಾಗಲೂ 'ಪರರ ಆಶ್ರಯದಲ್ಲಿ' ಎಂಬ ಮಾತಿದೆ. ಆದರೆ ಹೆಣ್ಣು ಬೇರೆಯವರ ಆಶ್ರಯದಲ್ಲಿಯೇ ಬದುಕಬೇಕೆಂಬ ಭಾವನೆಯನ್ನು ತೊರೆದು ತನಗಾಗಿ ಬಾಳುವುದನ್ನು ರೂಢಿಸಿಕೊಳ್ಳಬೇಕಾದ ಅಗತ್ಯವನ್ನು ವೇದಾರ ಕಥೆಗಳು ವಿವೇಚಿಸುತ್ತವೆ. ಜೊತೆಗೆ ಸಾಮಾಜಿಕ ಸಂಬಂಧಗಳ ಸಂಕೀರ್ಣತೆ, ವಿಡಂಬನೆ, ಪುರಾಣ ಪಾತ್ರಗಳ ಪುನರ್‌ವಿಮರ್ಶೆ ಇವೆಲ್ಲ ಕತೆಗಳಲ್ಲಿ ಚರ್ಚಿತವಾಗಿವೆ. ಇಷ್ಟೆಲ್ಲ ವಿಷಯಗಳನ್ನು ಸಣ್ಣಕತೆಗಳಲ್ಲಿ ಹಿಡಿದಿಡಬಹುದಾದ ಕತೆಗಾರ್ತಿಯ ಕಥಾಕೌಶಲ್ಯವನ್ನು, ಚಿಂತನಾ ಸಾಮರ್ಥ್ಯವನ್ನು ಅವು ಎತ್ತಿ ತೋರಿಸುತ್ತವೆ.

೧೯೯೫ರಿಂದ ೨೦೦೧ರ ತನಕ ಬರೆದ ಕತೆಗಳನ್ನು ಒಳಗೊಂಡ 'ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ' ಸಂಕಲನ ರೂಪದಲ್ಲಿ ಹೊರ ಬಂದದ್ದು ೨೦೦೨ರಲ್ಲಿ. ಅನುಭವಗಳ ವಿಭಿನ್ನ ನೆಲೆಗಳನ್ನು ಒಳಗೊಂಡ ಇಲ್ಲಿಯ ಕತೆಗಳು ಮೊದಲಿನ ಎರಡೂ ಸಂಕಲನದ ಕತೆಗಳಿಗಿಂತ ಭಿನ್ನವಾದುವು. ತರಂಗ, ವಿಜಯಕರ್ನಾಟಕ, ಮಹಿಳಾ ಅಧ್ಯಯನ, ಭಾವನಾ, ವಿಜೇತ, ಕನ್ನಡಪ್ರಭ, ಮುಂಬೈವಾಣಿ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇಲ್ಲಿಯ ಒಂಬತ್ತು ಕತೆಗಳು ಸ್ತ್ರೀಸಂವೇದನೆಯಿಂದ ಕೂಡಿವೆ. ಮನೋವಿಜ್ಞಾನ, ತತ್ವಶಾಸ್ತ್ರ, ಚಿತ್ರಕಲೆ, ಬೌದ್ಧಿಕತೆ – ಇವೆಲ್ಲವುಗಳಿಗಿಂತ ಬದುಕು ದೊಡ್ಡದು ಎಂಬ ಸತ್ಯ ಇವರ ಕತೆಗಳಲ್ಲಿ ಪ್ರಣೀತವಾಗುವಂಥದ್ದು. ಗ್ರಾಮಗಳ ಕೌಟುಂಬಿಕ ಸಮಸ್ಯೆಗಳನ್ನು ಸೂಕ್ಷ್ಮ ಸಂವೇದನೆಯಿಂದ ತಮ್ಮ ಕತೆಗಳಲ್ಲಿ ಅನಾವರಣಗೊಳಿಸಿ ಹಲವು ಸಮಸ್ಯೆಗಳಿಗೆ ತತ್ವಶಾಸ್ತ್ರದ ಹಿನ್ನೆಲೆಯಿಂದ ನ್ಯಾಯ ದೊರಕಿಸಿದ್ದಾರೆ. ಮಾಟ, ಮಂತ್ರ, ಪೂಜೆ ಪುರಸ್ಕಾರಗಳನ್ನು ಬಯಲು ಮಾಡಿ ಶಿಕ್ಷಣ ಮತ್ತು ನಂಬಿಕೆಗಳ ಸಂಬಂಧವನ್ನು ಸೂಕ್ಷ್ಮವಾಗಿ ದಾಖಲಿಸುತ್ತ ಇಲ್ಲಿಯ ಕತೆಗಳು ಹೊಸ ಆಯಾಮವನ್ನು ಪಡೆದುಕೊಂಡು ಬದುಕನ್ನು ಹಸನಾಗಿಸಿಕೊಳ್ಳಲು ತತ್ವಶಾಸ್ತ್ರದ ಅನಿವಾರ್ಯತೆಯನ್ನು ಪ್ರಸ್ತಾಪಿಸುತ್ತವೆ. ಬದುಕು ಸಾವು, ಹಳ್ಳಿ ನಗರ ಪ್ರದೇಶಗಳ ಬಗ್ಗೆ ತಮ್ಮ ಗಮನವನ್ನು ಕೇಂದ್ರೀಕರಿಸಿ ಗ್ರಾಮೀಣ ಸೊಗಡನ್ನು ಪಾತ್ರಗಳ ಮೂಲಕ ಮನೋಜ್ಞವಾಗಿ ಚರ್ಚಿಸಿದ್ದಾರೆ. ಹಾಗೆ ನೋಡಿದರೆ 'ಪ್ರೀತಿ ಮತ್ತು ಸಾವು', 'ಪಾಲು' ಈ ಎರಡೂ ಸಂಕಲನಗಳಿಗಿಂತ ಭಿನ್ನವಾದದ್ದು ೨೦೦೨ರಲ್ಲಿ ಪ್ರಕಟವಾದ 'ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ' ಸಂಕಲನ. ಅನುಭವಗಳ ವಿಭಿನ್ನ ನೆಲೆಗಳನ್ನು ಒಳಗೊಂಡ ಕತೆಗಳನ್ನು ತುಂಬಿ ಕೊಂಡಿರುವ ಕಥಾಗುಚ್ಛವಿದು.

ಮಾತೃಪ್ರೇಮವೇ ಮಾನವತಾಪ್ರೇಮ, ಮಾನವತಾಪ್ರೇಮವೇ ಮಾತೃಪ್ರೇಮವೆಂಬ ಆಶಯದ ಕತೆ 'ಮದ್ಲಿಂಗನ ಮಾತೃಪ್ರೇಮವೂ ಮತ್ತು ಮನೋವಿಜ್ಞಾನವೂ'. ಗ್ರಾಮೀಣ ಪರಿಸರದಲ್ಲಿ ಅರಳುವ ಈ ಕತೆ ತನ್ನ ಪರಿಸರದಲ್ಲೇ ಅಡಗಿರುವ ಸತ್ವಯುತವಾದ ಸಾಂಗತ್ಯವನ್ನೂ ಆಧುನಿಕ ಅರಿವಿನೊಂದಿಗೆ ಆತುಕೊಳ್ಳುತ್ತದೆ. ಮದ್ಲಿಂಗನ ಮನೋರೋಗವನ್ನು ಅರಿತುಕೊಳ್ಳುವ ಸಾಮರ್ಥ್ಯ ಉಕ್ಕಡದಮ್ಮನೆಂಬ ಜಾನಪದ ದೇವರಿಗೆ ಇರುತ್ತದೆ. ದೇವರಿಗೆ ಇರುತ್ತದೆ ಎನ್ನುವುದಕ್ಕಿಂತ ಆ ದೇವರನ್ನು ಆವಾಹನೆ ಮಾಡಿಕೊಂಡ ಮಾನುಷಿ (?) ಜನರ ನಂಬಿಕೆಗೆ ಆದಷ್ಟು ದ್ರೋಹ ಬಗೆಯದಂತೆ ಅದರ ಪಾಡುಗಳನ್ನೆಲ್ಲ ಅಧ್ಯಯನ ಮಾಡಿ ಅದಕ್ಕೆ ತಕ್ಕ ಪರಿಹಾರ ಇದೆಂದು ಸೂಚಿಸುತ್ತಾಳೆ. ಇಂತಹ ಜಾನಪದೀಯ ದೇಶೀಯ ಮನೋವಿಜ್ಞಾನವೇ ಇಂದಿನ ಆಧುನಿಕ ಮನೋವಿಜ್ಞಾನಕ್ಕೆ ಬೇರಾಗಿದೆ. ಅದರ ವಿವೇಕವಿರುವ ಕತೆಗಾರ್ತಿ ವೇದಾ ಅವರು 'ಸಾವಂತ್ರಿ'ಯಿಂದ ಮದ್ಲಿಂಗನಿಗೆ ಆಗಿರುವ ಮನೋರೋಗ ಅವ್ವಂಗೆ ಕಾಲು ಜಾಡಿಸಿ 'ವದ್‌ಬುಡ್ತೀನಿ' ಎಂಬ ಮಾತಿನಲ್ಲಿದೆ ಎಂಬುದರಲ್ಲಿ ತಿಳಿಸುತ್ತಾರೆ. ಜೊತೆಗೆ ಅದಕ್ಕೆ ಪರಿಹಾರ ನಮ್ಮ ನೆಲದಲ್ಲೇ ನಮ್ಮ ಮನದಲ್ಲೇ ಇದೆ ಎಂಬುದನ್ನು ತಿಳಿಸುತ್ತಾರೆ. 'ಮಾತೃಪ್ರೇಮ', 'ಮಾನವತಾ ಪ್ರೇಮ'ವನ್ನು ಹೆಣ್ಣು -ಗಂಡು ಎಂಬ ಭೇದವಿಲ್ಲದೆ ಎಲ್ಲಾ ಮಾನವಂತರು ಅರಿಯಬೇಕಾಗಿದೆ ಎಂಬ ವಿವೇಕವನ್ನು ಹಾಗೂ ಮಾನವತ್ವವನ್ನು ಕಥೆಯೊಳಗೆ ಬಿಂಬಿಸಲಾಗಿದೆ.

ತನ್ನನ್ನು ತಾನು ನೋಡಿಕೊಳ್ಳದ, ಅರಿತುಕೊಳ್ಳದ ಪುರುಷನು ತನ್ನನ್ನು ತಾನು ಅರಿತುಕೊಳ್ಳಬೇಕಾದ ಅನಿವಾರ್ಯತೆಯನ್ನು ಹಾಗೂ ಸ್ತ್ರೀ ಹೆದರದೆ ವಿವೇಕವಂತೆಯೂ, ಮಾನವಂತೆಯೂ ಆಗಿ ಪುರುಷಪ್ರಧಾನ ಸಮಾಜವನ್ನು ಮಾನವಪ್ರಧಾನ ಸಮಾಜವನ್ನಾಗಿ ಮಾಡುವೆಡೆಗೆ ತುಡಿಯುವ ಆಶಯವನ್ನು 'ಬಿಳಿಯೆಣ್ಣು ಮತ್ತು ದುಂಡವ್ವನ ದೆವ್ವ' ಕತೆ ಒಳಗೊಂಡಿದೆ. ಕೃಷ್ಣೇಗೌಡನ ದರ್ಪವನ್ನು ದಂಡಿಸಲು ಒಂದಾಗುವ ಮಾನವಂತ ಮಾನುಷಿಯರಾದ ಕೃಷ್ಣೇಗೌಡನ ಅವ್ವ, ಆತನ ಅಕ್ಕ ಶಿವಕ್ಕ, ಆತನ ಹೆಂಡತಿ ಬಿಳಿಯೆಣ್ಣು ಮಂಜುಳಾ ಹಾಗೂ ಜನರ ನೋವಿನ ನಾಡಿ ಹಿಡಿದು ನೋಡಬಲ್ಲ ಪೂಜಾರಪ್ಪ ಇವರೆಲ್ಲಾ ಸಮಾಜದ ಜೀವಂತ ಉಸಿರಾಟಕ್ಕೆ ನಿದರ್ಶನರಾಗುತ್ತಾರೆ. ಕೇವಲ ದೇಹವನ್ನು ಪ್ರೀತಿಸುವ ಕೃಷ್ಣೇಗೌಡನು ಪುರುಷ ಸಮಾಜದ ಅಮಾನವೀಯ ಪ್ರತಿನಿಧಿಯಾಗಿ ಕಾಣುತ್ತಾನೆ. ಪೂಜಾರಪ್ಪ ಮಾನವ ಪ್ರೀತಿಯ ಪ್ರತಿನಿಧಿಯಾಗಿ ಕಾಣುತ್ತಾನೆ. ಪುರುಷ ಪ್ರಧಾನ ಸಮಾಜದ ವೈರುಧ್ಯಗಳಿಗೆ ಇವು ಸಾಕ್ಷಿಯಾಗಿವೆ. ಮುಗ್ಧ ನಂಬಿಕೆಗಳ ಅರಿವಿನ ಮೂಲಕವೇ ಹೊಸ ಅರಿವನ್ನು ಪಡೆದುಕೊಳ್ಳುವುದು ಸಾಧ್ಯ ಎಂಬುದನ್ನು 'ದುಂಡವ್ವನ ದೆವ್ವ' ತನ್ನ ನಡಿಗೆಯಲ್ಲಿ ಸಾರ್ಥಕಗೊಳಿಸುತ್ತದೆ. ದುಂಡವ್ವನಂತಾಗದೆ ದೌರ್ಜನ್ಯದಿಂದ ಮೆರೆದಾಡುವ ಪುರುಷರನ್ನು ಬದಲಾಯಿಸುವ ಕಡೆಗೆ ಬಿಳಿಯೆಣ್ಣು ನಡೆಯುವುದು ಆಕೆಯ ಕ್ರಾಂತಿಕಾರಿ ಭಾವನೆಗೆ ಸಾಕ್ಷಿಯಾಗಿದೆ.

ಮನೋದೈಹಿಕ ಏರುಪೇರುಗಳ ಬಗ್ಗೆ ವೈಜ್ಞಾನಿಕವಾಗಿ ತಿಳಿಸುವ ಅಗತ್ಯವಿದೆ. ಇಲ್ಲವಾದರೆ ಅಪ್ರಬುದ್ಧ ಮನಸ್ಸುಗಳು ದಿಕ್ಕು ತಪ್ಪುವ ಸಂಭವ ಹೆಚ್ಚು. ಈ ಮನಸ್ಸುಗಳ ದ್ವಂದ್ವಗಳನ್ನು ವಿವೇಕದಿಂದ ಪರಿಹರಿಸಿದಾಗ ಮಾತ್ರ ಉತ್ತಮ ಭವಿಷ್ಯ ನಿರ್ಮಾಣ ಸಾಧ್ಯವಾಗುತ್ತದೆಂಬ ವಿವೇಕದ ಆಶಯವನ್ನು 'ನೀರು' ಕತೆ ಒಳಗೊಂಡಿದೆ. ಹೆಣ್ಣಿನ ಒಳಜಗತ್ತಿನ ತಳಮಳಗಳನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಸೆರೆಹಿಡಿದಿದೆ. ಶಿಕ್ಷಣದಿಂದ ಅದರ ಸಾಧ್ಯತೆಯನ್ನು ಕಂಡುಕೊಳ್ಳಬಹುದೆಂಬ ಮನೋಬಲವನ್ನು ಈ ಕತೆ ಸಮರ್ಥಿಸುತ್ತದೆ. ಹೃದಯವಂತರಿಲ್ಲದ ಸಮಾಜದೊಳಗೆ ಮಾನವಂತ ಹೃದಯ ವಂತರಿರುವುದು ಬದುಕಿಗೆ ಬಲವನ್ನೂ ತಂದುಕೊಡುವಂತಹದ್ದು. ಅಂತಹ ಬಲದಿಂದ ಬದುಕುವ ದಾರಿ ಕಂಡುಕೊಂಡ ಹೆಣ್ಣೊಬ್ಬಳ ಬದುಕಿನ ಹಾದಿಯ ಚಿತ್ರಣ 'ಮರದೊಳಗೆ ಮರ ಹುಟ್ಟಿ' ಕತೆಯಲ್ಲಿದೆ. ಜೀವವೊಂದು ಕಣ್ತೆರೆದು ಜಗತ್ತನ್ನು ನೋಡಬೇಕಾದರೆ ಮತ್ತೊಂದು ಜೀವ ಏನೆಲ್ಲ ಸಂಕಟಗಳನ್ನು ಎದುರಿಸಿ ಹಾದುಹೋಗಬೇಕೆಂಬುದನ್ನು ಈ ಕತೆ ಕರುಣಾಜನಕವಾಗಿ ಚಿತ್ರಿಸಿದೆ. ಹೃದಯವಂತರ ಬಗೆಗಿನ ನಂಬಿಕೆ, ಆತ್ಮವಿಶ್ವಾಸ, ಪ್ರೀತಿ ಭರವಸೆಯು ಬದುಕನ್ನು ಭವ್ಯವಾಗಿ ಕಟ್ಟಿಕೊಡುತ್ತದೆಂಬ ಹೃದಯವಂತಿಕೆ ಕತೆಯೊಳಗಿದೆ. ಇವೆಲ್ಲ ವಿಭಿನ್ನವಾದ ಕಥಾವಸ್ತುವನ್ನೂ ಒಳಗೊಂಡಿದ್ದು ಓದುಗರ ಕುತೂಹಲಕ್ಕೆ ಪಾತ್ರವಾಗುತ್ತವೆ. ಹೆಣ್ಣಿನ ಅವಿರತ ದುಡಿಮೆಯಿಂದ ಕುಟುಂಬದ ಅಭಿವೃದ್ಧಿಯಾಗಿ ಹೆಣ್ಣು ಯಜಮಾನಿಕೆಯ ಸಂಕೇತವಾದದ್ದು ಇಲ್ಲಿಯ ಕಥಾಪಾತ್ರಗಳ ವೈಶಿಷ್ಟ್ಯ. ಜೂಜಾಟಕ್ಕೋಸ್ಕರ ಹೆಂಡತಿಯನ್ನು ಹರಾಜು ಹಾಕುವ ಪುರುಷರ ವಿರುದ್ಧ ತನ್ನ ಗಂಡನ ಮಾನವನ್ನೇ ಹರಾಜು ಹಾಕುವ ಪ್ರತಿಭಟನಾತ್ಮಕ ಸ್ತ್ರೀ ಪಾತ್ರಗಳನ್ನು ವೇದಾ ಅವರು ಸೃಷ್ಟಿಸುತ್ತಾರೆ. ಕಥಾರಚನೆಯ ದೃಷ್ಟಿಯಿಂದಲೂ ಕಲಾತ್ಮಕತೆಯ ದೃಷ್ಟಿಯಿಂದಲೂ ಸಂಕಲನದಿಂದ ಸಂಕಲನಕ್ಕೆ ವೇದಾ ಸಾಕಷ್ಟು ಬೆಳೆದಿದ್ದಾರೆ.

ಈ ಹಿನ್ನೆಲೆಯಲ್ಲಿ 'ಮುಳ್ಳ ಮನೆಯ ಮೇಲೆ' ಸಂಕಲನದ ಕತೆಗಳು ಕೌಟುಂಬಿಕ ಹಿನ್ನೆಲೆಯಲ್ಲಿ ಆರಂಭಗೊಂಡು ನಂತರ ಸಾಮಾಜಿಕ ಚೌಕಟ್ಟನ್ನು ಪಡೆಯುತ್ತವೆ. ಗಂಡು ತನ್ನ ಅಸ್ತಿತ್ವವನ್ನು ಹೆಣ್ಣಿನ ಕೈಗೆ ನೀಡಿ ಅವಳಂತೆಯೇ ನಡೆಯುವ ಪ್ರಕ್ರಿಯೆ

ಗೋಚರವಾಗುವ ಸಾಮಾನ್ಯ ವಿನ್ಯಾಸದಾಚೆಗಿನ ಸಂಗತಿಗಳೂ ಇಲ್ಲಿ ಮೈದಾಳಿರುವುದು ಗಮನಾರ್ಹ ಅಂಶ. ಕಥಾನಾಯಕ ವಿಶ್ವನಾಥ ತನ್ನ ಬದುಕಿನಲ್ಲಿ ಅನುಭವಿಸಿದ ಕಷ್ಟ ಸುಖಗಳನ್ನು ಹಾಗೂ ಸುತ್ತಮುತ್ತಲಿನ ಪರಿಸ್ಥಿತಿಗಳನ್ನು ತನ್ನ ಮೊದಲ ಕತೆಯಲ್ಲಿಯೇ ನೈಜ ಹೆಸರುಗಳೊಂದಿಗೆ ಬರೆದ ಪರಿಣಾಮವಾಗಿ ತಾನು ಎದುರಿಸಿದ ಸಮಸ್ಯೆಗಳು ಹಾಗೂ ಆ ಸಮಸ್ಯೆಯಿಂದ ಹೊರಬಂದ ಬಗೆಯನ್ನು ವಸ್ತುವನ್ನಾಗಿ ಉಳ್ಳ ಕತೆಯೇ 'ಉದಯೋನ್ಮುಖ ಕತೆಗಾರನೊಬ್ಬನ ಕಥಾಪ್ರಸಂಗ'. ಕತೆಗಾರನ ಅನುಭವಗಳು ತಕ್ಷಣ ಅಭಿವ್ಯಕ್ತಿ ಪಡೆದರೆ ಯಾವ ಪರಿಣಾಮ ಎದುರಿಸಬೇಕಾಗುತ್ತದೆಂಬುದನ್ನು ಈ ಕತೆ ತಿಳಿಸುತ್ತದೆ. ಜೊತೆಗೆ ಆ ಅನುಭವಗಳು ಸ್ವಲ್ಪ ಕಾಲ ಮಾಗಿ ನಂತರ ಉತ್ತಮ ಕಲಾಕೃತಿಯ ನಿರ್ಮಾಣ ಸಾಧ್ಯ ಎಂಬುದು ಕತೆಯಿಂದ ವ್ಯಕ್ತವಾಗುತ್ತದೆ. ಈ ಕತೆಯಲ್ಲಿ ವಿಶ್ವನಾಥ ಅಕ್ಷರಸ್ಥನಾಗಿ ಕಂಡುಬಂದರೆ, ತಂದೆ ಮಲ್ಲಯ್ಯ ಅನಕ್ಷರಸ್ಥನಾಗಿ ಕಂಡುಬರುತ್ತಾನೆ. ಆ ಮೂಲಕ ಇವರಿಬ್ಬರು ವಿಭಿನ್ನ ನೆಲೆಯ ಪ್ರತಿನಿಧಿಗಳಂತೆ ಕಾಣುತ್ತಾರೆ. ಆ ಹಿನ್ನೆಲೆಯಲ್ಲಿಯೇ ವ್ಯಕ್ತಿತ್ವ ಸ್ವಭಾವಗಳ ಭಿನ್ನತೆಯನ್ನು ಲೇಖಕಿ ಈ ಕತೆಯಲ್ಲಿ ಕಟ್ಟಿಕೊಡುತ್ತಾರೆ. ಪರದಾಟ, ಅಸಹಾಯಕತೆಗಳನ್ನು ಹಾಗೂ ಶ್ರೀಮಂತರ ಅಕ್ರಮ ವ್ಯವಹಾರಗಳನ್ನು ಕಂಡೂ ಕಾಣದಂತೆ ಗೌಪ್ಯವಾಗಿಡುವ ಸ್ವಭಾವವನ್ನು ಕತೆಗಾರ್ತಿ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಈ ಕತೆಯು ಆಗ ತಾನೇ ಸಾಹಿತ್ಯ ಕ್ಷೇತ್ರದಲ್ಲಿ ಏಳಿಗೆಯನ್ನು ಹೊಂದುತ್ತಿದ್ದ ಕತೆಗಾರನೊಬ್ಬನ ನೈಜ ಬದುಕಿನಲ್ಲಿ ಆದ ಘಟನೆಗಳನ್ನು ಕಥೆಯ ರೂಪದಲ್ಲಿ ಹೇಳುತ್ತದೆ. ವಿಶ್ವನಾಥ ಕತೆಯನ್ನು ಬರೆದಿದ್ದರಿಂದಾಗಿ ಅದು ಅವನ ನಿಜ ಜೀವನದ ಮೇಲೆ ಎಂತಹ ಪರಿಣಾಮ ಬೀರಿತು ಮತ್ತು ಅದನ್ನು ಬಗೆಹರಿಸಿಕೊಂಡ ಬಗೆಯೇ ಒಂದು ರೀತಿಯ ಕಥಾಪ್ರಸಂಗವಾಗುತ್ತದೆ.

'ಎಲ್ಲೋ ಜೋಗಪ್ಪ ನಿನ್ನ ಅರಮನೆ' ಕತೆಯ ಶೀರ್ಷಿಕೆ ಜಾನಪದದ ಪ್ರಭಾವಕ್ಕೆ ಒಳಗಾಗಿದ್ದು, ಜಾನಪದದ ವಿಶೇಷ ಮಾತುಗಾರಿಕೆಯಿಂದ ದುಡಿಯುವವರ ಸಂಕಷ್ಟಗಳನ್ನು ಹಿಡಿದಿಡುವ ಕತೆಯಾಗಿದೆ. ಇಲ್ಲಿ ಪ್ರಸಂಗಗಳೇ ಕತೆಯಾಗಿದ್ದು ಕಲೆಯನ್ನು ಕತೆಯಾಗಿಸುವ ಪಳಗಿದ ಶೈಲಿ ವ್ಯಕ್ತಗೊಂಡಿದೆ. ಸರೋಜಮ್ಮ ಮತ್ತೆ ಮನೆಗೆ ಬಂದಾಗ ರಾಮಯ್ಯ ಆಡುವ ಮಾತುಗಳು ನಮ್ಮ ಸಾಮಾಜಿಕ ವ್ಯವಸ್ಥೆಯು ಪುನರ್‌ಅವಲೋಕನದ ದಾರಿಯಲ್ಲಿ ಹೇಗೆ ಸಾಗಬೇಕೆಂಬುದರ ಸ್ಪಷ್ಟತೆ ಇದೆ. ಹಾಗೆಯೇ ದುಡಿಯುವ ವರ್ಗದ ಹಿಂದೆ ಹಲವಾರು ರೀತಿಯ ಸಂಕಷ್ಟಗಳು ಹೇಗೆ ಎದುರಾಗುತ್ತವೆಂಬುದನ್ನು ವೇದಾ ನಿರೂಪಿಸಿದ್ದಾರೆ. ಕತೆ ಹೆಣ್ಣು ಮತ್ತು ಭೂಮಿ ಎರಡನ್ನೂ ಸಮೀಕರಿಸುತ್ತಾ ಹೊಸದೊಂದು ಆಯಾಮವನ್ನು ಪಡೆದುಕೊಂಡಿದೆ. 'ಹಸಿವೆಂಬ ಹೆಬ್ಬಾವು ಬಸಿರ ಬಂದು ಹಿಡಿದೊಡೆ.' ಕತೆಯಲ್ಲಿನ ಶಿವಮ್ಮ ಗ್ರಾಮೀಣ ಸ್ತ್ರೀಯರ ಮುಗ್ಧತೆ, ಧೈರ್ಯ, ಸಾಧನೆಗಳಿಗೊಂದು ಪ್ರತೀಕವಾಗಿದ್ದಾಳೆ. ನಮ್ಮ ಸಮಾಜದಲ್ಲಿ ಸಮಾನತಾದೃಷ್ಟಿ ಇಲ್ಲದೆ ಶ್ರೇಣೀಕರಣದ ಕ್ರಮವಿದೆ. ಬಡವರಿಗೆ ತಾವು ಬದುಕುವುದೇ ಒಂದು ಸವಾಲಾಗಿದೆ. ಹಸಿವು ಕೊಡುವ ಅನುಭವ ಹಸಿದವನಿಗೆ ಗೊತ್ತು ಎಂಬ ಧೋರಣೆ ಕತೆಯಲ್ಲಿ ವ್ಯಕ್ತವಾಗಿದೆ. ಪಟೇಲ, ಕಮಲ, ಮೇಷ್ಟ್ರು ಈ ಎಲ್ಲರೂ ಶಂಕರನನ್ನು ಅವಮಾನಿಸುತ್ತಾರೆ. ಅಂದರೆ ಹಸಿವು ಅವನನ್ನು ಹಿಂಸಿಸುತ್ತಿದ್ದರೆ, ಇವರೆಲ್ಲ ಅವನ ಮನಸ್ಸನ್ನು ನೋಯಿಸುತ್ತಾರೆ. ಕತೆಯಲ್ಲಿ ಶಂಕರ 'ಬಸವನಹುಳು' ನಾನಾಗಬೇಕಿತ್ತು ಎಂದುಕೊಳ್ಳುವಲ್ಲಿ ಶೋಷಿತನ ಮುಗ್ಧತೆ ಮತ್ತು ಪ್ರತಿಭಟನೆ ಎರಡೂ ವ್ಯಕ್ತವಾಗಿವೆ. 'ಕತೆಗಾರನೊಬ್ಬನ ಕಥಾಪ್ರಸಂಗದಲ್ಲಿ' ಬರುವ ಮಲ್ಲಯ್ಯ, ಮಗ ಓದಲು ಶಾಲೆಗೆ ಹೋದರೆ ತನಗೆ ದುಡಿತದ ಹಣ ಸಿಗುವುದಿಲ್ಲ ಎಂಬ ಕಾರಣಕ್ಕೆ ವಿರೋಧಿಸುತ್ತಾನೆ. ಅದರಂತೆ ಹಸಿವೆಂಬ ಹೆಬ್ಬಾವಿನ ಮಲ್ಲಯ್ಯನಲ್ಲಿಯೂ ಕೂಡ ಮಗನಿಂದ ದುಡಿಸಿ ತಿನ್ನಬೇಕೆಂಬ ನಿಲುವು ಪುನರಾವರ್ತನೆಯಾಗಿದ್ದರೂ ಆಶಯಗಳು ಮಾತ್ರ ವೈವಿಧ್ಯಮಯವಾಗಿವೆ. ಇದು ಸಹ ಸತ್ವಯುತ ಸೃಜನಶೀಲತೆಯ ಸಂಕೇತವೇ ಆಗಿದ್ದು, ಸಾಂತವ್ವ, ಶಿವಮ್ಮ, ಉಸ್ಕೂರಮ್ಮ – ಮುಂತಾದುವು ಸಹ ಬದುಕನ್ನು ಎದುರುಗೊಳ್ಳುವ ಪಾತ್ರಗಳಾಗಿವೆ.

ವೇದಾ ಅವರ ಬಹುಪಾಲು ಕತೆಗಳಲ್ಲಿ ಸ್ತ್ರೀಕೇಂದ್ರಿತ ಪಾತ್ರಗಳು ಹೆಚ್ಚಿನ ಮಾನ್ಯತೆಯನ್ನು ಪಡೆದುಕೊಂಡಿವೆ. ಹಾಗೆಂದ ಮಾತ್ರಕ್ಕೆ ಪುರುಷ ಪಾತ್ರಗಳು ಇಲ್ಲವೇ ಇಲ್ಲ ಎಂದಲ್ಲ. ಅವು ಆಂಶಿಕವಾಗಿ ಕತೆಯೊಳಗೆ ಸುಳಿದಾಡಿವೆ. ಇವರ ಕತೆಗಳಲ್ಲಿ ಹೆಣ್ಣಿನ ಸಹನೆಯ ಪರಾಕಾಷ್ಠೆ ಮಡುಗಟ್ಟಿ ನಿಂತಿದ್ದು ಸಾವಿನಲ್ಲಿ ಅಂತ್ಯವಾದ ಸಂಗತಿ ಸ್ತ್ರೀ ಶೋಷಣೆಯ ಭಾಗವಾಗಿಯೇ ಮೂಡಿಬಂದಿದೆ. ಪುರಾಣಗಳಿಂದ ಉದಾಹರಣೆಗಳನ್ನು ನೀಡುವುದರ ಮೂಲಕ ಶತಶತಮಾನಗಳಿಂದ ಹೆಣ್ಣು ಗಂಡಿನಿಂದ ನಿರ್ಲಕ್ಷ್ಯಕ್ಕೆ, ಅಪಮಾನಕ್ಕೆ ಒಳಗಾಗಿರುವ ಯಾತನಾಮಯವಾದ ಬದುಕನ್ನು ಬಹಿರಂಗಗೊಳಿಸುವ ಶೋಧನಾತ್ಮಕ ನೆಲೆಯ ಆಯಾಮ ಅವರ ಕತೆಗಳಿಗೆ ಸಂದಿದೆ.

ವೇದಾ ಅವರು ಸ್ತ್ರೀ ಶೋಷಣೆಯ ವಿಭಿನ್ನ ನೆಲೆಗಳನ್ನು ಶೋಧಿಸುವಂತೆಯೇ ದಲಿತಾಂತರಂಗದ ಬವಣೆಗಳನ್ನು ಅಷ್ಟೇ ಸೂಕ್ಷ್ಮವಾಗಿ ಚಿತ್ರಿಸಬಲ್ಲರು ಎಂಬುದಕ್ಕೆ 'ಕುರುಕ್ಷೇತ್ರವೂ ಕುಂಯ್ಯನೆಂಬ ಬಾಲನ ಕತ್ತಲ ಲೋಕವೂ', 'ಹಂದಿ ಮತ್ತು ದಾಯಾದಿ', 'ಸಾಂತವ್ವನೆಂಬ ಅವ್ವನು ರುದ್ರೇಶಿಯೆಂಬ ಕಂದನೂ' ಮುಂತಾದ ಕತೆಗಳು ಸಾಕ್ಷಿಯಾಗುತ್ತವೆ. ಗ್ರಾಮಾಂತರ ಪ್ರದೇಶಗಳಲ್ಲಿ ಮೇಲ್ವರ್ಗದವರು ದಲಿತರನ್ನು ಯಾವ ರೀತಿ ಬಳಸಿಕೊಳ್ಳುತ್ತಿದ್ದಾರೆಂಬುದರ ಚಿತ್ರಣ ಈ ಕತೆಗಳಲ್ಲಿದೆ. 'ದಲಿತ' ಪದದ ಬಳಕೆ ಕಾಣಿಸದಿದ್ದರೂ ಕತೆಗಳಲ್ಲಿನ ವಿವರಗಳಿಂದಾಗಿ ಕತೆಗಾರ್ತಿ ಕಟ್ಟಿಕೊಡುತ್ತಿರುವುದು ದಲಿತರ ಬದುಕಿನ ಚಿತ್ರಣವನ್ನು ಎನಿಸುತ್ತದೆ.

ಇಲ್ಲಿಯ ಒಟ್ಟಾರೆ ಕತೆಗಳನ್ನು ಗಮನಿಸಿದರೆ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಬದುಕಿನ ಹಲವಾರು ರೂಪಗಳ ಚಿತ್ರಗಳೇ ಇಲ್ಲಿ ಬಿತ್ತರಗೊಂಡಿರುವುದು ಗೋಚರವಾಗುತ್ತದೆ. ಇದರಿಂದಾಗಿ ಪ್ರಾದೇಶಿಕ ಭಾಷೆ ಕತೆಗಳಲ್ಲಿ ಸಹಜವಾಗಿ ಬಳಕೆಗೊಂಡಿದೆ. ಎಂ. ಎಸ್. ವೇದಾ ಅವರ ಎಲ್ಲ ಕತೆಗಳಲ್ಲೂ ನಂಜನಗೂಡಿನ ಸುತ್ತಮುತ್ತಲಿನ ಗ್ರಾಮೀಣ ಭಾಷೆ, ಅಲ್ಲಿನ ಆಡು ಮಾತಿನ ಶೈಲಿ ಕಂಡುಬರುತ್ತದೆ. ಈ ಕಥೆಯ ಉದ್ದಕ್ಕೂ ಇಂತಹ ಆಡುಮಾತುಗಳು ಕಾಣಸಿಗುತ್ತವೆ. ಉದಾಹರಣೆಗೆ, ಆ ಚೆಂಗೂಲ್ ನನ್ಮಗಂಗೂ ನಂಗೂ ಯಾವ್ದೆ ಸಂಬಂಜ ಇಲ್ಲ ಕಣಳಿ. ಅವ್ನ ಯಾನಾರಾ ಮಾಡ್ಕಳ್ಳಿ. ನನ್ ಸಂತೆಗಂತೂ ಅವುನ್ ಯೆಸ್ರ ಯಾಳಕಂಡು ಬರಬ್ಯಾಡೇಳಿ. ಯಾನೋ ಅರಾ ಸಿವಾ ಅನ್ಕಂಡು ಬಾಯಿಗ್ ರಾಗಿ ಕಾಳ್ ಆಕ್ಕಂಡು ನನ್ ಯಾಪ್ತಿ ಮಾಡ್ತಾ ಇವ್ನಿ, ನೀವೆ ನೋಡಿರಳಿ. ನನ್ ಕಷ್ಟುವಾ, ದುಡ್ಡ್‌ತಂದ್ ಹಾಕಾ ಟೇಮ್ನಾಗೆ ಹ್ವಾಗಿ ವಾದು ವಾದು ಅನ್ಕಂಡು ಮೈಸೂರ್ಗೆ ಸೇರ್ಕಂಡ. ಯೆಮ್ಮೆ ಗಿಮ್ಮೆ ಅಂತ ಕಡದ್ ಆಕ್ತಾ ಅವ್ನಿ ಅಂದ. ನಾನೂ ಅಂದಿ, ಆಡ್ದಿ, ಯಿಟ್ಟುನ್ ದ್ವಣ್ಣೆ ತಗಂಡು ಅಟ್ಟಾಡಿಸಕಂಡು ಆಕ್ದಿ ಕ್ಯಾಳ್ನಿಲ್ಲ. ಸತ್ತೋದ್ ಕುಟ್ಟಾ ಅನ್ಕಂಡು ಸುಮ್ನಾದಿ. ಮೈಸೂರ್‌ನಾಗೆ ಇದ್ಕಂಡು ಹಿಂಗೆಲ್ಲಾ ಕಡ್ದು ಕಟ್ಟೆ ಆಕ್ತಾ ಅವನೆ ಅಂತ ನಂಗೇನ್ ಗೊತ್ತಿತ್ತೇಳಿ. ನ್ಯಾಯನಾರ ಮಾಡಿ ಪಂಚೇಯ್ತಿನಾರಾ ಮಾಡಿ. ನಂಗೂ ಅದ್ಕೂ ಯಾವ್ ಸಂಬಂಜವೂ ಇಲ್ಲ ತಗಳಿ. ದಂಡುಕ್ಕೂ ನನ್ನ ಕ್ಯಾಳ್ಕಂಡು ಬರಬ್ಯಾಡಿ. ಬೆಂಡೆತ್ತಕ್ಕೂ ನನ್ನ ಕ್ಯಾಳ್ಕಂಡು ಬರಬೇಡಿ. ಆಯ್ತಾ ಯೋಳಿ' ಕತೆಯ ಉದ್ದಕ್ಕೂ ಕತೆಗಾರ್ತಿ ಯಥೇಚ್ಛವಾಗಿ ಗಾದೆಗಳನ್ನು ಬಳಸಿಕೊಂಡಿದ್ದಾರೆ. ಕಥಾ ಸನ್ನಿವೇಶಗಳಿಗೆ ಗ್ರಾಮೀಣ ಹಿನ್ನೆಲೆ ಇರುವುದರಿಂದಲೂ ಅಲ್ಲಿಯ ವಸ್ತುವೇ ಆಂತರ್ಯವಾಗಿರುವುದರಿಂದಲೂ ಅತ್ಯಂತ ಸಹಜವೆಂಬಂತೆ ಅಲ್ಲಿಯದೇ ಭಾಷೆ ಬಳಕೆಗೊಂಡಿದೆ. ನಂಜನಗೂಡು ಸುತ್ತಮುತ್ತಲಿನ ಭಾಷೆಯ ಸತ್ವದಿಂದಾಗಿ ಕಥೆಗಳಿಗೆ ಮತ್ತಷ್ಟೂ ಚೈತನ್ಯ ಬಂದಂತಾಗಿದೆ. ಹಳ್ಳಿಯ ಜೀವನದ ಒಳಪದರುಗಳನ್ನು, ಅಲ್ಲಿಯ ಇತಿಮಿತಿಗಳನ್ನು, ಸಂಕೀರ್ಣ ವ್ಯವಸ್ಥೆಯನ್ನು ಅತ್ಯಂತ ಸೂಕ್ಷ್ಮನೆಲೆಯಲ್ಲಿ ಗ್ರಹಿಸುತ್ತ ಬಂದಿದ್ದರಿಂದಾಗಿ ಇಲ್ಲಿಯ ಕತೆಗಳು ಅತ್ಯಂತ ಕುತೂಹಲಕ್ಕೆ ಕಾರಣವಾಗುತ್ತವೆ. ಪಕ್ವಗೊಂಡ ಅನುಭವ, ವೈವಿಧ್ಯಮಯವಾದ ವಸ್ತು, ಪ್ರಾದೇಶಿಕ ಭಾಷಾ ಬಳಕೆ, ಗೊಂದಲವಿಲ್ಲದ ನಿರೂಪಣಾ ಕ್ರಮ – ಇವೆಲ್ಲದರಿಂದಾಗಿ ವೇದಾ ಅವರ ಇಲ್ಲಿಯ ತನಕದ ಕತೆಗಳು ಕೇವಲ ಕತೆಗಳಾಗಿರದೆ, ಆಧುನಿಕ ಚಿಂತನೆ ಮತ್ತು ಭಾಷಾ ಕೌಶಲ್ಯವನ್ನು ಕಾಪಾಡಿಕೊಂಡಿರುವ ಮಹತ್ವದ ವಿಷಯವನ್ನೂ ಅನುಭವಕ್ಕೆ ತಂದುಕೊಡುತ್ತವೆ. ಪ್ರಕಾಶ್ ಭಾಟಿಯಾ, ಸಾಂತವ್ವ, ರುದ್ರೇಶಿ, ಪಾರೋತಿ, ಶ್ರೀದೇವಿ, ಚೆಲುವೆ ಮುತ್ತಮ್ಮ, ಗೌರಿ, ರಂಗಶೆಟ್ಟಿ, ಸಾವಂತ್ರಿ, ಈರಜ್ಜ, ಮಲ್ಲಯ್ಯ – ಮುಂತಾದ ಪಾತ್ರಗಳನ್ನು ಕಣ್ಣಿಗೆ ಕಟ್ಟುವಂತೆ ಸೃಷ್ಟಿಸಬಲ್ಲ ಶಕ್ತಿ ವೇದಾ ಅವರ ಬರವಣಿಗೆಗಿದೆ. ಅತ್ಯಂತ ಸಂಯಮದಿಂದ ಬರೆಯುವ ವೇದಾ ಅವರು ಇಂತಹ ಪಾತ್ರಗಳು ಮತ್ತು ಸನ್ನಿವೇಶಗಳ ಮೂಲಕ ಹೊಸ ಮೌಲ್ಯಗಳನ್ನು ತೆರೆದು ತೋರುತ್ತಿದ್ದಾರೆ. ಸಂಪೂರ್ಣವಾಗಿ ಪರಂಪರೆಗೆ ಬೆನ್ನು ತಿರುಗಿಸದೆ ಸಮಕಾಲೀನ ಜಗತ್ತನ್ನು ಕತೆಗಳಲ್ಲಿ ತಂದುಕೊಳ್ಳುವ ಉತ್ಸುಕತೆ ವೇದಾ ಅವರಲ್ಲಿ ಯಥೇಚ್ಛವಾಗಿ ಕಾಣಿಸಬಲ್ಲದು. ಹಾಗೆ ನೋಡಿದರೆ ನಮ್ಮ ಸಂದರ್ಭದ ಕನ್ನಡದ ಸಂವೇದನಾಶೀಲ ಕಥೆಗಳು ಸಂಸ್ಕೃತಿಯನ್ನು ಗಾಢವಾಗಿ ಬಿಂಬಿಸುತ್ತ ಬಂದಿವೆ. ಹಾಗಾಗಿ ಜನರ ಆಸೆ ಆಕಾಂಕ್ಷೆಗಳು, ಹಂಬಲಗಳು, ಆತಂಕಗಳು, ಸಣ್ಣಕತೆಗಾರರ ಗಮನ ಸೆಳೆಯುತ್ತಿವೆ. ಆನಂದದ ನೆಲೆಯಿಂದ ಸತ್ಯವನ್ನು ಅಭಿವ್ಯಕ್ತಿಸುವ, ಸಾಹಿತ್ಯದ ನೆಲೆಗೆ ಪರಿವರ್ತಿಸುವ ಕೆಲಸ ನಡೆಯುತ್ತಿದೆ. ಈ ನಿಟ್ಟಿನಲ್ಲಿ ಎಂ. ಎಸ್. ವೇದಾ ಅವರ ಪ್ರಯತ್ನವೂ ಅತ್ಯಂತ ಯಶಸ್ಸನ್ನು ಕಂಡಿದೆ ಎಂಬುದೇ ನನ್ನ ಭಾವನೆ.

**ಡಾ|| ಜಿ. ಆರ್. ತಿಪ್ಪೇಸ್ವಾಮಿ**
ಕನ್ನಡ ಪ್ರಾಧ್ಯಾಪಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

# ಹಸಿರು ಹುಲ್ಲಿನ ಮಹತ್ವ

ನಮ್ಮ ಸುತ್ತಮುತ್ತಲಿನಲ್ಲಿ ಎಲ್ಲಿ ನೋಡಿದರೂ ಹಸಿರು ಹುಲ್ಲಿನ ಹಾಸಿಗೆಯನ್ನು ಕಣ್ಣು ಹಾಯಿಸಿದ್ದಲ್ಲೆಲ್ಲಾ ಕಾಣಬಹುದು. ಇದಕ್ಕೆ ಕಾರಣ ಹುಲ್ಲಿನ ಮಾಯೆ. ಭೂಮಿಯ ಮೇಲೆ ಮೂರು ನಾಲ್ಕು ಸಾರಿ ಮಳೆ ಬಿದ್ದಾಗ, ಹಳೆಯ ಬೇರಿನಿಂದ ಹೊಸ ಹುಲ್ಲು ಚಿಗುರುವುದನ್ನು ನೋಡಬಹುದು. ಇಂತಹ ಹಸಿರಿನ ಚಾಚನ್ನು ಎಲ್ಲರೂ ಪ್ರೀತಿಸುತ್ತಾರೆ. ಅದರ ಮೇಲೆ ಕುಳಿತು, ಮಲಗಿ ವಿಶ್ರಾಂತಿ ಪಡೆಯುತ್ತಾರೆ, ಮಕ್ಕಳೂ ಅದರ ಮೇಲೆ ಹೊರಳುತ್ತಾರೆ. ಕೆಲವೊಮ್ಮೆ ಕಳೆ ಎಂದು ಭಾವಿಸಿದಾಗ ಕಿತ್ತು ಬಿಸಾಡುತ್ತಾರೆ. ಇಷ್ಟಾದರೂ ಹುಲ್ಲನ್ನು ನಾವು ಸ್ವಾಭಾವಿಕ ಸಸ್ಯವರ್ಗವೆಂದು ಗುರುತಿಸುತ್ತೇವೆ. ಹುಲ್ಲು ''ವನ್ಯಸಂಕುಲ''ವು ಪ್ರಾಕೃತಿಕ ಪರಿಸರವಾಗಿ ರೂಪಗೊಳ್ಳುವುದಕ್ಕೆ ಪೂರಕವಾಗಿದೆ. ಭೂಮಿಯ ಕೆಳಗೆ ಕೆಳಗಿನ ಬೇರುಗಳು ತುಂಬಾ ಗಹನವಾಗಿ, ಕಾಂಡಕ್ಕಿಂತ ಹೆಚ್ಚು ವೇಗವಾಗಿ ಲಭ್ಯವಿರುವ ಅಲ್ಪಸ್ವಲ್ಪ ನೀರಿನಿಂದಲೇ ಬೆಳೆಯುತ್ತಾ, ಹರಡುತ್ತಾ ಸಾಗುತ್ತದೆ.

ತನ್ನ ಈ ವಿಸ್ಮಯಕಾರಿ ಬೆಳವಣಿಗೆಯಿಂದ ಹಸಿರು ಹುಲ್ಲು ಹಲವಾರು ರೋಚಕ ಗುಣಲಕ್ಷಣಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಇತರ ಎಲ್ಲ ಸಸ್ಯಸಂಕುಲಗಳಿಗಿಂತ, ಈ ಹಸಿರು ಹುಲ್ಲು ಪ್ರಾಣಿ ಸಂಕುಲಗಳಿಗೆ ಮತ್ತು ಮಾನವರಿಗೆ ಆಹಾರವನ್ನು ಒದಗಿಸುತ್ತದೆ. ಹೀಗಾಗಿಯೂ ಹುಲ್ಲು ಭೂಮಿಯ ಎಲ್ಲೆಡೆಯೂ ತನ್ನ ಹಾಸನ್ನು ಹಬ್ಬಿಸುತ್ತದೆ.

ಸಸ್ಯ ಸಾಮ್ರಾಜ್ಯದ ಏಂಜಿಯೊಸ್ಪರ್ಮೆ ಭಾಗಕ್ಕೆ ಸೇರಿರುವ, 'ಮೊನೊಕಾಟಿಲಿಡಗ' ವರ್ಗಕ್ಕೆ ಸೇರಿರುವ ಗ್ಲುಮಿಫ್ಲೋರೇ ಕ್ರಮಕ್ಕೆ ಸೇರಿರುವ 'ಗ್ರಾಮೀನೆ' ಕುಟುಂಬಕ್ಕೆ ಸೇರಿರುವ ಹುಲ್ಲು ಮೂರನೆಯ ಅತಿ ದೊಡ್ಡ ಸಸ್ಯ ಸಾಮ್ರಾಜ್ಯವನ್ನು ಈ ಭೂಮಿಯ ಮೇಲೆ ವಿಸ್ತರಿಸಿಕೊಂಡಿದೆ. ಸಸ್ಯಶಾಸ್ತ್ರಜ್ಞರ ಅಭಿಪ್ರಾಯದಂತೆ ವಿಶ್ವದಾದ್ಯಂತ ಹುಲ್ಲಿನ ವೈವಿಧ್ಯತೆಯು ೧೦,೦೦೦ ಬಗೆಗಳನ್ನು ಒಳಗೊಂಡಿದೆ ಎಂದು ಹೇಳುತ್ತಾರೆ.

ಬಹುತೇಕ ಹುಲ್ಲುಗಳು ಕೊಳವೆ ಆಕಾರದ ಕಾಂಡಗಳನ್ನು ಹೊಂದಿರುತ್ತವೆ. ಪ್ರತಿಯೊಂದು ಹುಲ್ಲಿನ ಎಲೆಯ ತಳದಲ್ಲಿ ಎಲೆ ಆವರಣವನ್ನು ಹೊಂದಿರುತ್ತದೆ. ಹುಲ್ಲಿನ ಎಲೆಯೂ ಮೇಲ್ಭಾಗದಲ್ಲಿ ಕತ್ತಿಯಂತೆ ಚೂಪಾಗಿರುತ್ತದೆ. ಹುಲ್ಲನ್ನು ಕಟಾವು ಮಾಡಿದಾಗ, ಅದು ಮತ್ತೆ ಬಹು ಬೇಗ ಬೆಳೆಯುತ್ತದೆ. ಇದಕ್ಕೆ ಕಾರಣ-ಹೊಸ ಹುಲ್ಲಿನ ಎಲೆಗಳು ಮತ್ತೆ ಚಿಗುರುತ್ತವೆ. ಭೂಮಿಯ ತಳದಲ್ಲಿರುವ ಬೇರುಗಳು ನೀರು ಮತ್ತು ಮಣ್ಣಿನ ಸಹಾಯದಿಂದ ಮೇಲ್ಭಾಗದಲ್ಲಿ ಹೆಚ್ಚಿನ ಬೆಳವಣಿಗೆಯನ್ನು ಕಾಣುವಂತೆ ತೋರುತ್ತವೆ.

ವಿಶ್ವದ ಪ್ರತಿಯೊಂದು ಸ್ಥಳದಲ್ಲಿ ಈ ಸಸ್ಯಸಂಕುಲದ ಹುಲ್ಲುಗಳು ತಮ್ಮ ಹಾಸನ್ನು ಯಶಸ್ವಿಯಾಗಿ ಆವರಿಸುತ್ತಾ ಸಾಗುತ್ತವೆ. ಖಾಲಿ ಇರುವ ಸ್ಥಳದಲ್ಲಿ, ರಸ್ತೆ ಬದಿಯಲ್ಲಿ, ಪರಿತ್ಯಕ್ತ ಹೊಲದಲ್ಲಿ, ನಗರದಲ್ಲಿ ಮತ್ತು ಹಳ್ಳಿಯ ಬಂಜರು ನೆಲದಲ್ಲಿ ಈ ಹುಲ್ಲುಗಳು ಫಲವತ್ತಾಗಿ ಬೆಳೆಯುತ್ತವೆ. ಉತ್ತರ ಅಮೆರಿಕದ ವಿಶ್ವವಿಖ್ಯಾತ ಪ್ರೈರಿಸ್, ದಕ್ಷಿಣ ಅಮೆರಿಕದ ಸವನ್ನಾಗಳು, ಇರೆಸಿಯೊದ ಸ್ಟೆಪ್ಪಿ – ಇವುಗಳೆಲ್ಲಾ ಹಸಿರು ಹುಲ್ಲುಗಾವಲುಗಳಿಗೆ ತುಂಬಾ ಹೆಸರುವಾಸಿ.

ಹುಲ್ಲುಗಳು ಗಾಳಿಯ ಸಹಾಯದಿಂದ ಪರಾಗಸ್ಪರ್ಶ ಹೊಂದಿ ಫಲಿತಗೊಂಡು ಪುನರ್ ಸೃಷ್ಟಿಯಾಗುತ್ತವೆ. ಪುಷ್ಪರೇಣುಗಳು ಗಾಳಿಯಲ್ಲಿ ಬಿಡುಗಡೆಯಾಗುತ್ತವೆ. ಅಲ್ಲದೆ, ಈ ಗಾಳಿ ಸಂಚರಿಸಿದಲ್ಲೆಲ್ಲಾ ಪುಷ್ಪರೇಣುಗಳನ್ನು ಕೊಂಡೊಯ್ಯುತ್ತದೆ. ಅದು ತುಂಬಾ ಸಣ್ಣದಾಗಿ ಇರುವುದರಿಂದ, ಲಘು ತೂಕವಿರುವುದರಿಂದ ಸೂಕ್ತವಾದ ಸ್ಥಳದಲ್ಲಿ ಹುಲ್ಲು ಗೊಂಚಲಿನಂತೆ ಬೆಳೆಯಲು ಸಾಧ್ಯ. ಇಂತಹ ಹುಲ್ಲಿನ ಗೊಂಚಲುಗಳನ್ನು ಸ್ಪೈಕ್‌ಲೆಟ್‌ಗಳು ಎಂದು ಕರೆಯುತ್ತೇವೆ. ಹುಲ್ಲಿನ ಹೂವುಗಳಲ್ಲಿ ಪಕಳೆಗಳು ಇರುವುದಿಲ್ಲ. ಬದಲಾಗಿ ಹುಲ್ಲಿನ ಹೂವುಗಳು ಲಿಂಗ ಆಧಾರಿತ ಬೇರೆ ಬೀಜಕೋಶಗಳನ್ನು ಹೊಂದಿರುತ್ತವೆ. ಹೂವುಗಳು ಬೀಜಕೋಶಗಳನ್ನು ಭೇದಿಸಿಕೊಂಡು ಹೊರಬರಲು ಸ್ವಲ್ಪ ಸಮಯ ತಗಲುತ್ತದೆ. ಉದಾಹರಣೆಗೆ, ಗೋಧಿಯ ಹೂವುಗಳು ಕೇವಲ ೧೫ ನಿಮಿಷಗಳ ನಂತರ ಬೀಜಕೋಶಗಳನ್ನು ಭೇದಿಸಿಕೊಂಡು ಹೊರಬರುತ್ತವೆ. ಈ ರೀತಿ ಹೊರಬಂದ ಹೂವುಗಳು ಪುಷ್ಪಕೇಸರವಾಗಿ ಅತಿವೇಗವಾಗಿ, ಎರಡರಷ್ಟು ಉದ್ದವಾಗಿ ೧೦ ನಿಮಿಷದಲ್ಲಿ ಬೆಳೆದು ಅಸಂಖ್ಯಾತ ಪುಷ್ಪರೇಣುಗಳನ್ನು ಗಾಳಿಗೆ ಬಿಡುಗಡೆ ಮಾಡುತ್ತವೆ. ಇದರಂತೆಯೇ ಪುಷ್ಪಗರ್ಭವೂ ಸ್ವಲ್ಪ ಸಮಯದ ನಂತರ ತೆರೆದುಕೊಳ್ಳುತ್ತದೆ. ಗಾಳಿಯ ಸಹಾಯದಿಂದ ಪುಷ್ಪ ಕೇಸರವನ್ನು ತಂದು ಸೇರಿಸುವ ಕ್ರಿಯೆಯನ್ನು ವಾಯುಸ್ಪರ್ಶ ಪರಾಗ ಕ್ರಿಯೆ ಎಂದು ಕರೆಯುತ್ತೇವೆ. ಬೇರೆ ಯಾವುದೇ ಒಂದು ವಿಧಾನದಿಂದ ಪರಾಗಸ್ಪರ್ಶ ಕ್ರಿಯೆ ನಡೆಯಲೂ ಸಾಧ್ಯವಿಲ್ಲ.

ಪ್ರಾಣಿಗಳಿಂದ ಹೆಚ್ಚು ಮೇಯಿಸುವುದು, ರಸ್ತೆ-ರೈಲು ಮಾರ್ಗಗಳ ನಿರ್ಮಾಣ, ಕಾಡ್ಗಿಚ್ಚು ಇತ್ಯಾದಿಗಳು ಹುಲ್ಲು ನಾಶ ಹೊಂದಲು ಕಾರಣವಾಗಿವೆ. ಪ್ರವಾಹಗಳು ಮತ್ತು ಮಣ್ಣಿನ ಸವಕಳಿ ಹೆಚ್ಚಾಗುತ್ತಿರುವುದಕ್ಕೆ ಹುಲ್ಲುಗಾವಲುಗಳ ನಾಶವೇ ಮೂಲ ಕಾರಣ. ಜನಸಂಖ್ಯೆ ಹೆಚ್ಚಾದಂತೆಲ್ಲಾ ನಗರೀಕರಣವೂ ಹೆಚ್ಚಾಗುತ್ತಿದೆ. ಹುಲ್ಲಿನ ನಾಶಕ್ಕೆ ಇದೂ ಒಂದು ಕಾರಣ.

ಹುಲ್ಲಿನ ಕುಟುಂಬವು ಹಲವಾರು ಮುಖ್ಯ ಏಕದಳದ ಧಾನ್ಯಗಳನ್ನು ಒಳಗೊಂಡಿರುವುದರಿಂದ ಇದು ಮಾನವನ ಮುಖ್ಯಘಟಕ ಆಹಾರಗಳನ್ನು ಒದಗಿಸುವ ಮೂಲಗಳಾಗಿರುತ್ತವೆ. ರಾಗಿ, ಗೋಧಿ, ಬಾರಲಕ್ಕಿ, ಬತ್ತ, ಜೋಳ, ಮುಸುಕಿನ ಜೋಳ – ಇವೆಲ್ಲಾ ಹುಲ್ಲಿನ ವಿವಿಧ ಬೆಳೆಗಳು. ಇದರಂತೆಯೇ ಮತ್ತೊಂದು ಜಾತಿಯ ಹುಲ್ಲು-ಕಬ್ಬು. ಇದನ್ನು ಬೆಳೆಯುವುದರಿಂದ ಬೆಲ್ಲ, ಸಕ್ಕರೆ, ಮೊಲ್ಯಾಸಸ್ ಇತರ ವಸ್ತುಗಳನ್ನು ಉತ್ಪಾದಿಸಬಹುದು. ಜೊತೆಗೆ ಇದರಿಂದ ಆಲ್ಕೋಹಾಲ್, ಸ್ಟಾರ್ಚ್ ಇತ್ಯಾದಿ ವಸ್ತುಗಳನ್ನು ಉತ್ಪಾದಿಸಬಹುದು. ಪ್ರಾಣಿಗಳಿಗೆ ಮೇವಿನಲ್ಲಿ ಸೊರಘಂ, ನೀಲಿ ಹುಲ್ಲು ಮತ್ತು ಧಾನ್ಯಗಳ ಕಟಾವು ಮಾಡಿ ಉಳಿದ ಹುಲ್ಲುಗಳನ್ನು ಆಹಾರದ ರೂಪದಲ್ಲಿ ಪ್ರಾಣಿಗಳಿಗೆ ನೀಡಲಾಗುತ್ತದೆ.

ಹುಲ್ಲುಗಳ ದೈತ್ಯರೂಪ ಬಿದಿರು. ಇದು ಬಹು ವೇಗದಲ್ಲಿ ಬೆಳೆಯುತ್ತದೆ. ಒಂದು ಬಿದಿರುಕಡ್ಡಿಯು ದಿನಕ್ಕೆ ೪ ಅಡಿಯಂತೆ ಬೆಳೆಯುತ್ತದೆ. ಬಿದಿರು ತೂಕದಲ್ಲಿ ಲಘುವಾಗಿದ್ದು ತುಂಬಾ ಗಟ್ಟಿಯಾಗಿರುತ್ತದೆ. ಇಂತಹ ಬಿದಿರಿನಿಂದ ದೋಣಿ ನಿರ್ಮಾಣ ಮತ್ತು ಕಟ್ಟಡ ನಿರ್ಮಾಣದ ಕಾರ್ಯದಲ್ಲಿ ಹಾಗೂ ಆಳಿ ತಯಾರಿಕೆಯಲ್ಲಿ, ಕರಕುಶಲ ವಸ್ತುಗಳ ತಯಾರಿಕೆಗಾಗಿ ಬಳಸುತ್ತಾರೆ.

ವಿವಿಧ ಬಗೆಯ ಹುಲ್ಲುಗಳು ನಮ್ಮ ಸ್ವಾಭಾವಿಕ ಸಂಪನ್ಮೂಲಗಳಲ್ಲಿ ಅತಿ ಮುಖ್ಯವಾದುವು. ಏಕೆಂದರೆ ಅವು ಕೈಗಾರಿಕೆಗಳಿಗೆ ಬೇಕಾದ ಕಚ್ಚಾವಸ್ತುಗಳು, ಮರದ ದಿಮ್ಮಿ, ಬಿದಿರು, ಬೆತ್ತ, ಅಂಟು ಮತ್ತು ಗಿಡಮೂಲಿಕೆಗಳೇ ಅಲ್ಲದೆ ಪಶುಗಳಿಗೆ ಆಹಾರವನ್ನು ಒದಗಿಸುತ್ತವೆ. ಇವುಗಳಲ್ಲದೆ ಹುಲ್ಲುಗಳಿಂದ ಅಪ್ರತ್ಯಕ್ಷವಾಗಿಯೂ ಅನೇಕ ಉಪಯೋಗಗಳಿವೆ. ಅವುಗಳಲ್ಲಿ ಮುಖ್ಯವಾದುವುಗಳೆಂದರೆ :-

* ಹುಲ್ಲುಗಳು ತೇವಾಂಶವನ್ನು ಪೂರೈಸಿ ಉಷ್ಣಾಂಶವನ್ನು ಮಾರ್ಪಡಿಸುತ್ತವೆ.
* ತೇವಾಂಶವುಳ್ಳ ದಟ್ಟ ಹುಲ್ಲುಗಾವಲುಗಳು, ಮಾರುತಗಳನ್ನು ತಡೆದು ಮಳೆ ಬೀಳುವುದಕ್ಕೆ ನೆರವಾಗುತ್ತವೆ.
* ಹುಲ್ಲುಗಳು ಮಣ್ಣಿನ ಸವಕಳಿಯನ್ನು ತಡೆಗಟ್ಟುತ್ತವೆ. ಹಾಗೂ ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುತ್ತವೆ.
* ಹುಲ್ಲುಗಳು ಅನೇಕ ಪ್ರಾಣಿ ಮತ್ತು ಪಕ್ಷಿಗಳಿಗೆ ಆಶ್ರಯ ನೀಡಿ ಜೈವಿಕ ವೈವಿಧ್ಯತೆಗೆ ಹೆಸರಾಗಿವೆ.
* ಹುಲ್ಲುಗಳು ಪರಿಸರದ ಸಮತೋಲನ ಕಾಯ್ದುಕೊಳ್ಳಲು ಸಹಕರಿಸುತ್ತವೆ.
* ಸ್ಪೈನಿಫೆಕ್ಸ್ ಎನ್ನುವ ಜಾತಿಯ ಹುಲ್ಲು ಕಡಲ ಕೊರೆತವನ್ನು ತಡೆಗಟ್ಟುತ್ತದೆ.
* ಮಣ್ಣಿನ ಮಾಲಿನ್ಯವನ್ನು ತಡೆಗಟ್ಟುತ್ತದೆ.
* ಜೀವ ತಾಣಗಳನ್ನು (ಬಯೋ ಪಾರ್ಕ್) ಒದಗಿಸುತ್ತವೆ.

ಉಪಯೋಗಕ್ಕೆ ಬರುವ ಹಲವಾರು ವಸ್ತುಗಳನ್ನು ಹುಲ್ಲುಗಳು ನೀಡುವುದರ ಜೊತೆಗೆ ಪ್ರಾಕೃತಿಕ ಸೌಂದರ್ಯವನ್ನು ಹೆಚ್ಚಿಸುತ್ತವೆ. ಅವುಗಳ ಹಸಿರು ಬಣ್ಣ, ಆಕಾರ, ಅದರ ಸೊಬಗಿನ ಸಿರಿಯೂ ನೋಡುವವರ ಮನಸ್ಸಿಗೆ ಆಹ್ಲಾದವನ್ನು ನೀಡುತ್ತವೆ. ಮೈಮನಗಳಲ್ಲಿ ಶಾಂತಿ, ನೆಮ್ಮದಿ ನೆಲೆಸುವಂತೆ ಮಾಡುತ್ತವೆ.

ಎಸ್. ರಾಜಶೇಖರ್
ಕೇರಾಫ್: ಶ್ರೀಕೃಷ್ಣ ಸ್ಟೋರ್ಸ್, ಬ್ಯಾಡರಹಳ್ಳಿ, ವಿ. ಎನ್. ಪೋಸ್ಟ್
ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೭೧

# ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚುವುದೇ ಇಂದಿನ ನೀತಿ

# ಇದರಲ್ಲಿ ಮುಚ್ಚುಮರೆ ಇಲ್ಲ

ಜಗತ್ತಿನಾದ್ಯಂತ ಬಂಡವಾಳ ವ್ಯವಸ್ಥೆ ತೀವ್ರ ಬಿಕ್ಕಟ್ಟಿಗೆ ಒಳಗಾಗಿರುವುದನ್ನು ಸಾಕಷ್ಟು ಚರ್ಚಿಸಿದ್ದೇವೆ. ವ್ಯವಸ್ಥೆಯೊಳಗಣ ಬಿಕ್ಕಟ್ಟನ್ನು ತಾತ್ಕಾಲಿಕವಾಗಿಯಾದರೂ ಪರಿಹರಿಸಿಕೊಳ್ಳುವ ಮಾರ್ಗವಾಗಿ ಎಲ್ಲ ಸರ್ಕಾರಗಳೂ ತಾವು ಅನಿವಾರ್ಯವಾಗಿ ಹೊಣೆ ಹೊತ್ತಿರುವ ಅಷ್ಟಿಷ್ಟು ಸಾರ್ವಜನಿಕ ಕ್ಷೇತ್ರಗಳಲ್ಲಿ ತೊಡಗಿಸಿರುವ ಬಂಡವಾಳವನ್ನೂ ಹಿಂತೆಗೆದುಕೊಳ್ಳಲು, ಹಲವಾರು ಸಾರ್ವಜನಿಕ ಕ್ಷೇತ್ರಗಳನ್ನು ಮುಚ್ಚಲು, ಕಡಿತಗೊಳಿಸಲು, ಅಲ್ಲಿರುವ ಕಾರ್ಮಿಕರನ್ನು ಹೊರದಬ್ಬಲು, ಸಾರ್ವಜನಿಕ ಆರೋಗ್ಯಸೇವೆ, ಕಾರ್ಮಿಕ ವಿಮಾ, ಪಿಂಚಣಿ ಕೃಷಿಕ್ಷೇತ್ರಕ್ಕೆ ನೆರವು – ಮುಂತಾದುವುಗಳನ್ನೆಲ್ಲ ಹಾಳುಗೆಡವಲು ಮುಂದಾಗಿದ್ದಾರೆ. ಈ ಬೆಳವಣಿಗೆಗಳ ವಿರುದ್ಧ ಜಗತ್ತಿನಾದ್ಯಂತ ಕಾರ್ಮಿಕರು ತೀವ್ರ ಹೋರಾಟಗಳನ್ನು ಸಂಘಟಿಸಿದ್ದಾರೆ. ಹೋರಾಟಗಳು ಚಾಲ್ತಿಯಲ್ಲಿವೆ. ಬಂಡವಾಳದ ಜಾಗತಿಕ ಕೇಂದ್ರ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲೇ ಪ್ರಾಥಮಿಕ ಮಾಧ್ಯಮಿಕ, ಪ್ರೌಢ, ವಿದ್ಯಾಭ್ಯಾಸ ಕ್ಷೇತ್ರ, ಸಾರ್ವಜನಿಕ ಪಾರ್ಕುಗಳು, ಪುಸ್ತಕ ಭಂಡಾರಗಳು, ರಾಷ್ಟ್ರೀಯ ಉದ್ಯಾನವನ, ಪಿಂಚಣಿ, ವಿಮೆ, ಸಾರ್ವಜನಿಕ ಆರೋಗ್ಯ ಸೇವೆಗಳು, ವಯಸ್ಕರ ಸೇವೆಗಳು ಮುಂತಾದ ಕ್ಷೇತ್ರಗಳೆಲ್ಲ ಸರ್ಕಾರದ ನೆರವಿನ ಸ್ಥಗಿತ ಅಥವಾ ಖೋತಾ ಕಾರಣದಿಂದ ಹಾಳುಗೆಡವಲ್ಪಟ್ಟು ಬಡಜನ, ಮಧ್ಯಮವರ್ಗ ತೀವ್ರ ಸಂತ್ರಸ್ತವಾಗಿವೆ. ಹಲವು ರೀತಿಯ ಕಾರ್ಮಿಕ ಪ್ರತಿಭಟನೆಗಳು, ಹೋರಾಟಗಳು ಜಾರಿಯಲ್ಲಿವೆ. ಇದಕ್ಕೆಲ್ಲಾ ನೀಡಿರುವ ಕಾರಣಗಳು ಅರ್ಥವ್ಯವಸ್ಥೆಗೊಳಗಿನ ಬಿಕ್ಕಟ್ಟು. ಆ ಬಿಕ್ಕಟ್ಟಿಗೆ ಕಾರಣರಾದವರಿಗೆ ಸರ್ಕಾರ ೨೦೦೮ರಿಂದ ಅಪಾರ ಪ್ರಮಾಣದ ನೆರವು, ತೆರಿಗೆ ವಿನಾಯ್ತಿ, ಸಾಲ ವಜ ಮುಂತಾಗಿ ನೆರವು ನೀಡಿ ಸರ್ಕಾರದ ಖಜಾನೆ ಖಾಲಿಯಾಗಿದೆ. ಈ ವರ್ಷ ಎಲ್ಲ ಸೊರಗಿದ್ದ ಬ್ಯಾಂಕುಗಳೂ, ಹಣಕಾಸು ಸಂಸ್ಥೆಗಳೂ, ಷೇರುಪೇಟೆಯ ಘಟಕಗಳೂ ಅಪಾರ ಲಾಭ ಗಳಿಸಿವೆ. ಆದರೂ ಅವರಿಗೆ ನೀಡಿದ್ದ ತೆರಿಗೆ ವಿನಾಯ್ತಿ ರದ್ದುಮಾಡಲು ಅಲ್ಲಿಯ ಪಾರ್ಲಿಮೆಂಟ್ ಅವಕಾಶ ನೀಡಲಿಲ್ಲ. ಪರಿಣಾಮವಾಗಿ ಹತ್ತಾರು ದಶಕಗಳ ಹೋರಾಟದ ಫಲವಾದ ಹಲವಾರು ಸಾರ್ವಜನಿಕ ಸೇವಾ ವ್ಯವಸ್ಥೆಗಳು ಕಾರ್ಮಿಕರ ಹಕ್ಕುಗಳು ಇವುಗಳಿಗೆ ಚ್ಯುತಿಯುಂಟಾಗಿದೆ. ಜಗತ್ತಿನ ಅತಿ ಶ್ರೀಮಂತ ರಾಷ್ಟ್ರದಲ್ಲಿ ಬಡತನ ತೀವ್ರ ಹೆಚ್ಚಿದೆ. ಇದೇ ಪರಿಸ್ಥಿತಿಯನ್ನು ಯೂರೋಪಿನ ರಾಷ್ಟ್ರಗಳಲ್ಲಿ ಜಪಾನಿನಲ್ಲಿ ಕಾಣಬಹುದು. ಇವುಗಳ ಅರ್ಥವ್ಯವಸ್ಥೆಯೊಡನೆ ಸಖ್ಯ ಬೆಳಸಿದ ಚೀನಾ, ಭಾರತ, ರಷ್ಯಾ, ಬ್ರೆಸಿಲ್ ಮುಂತಾದ ನವ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲೂ ಅವರ ಅರ್ಥವ್ಯವಸ್ಥೆ ಬಿಕ್ಕಟ್ಟಿಗೆ ಒಳಗಾಗಿದೆ. ಬಂಡವಾಳದ ಮಾರ್ಗದ ಬೆನ್ನಟ್ಟಿದ ಈ ವ್ಯವಸ್ಥೆಗಳಲ್ಲೂ ಹಲವು ರೀತಿಯ ಬಿಕ್ಕಟ್ಟು ಉಂಟಾಗಿದೆ. ಹಾಗೆಯೇ ಪಶ್ಚಿಮದಷ್ಟು ತೀವ್ರ ಪರಿಸ್ಥಿತಿ ಇಲ್ಲದಿದ್ದಾಗ್ಯೂ ಅವರನ್ನು ಅನುಕರಣೆ ಮಾಡುತ್ತಾ ಈ ಸರ್ಕಾರಗಳೂ ತಮ್ಮ ಬಂಡವಳಿಗರಿಗೆ ಹಿರಿಯ ಉದ್ಯಮಿಗಳಿಗೆ ಲಕ್ಷಾಂತರ ಕೋಟಿ ರೂಪದ ತೆರಿಗೆ ಪರಿಹಾರ ನೀಡಿ, ಸಾರ್ವಜನಿಕ ಕ್ಷೇತ್ರಗಳನ್ನು ಕೊನೆಗಾಣಿಸಲು ಇದೇ ಸದವಕಾಶವೆಂಬಂತೆ ವರ್ತಿಸುತ್ತಿವೆ. ಈಗಾಗಲೇ




ಪೆನ್ಷನ್ ಕ್ಷೇತ್ರದಲ್ಲಿ 'ಸುಧಾರಣೆ' ತಂದು ಸರ್ಕಾರ, ಉದ್ಯಮಗಳು ಕಾರ್ಮಿಕರಿಗೆ ಪೆನ್ಷನ್ ನೀಡುವ ಹೊಣೆಗಾರಿಕೆಯನ್ನು ಕಳಚಿಕೊಂಡಿವೆ. ಕಾರ್ಮಿಕರ ವಿಮಾ, ಪೆನ್ಷನ್ ಹಣವನ್ನು ಷೇರುಪೇಟೆಯಲ್ಲಿ ಹೂಡಲು ಮುಂದಾಗಿವೆ. ಭಾರತದಲ್ಲಿ, ಇಂದಿನ ಪರಿಸ್ಥಿತಿಯನ್ನು ನೆಪಮಾಡಿಕೊಂಡು, ಮುಂದುವರಿದ ಬಂಡವಾಳ ವ್ಯವಸ್ಥೆಯೊಳಗಿನ ಒತ್ತಡಗಳು ಇಲ್ಲಿ ಇರದಿದ್ದರೂ, ನಮ್ಮದೇ ಸಾರ್ವಜನಿಕ ಕ್ಷೇತ್ರವನ್ನು ಕೊನೆಗಾಣಿಸುವ ಸುಸಂದರ್ಭವಿದು ಎಂದು ಗುರುತಿಸಿ, ನಮ್ಮ ಸರಕಾರ ಕಾರ್ಯೋನ್ಮುಖವಾಗಿದೆ. ಇದಕ್ಕೆ ಯಾವುದೇ ಬೂರ್ಷ್ವಾ ಪಕ್ಷಗಳದ್ದೂ ವಿರೋಧವಿಲ್ಲದ ಒಮ್ಮತವಿದೆ ಎನ್ನುವುದು ಗಮನಿಸಬೇಕಾದ ವಿಷಯ.

ವಾಜಪೇಯಿ ಸರ್ಕಾರದಲ್ಲಿ ''ಬಂಡವಾಳ ಹಿಂತೆಗೆದುಕೊಳ್ಳುವ'' ವಿಚಿತ್ರ ಇಲಾಖೆಯನ್ನು ಅರುಣ್‌ಶೌರಿ ವಹಿಸಿದಂದಿನಿಂದ, ಇಂದಿನ ಕಾಂಗ್ರೆಸ್ ಯುಪಿಎ ವರೆಗೆ ಅರವತ್ತು ವರ್ಷ ಕಷ್ಟಪಟ್ಟು ಸಾರ್ವಜನಿಕ ಉಳಿತಾಯದಿಂದ ನಿರ್ಮಿಸಿದ ನಮ್ಮ ಸಾರ್ವಜನಿಕ ಉದ್ಯಮಗಳು ಹಲವಾರು ಕಾರಣಗಳಿಂದ ಹಾಳಾಗುತ್ತಿವೆ. ಈ ಕಾರಣಗಳಿಗೆ ಕಾರ್ಮಿಕರು ಕಾರಣವಲ್ಲ. ಆದರೂ ಬಂಡವಳಿಗರು ಇಟ್ಟುಕೊಂಡ ಪ್ರಭಾವೀ ಮಾಧ್ಯಮಗಳ ಅಬ್ಬರದಲ್ಲಿ ಕಾರ್ಮಿಕರೇ ಕಾರಣವೆಂಬಂತೆ ಪ್ರಚಾರ ಮಾಡಲಾಗುತ್ತಿದೆ. ಎಡಪಕ್ಷಗಳು ತಮ್ಮಲ್ಲಿನ ಹಲವಾರು ಭಿನ್ನಾಭಿಪ್ರಾಯಗಳು, ಒಡಕಿನಿಂದಾಗಿ ಈ ಪ್ರಚಾರದ ವಿರುದ್ಧ, ಈ ಸಂಚಿನ ವಿರುದ್ಧ ಯಾವುದೇ ಪ್ರಭಾವಿ ಚಳುವಳಿಗಳನ್ನು ಪ್ರತಿಭಟನೆಯನ್ನು ನೀಡಲು ಅಸಮರ್ಥವಾಗಿವೆ. ಹೀಗಾಗಿ ಸಾರ್ವಜನಿಕ ಉದ್ಯಮಗಳ ಭಂಡಾರ ಎಗ್ಗಿಲ್ಲದೆ ಲೂಟಿಯಾಗುತ್ತಿದೆ.

ಇತ್ತೀಚೆಗೆ ಸುದ್ದಿ ಮಾಡಿದ ಏರ್‌ಲೈನ್ಸ್ ಮುಷ್ಕರದಲ್ಲಿ ಇದ್ದ ವಿಷಯ ಇದೇ ರೀತಿಯದು. ಲಾಭಕರವಾಗಿ ನಡೆಸಲು ಸಾಧ್ಯವಿರುವ ಈ ಸರ್ಕಾರೀ ಉದ್ಯಮವನ್ನು ಬೇಕಂತಲೇ ಸರ್ಕಾರವೇ ಹಲವಾರು ನೀತಿಗಳ ಮೂಲಕ ಹಾಳುಗೆಡವಿತು. ಅದರ ಲಾಭ ನೀಡುವ ವಿಭಾಗಗಳನ್ನೆಲ್ಲಾ ಮುಚ್ಚಿ, ಖಾಸಗಿಯವರು ಅಲ್ಲಿಗೆ ಪ್ರವೇಶಿಸುವಂತೆ ಮಾಡಿತು. ನಂತರ ಕಾರ್ಮಿಕರ ಅಸಹಕಾರದಿಂದ ನಷ್ಟವಾಗುತ್ತಿದೆ ಎಂದು ಹೇಳಿತು. ಒಳಗೊಳಗೆ ಸಂಸ್ಥೆಯನ್ನು ಹಾಳುಗೆಡುವ ನೀತಿಯನ್ನು ಮಾಡಿಕೊಟ್ಟ ಮಂತ್ರಿಯನ್ನು ಬೇರೆ ಇಲಾಖೆಗೆ ವರ್ಗಾಯಿಸಿ, ಈಗ ಆರಿರುವುದೆಲ್ಲ ಸಹಜ ಬೆಳವಣಿಗೆ ಎಂದು ಹೇಳುತ್ತಿದೆ. ಹಾಗೆಯೇ ನೌಕರರಿಂದ ಮುಷ್ಕರ ಹೂಡಿಸುವ ಪ್ರೇರೇಪಣೆ ತಂತ್ರವೂ ಇದರಲ್ಲಿ ಅಡಗಿದೆ. ಇದರಲ್ಲಿ ಲಕ್ಷಾಂತರ ಕೋಟಿ ವ್ಯವಹಾರದ ಭ್ರಷ್ಟಾಚಾರವಿರುವುದು ಸ್ಪಷ್ಟ. ಆದರೆ ಈಗಷ್ಟೆ ಕಾರ್ಮಿಕರೊಡನೆ ಒಪ್ಪಂದವಾಗಿ ಉದ್ದಿಮೆಯೊಳಗಿನ ಭ್ರಷ್ಟಾಚಾರ, ಅದನ್ನು ಹೇಗೆ ನಡೆಸಬೇಕು ಎಂಬ ವಿಷಯ

ಕೆ. ಎಸ್. ಪಾರ್ಥಸಾರಥಿ

ಕಾರ್ಮಿಕರಿಗೆ ಸಂಬಂಧಪಟ್ಟದ್ದಲ್ಲ, ಏನಿದ್ದರೂ ನಿಮ್ಮ ಸಂಬಳ ಸವಲತ್ತು ವಿಷಯ ಮಾತ್ರ ಚರ್ಚಿಸಿ, ಅವುಗಳನ್ನು ಸರಿಪಡಿಸೋಣ ಎಂಬಂತಿದೆ ಅವರ ಈ ವಾದ. ಲೋಕಸಭೆಯಲ್ಲಿ ನಮಗೆ ಬಹುಮತವಿರುವವರೆಗೆ ನಾವು ಮಾಡಿದ್ದೆಲ್ಲ ಸರಿಯೆ ಎಂಬಂತಿದೆ ಈ ವಾದ. ಸರ್ಕಾರ ವಾಣಿಜ್ಯ ವ್ಯವಹಾರ ನಡೆಸಕೂಡದು ಎಂಬುದು ಈ ಬಂಡವಳಿಗ ಸರ್ಕಾರದ ಧೋರಣೆ. ಆದ್ದರಿಂದ ಈ ಏರ್‌ಲೈನ್ಸ್ ಘಟಕ ಮುಚ್ಚಿದರೂ ಪರವಾಗಿಲ್ಲ. ಒಂದು ವೇಳೆ ಈ ವಾದ ಸರಿ ಎನ್ನೋಣ. ಆದರೆ ಈ ಘಟಕಕ್ಕೆ ಮಾರುಕಟ್ಟೆಯಲ್ಲಿ ಒಂದು ಬೆಲೆ ಇದೆ. ಇದರಲ್ಲಿ ಇರುವ ಹೂಡಿಕೆ ಸಾರ್ವಜನಿಕರದ್ದು, ಅದನ್ನು ಮಾರಿದರೆ ಉತ್ತಮ ಬೆಲೆ ಬರಬೇಕಲ್ಲ? ಅದನ್ನೇಕೆ ಕೃಶವಾಗಿಸಿ, ಸೊರಗಿಸಿ ಬೆಲೆ ಇಲ್ಲದ್ದು ಮಾಡಿ, ಚಿಕ್ಕಾಸಿಗೆ ಮಾರುವ ಕೃತ್ರಿಮ ಯೋಜನೆ ನಡೆಸಿದ್ದೀರಿ? ಇದು ಯಾವ ಬಂಡವಳಿಗೆ ಅರ್ಥಶಾಸ್ತ್ರದಲ್ಲೂ ಸಮರ್ಥನೆ ಅಲ್ಲವಲ್ಲ? ಬಹಳ ಹಿಂದೆ ನಾಗಪುರ ಕಾಂಗ್ರೆಸ್ ಸಮ್ಮೇಳನದಲ್ಲಿ, ಅದೇ ಸಮಾಜವಾದ, ಸಹಕಾರಿ ಕೃಷಿ ಎಂದೆಲ್ಲಾ ಹುಸಿನುಡಿದರಲ್ಲ ಆಗ ಅಂದಿನ ಹಣಕಾಸು ಮಂತ್ರಿ ಮಾತ್ರ ಸ್ಪಷ್ಟವಾಗಿ ಹೇಳಿದ್ದು ಸಾರ್ವಜನಿಕ ಉದ್ಯಮಗಳನ್ನು ಸಂಘಟಿಸುವುದು ಇಂದಿನ ಅನಿವಾರ್ಯ ಹಾಗೆಯೇ ಮುಂದೊಮ್ಮೆ ಅದನ್ನು ಖಾಸಗೀಕರಣಗೊಳಿಸುವುದೂ, ವಹಿಸುವುದೂ ಅನಿವಾರ್ಯ ಎಂದಿದ್ದರು. ಶರದ್ ಯಾದವ್ ವಿಮಾನ ಖಾತೆ ಮಂತ್ರಿಯಾಗಿದ್ದಾಗ ಕುರಿಯನ್ನು ಮೊದಲು ಕೊಬ್ಬಿಸಿದರೆ ನಂತರ ಅದಕ್ಕೆ ಮಾರುಕಟ್ಟೆಯಲ್ಲಿ ಒಳ್ಳೆಯ ಬೆಲೆ ಬರುತ್ತದೆ ಎನ್ನುವುದು ಸಾಮಾನ್ಯಜ್ಞಾನ ಎಂದಿದ್ದರು. ಆದರೆ ಈಗ ಆಗುತ್ತಿರುವುದು ಅದೆರಡೂ ಅಲ್ಲ, ನೇರವಾಗಿ ದರೋಡೆ ಲೂಟಿ, ೨ಜಿ ಹಗರಣ ತೋರಿಸಿದಂತೆ. ಸಾರ್ವಜನಿಕ ಘಟಕಗಳನ್ನು ದುರ್ಬಲಗೊಳಿಸಿ ಅವುಗಳನ್ನು ಚಿಕ್ಕಾಸಿಗೆ ಮಾರುವಂತೆ ಮಾಡುವುದು ಅಲಿಖಿತ ನೀತಿಯಂತೆ ಹೊರಬೀಳುತ್ತಿದೆ. ಇದು ಅರುಣ್ ಶೌರಿಯ ಬಂಡವಾಳ ಹಿಂತೆಗೆದು ಕೊಳ್ಳುವ ತಂತ್ರಕ್ಕಿಂತ ಕೀಳಾದುದು. ಹೇಗೆ ಲಾಭ ದಾಯಕವಾದ ಒಂದು ಘಟಕವನ್ನು ಹಾಳುಗೆಡುವುದು ಎನ್ನುವುದನ್ನು ಬಿಎಸ್‌ಎನ್‌ಎಲ್ ದೂರವಾಣಿ ಘಟಕವನ್ನು ಉದಾಹರಿಸಿ ಹೇಳಬಹುದು. ಇದೇ ಕಾರ್ಯಕ್ರಮ ಮಿಕ್ಕೆಡೆಯೂ ನಡೆಯುತ್ತಿದ್ದು ಬಂಡವಳಿಗರ ಮಾಧ್ಯಮಗಳು ಅದನ್ನು ಬೇಕಂತಲೇ ಗಮನಿಸುವುದಿಲ್ಲ.

ಬಿಎಸ್‌ಎನ್‌ಎಲ್ ಘಟಕವನ್ನು ಸರ್ಕಾರೀ ಆಡಳಿತ ವಿಭಾಗದಿಂದ ಪ್ರತ್ಯೇಕಿಸಿ ಒಂದು ಉದ್ದಿಮೆಯಾಗಿಸುವ ಸಂದರ್ಭದಲ್ಲೇ ಅದನ್ನು ನೇರವಾಗಿ ಮಾರಿಬಿಡುವ ಚರ್ಚೆ ಬಂದಿತ್ತು. ಅದರ ಆಸ್ತಿಯನ್ನು ಕೇವಲ ೫೦೦೦ ಕೋಟಿ ರೂ.ಗಳೆಂದು ಹೇಳಲಾಯ್ತು ಅದು ಪಡೆದಿರುವ ಸ್ಥಿರಾ ಆಸ್ತಿ, ಭೂಮಿ, ಕಟ್ಟಡಗಳೇ ಲಕ್ಷಾಂತರ ಕೋಟಿ ರೂಪಾಯಿ ಮಾರುಕಟ್ಟೆಯಲ್ಲಿ ಅನ್ನುವ ವಿಷಯ ಹಾಗಿರಲಿ. ಆಗಲೂ ರಿಲೈಯನ್ಸ್ ಮುಂತಾದವರು ಇಡೀ ಉದ್ದಿಮೆಯನ್ನೇ ಕೊಳ್ಳಲು ಯತ್ನಿಸಿ, ಅದು ತಮ್ಮ ಅಂದಿನ ಸಾಮರ್ಥ್ಯಕ್ಕೆ ಮೀರಿದ್ದೂ ಎಂದು ಹಿಂದೆ ಸರಿದರು. ಇಡೀ ರಾಷ್ಟ್ರದ ದೂರವಾಣಿ ವ್ಯವಸ್ಥೆಯನ್ನು ಒಂದು ಘಟಕ ಎನ್ನುವ ಬದಲು, ವೃತ್ತಗಳನ್ನು ಬಿಡಿಬಿಡಿಯಾಗಿ ಮಾರಿದರೆ ಕೊಳ್ಳುತ್ತೇವೆ, ಕಾರ್ಮಿಕರ ವಿರೋಧ ಪರವಾಗಿಲ್ಲ ನಾವು ಅವರನ್ನು ತೃಪ್ತಿಪಡಿಸುತ್ತೇವೆ/ಗಮನಿಸಿ ಕೊಳ್ಳುತೇವೆ ಎಂದಿದ್ದರು. ಈ ಘಟಕವನ್ನು ಸ್ಥಾಪಿಸುವಾಗ ಅದಕ್ಕೆ ಸಂಪೂರ್ಣ ಸ್ವಾಯತ್ತತೆಯನ್ನು ನೀಡಿ, ಸರ್ಕಾರದ ಮಧ್ಯಪ್ರವೇಶ ಇರುವುದಿಲ್ಲ ಎಂದೂ ಹೇಳಲಾಗಿತ್ತು. ಅಂದು ಅದರಲ್ಲಿ ಇದ್ದ ಕಾರ್ಮಿಕರಿಗೆ ಇನ್ನು ಮುಂದೆ ಸರ್ಕಾರಿ ನೌಕರರು ಎಂದು ಕರೆಯುವುದಿಲ್ಲ, ಕೈಗಾರಿಕಾ ನೌಕರರಂತೆ ಪರಿಗಣಿಸಲಾಗುತ್ತದೆ ಹಾಗೂ ಸಾಕಷ್ಟು ಸೇವೆ ಸಲ್ಲಿಸಿರುವವರಿಗೆ ಸರ್ಕಾರೀ ಪಿಂಚಣಿಯನ್ನು ಅವರು ಇಷ್ಟಪಟ್ಟರೆ, ನೀಡಲಾಗುವುದು ಎಂದೂ ಹೇಳಲಾಗಿತ್ತು. ಎಲ್ಲ ಸಿಬ್ಬಂದಿಯೂ ಹಲವು ಷರತ್ತುಗಳ ಮೇರೆಗೆ ಒಪ್ಪಂದ ಮಾಡಿಕೊಂಡು, ಅಂದಿನಿಂದಲೇ ಬಿಎಸ್‌ಎನ್‌ಎಲ್ ನೌಕರರಾದರು. ಆದರೆ ಐಟಿಎಸ್ ಎಂಬ ಕೇಂದ್ರ ಟಿಲಿಗ್ರಾಫ್ ಸರ್ವೀಸ್‌ನ ಉನ್ನತ ಆಡಳಿತ ವ್ಯವಸ್ಥೆಗೆ ಸೇರಿದ ಅಧಿಕಾರಿಗಳು ಮಾತ್ರ ಬಿಎಸ್‌ಎನ್‌ಎಲ್ ನೌಕರರಾಗಲು ಒಪ್ಪಲಿಲ್ಲ. ಅವರು ಇಂದಿಗೂ ತಾವು ಸರ್ಕಾರಿ ನೌಕರರು ಎಂದೆ ಹೇಳಿಕೊಳ್ಳುತ್ತಾರೆ. ಹೊಸ ಸಂಸ್ಥೆಯ ಹೊಸ ದರದ ಅಪಾರ ಸಂಬಳದ ಜೊತೆಗೆ, ಡೆಪ್ಯುಟೇಷನ್ ಭತ್ಯೆಯನ್ನು ಪಡೆಯುತ್ತಾರೆ. ಇವರು ತಾಂತ್ರಿಕ ಹಾಗೂ ಆಡಳಿತಾತ್ಮಕ ನೀತಿಗಳನ್ನು ನಿರೂಪಿಸುವ ಕೇವಲ ೨೦೦೦ ಮಂದಿ. ಸಂಸ್ಥೆಯ ಇತರ ನೌಕರರು ಸುಮಾರು ನಾಲ್ಕು ಲಕ್ಷ ಆಗುತ್ತದೆ. ಈ ನೌಕರರಿಗೆ ಆಡಳಿತ ನೀತಿ ನಿರೂಪಣೆಯಲ್ಲಿ ಯಾವುದೇ ಅಧಿಕಾರವಿಲ್ಲ. ಏತನ್ಮಧ್ಯೆ ಈ ಸಂಸ್ಥೆಗೆ ಯಾವುದೇ ಸ್ವಾಯತ್ತತೆಯನ್ನು ನೀಡಿಲ್ಲ. ಉದಾಹರಣೆಗೆ ಈ ಸಂಸ್ಥೆ ತನ್ನ ಬಂಡವಾಳದ ಅಗತ್ಯಕ್ಕೆ ಮುಕ್ತ ಮಾರುಕಟ್ಟೆಗೆ ಹೋಗುವ ಅಧಿಕಾರ ನೀಡಿಲ್ಲ. ಈಗ ಎರಡು ವರ್ಷದಿಂದ ನಿರಂತರ ನಷ್ಟ ಅನುಭವಿಸುತ್ತಿದೆ ಈ ಸಂಸ್ಥೆ. ಹಾಗಾದರೆ ಈ ೨೦೦೦ ಅಧಿಕಾರಿಗಳ ಜವಾಬ್ದಾರಿ ಏನು? ಅವರಿಂದ ಇದನ್ನು ನಿರ್ವಹಿಸಲಾಗದಿದ್ದರೆ ಅವರೇಕೆ ಇಲ್ಲಿ ಬಾಡಿಗೆ ಸೈನಿಕರಂತೆ, ಮರ್ಸಿನರೀಸ್ ಅಂತಾರಲ್ಲ ಅದು, ಸಂಸ್ಥೆಯನ್ನು ಹಾಳುಮಾಡಲು ಉಳಿದಿರಬೇಕು? ಸರ್ಕಾರ ಅವರನ್ನು ಸಂಸ್ಥೆಯೊಳಗೆ ಶಾಶ್ವತವಾಗಿ ಸೇರಿ ಇಲ್ಲವೆ ಮನೆಗೆ ಹೋಗಿ ಎಂದು ಏಕೆ ಹೇಳುತ್ತಿಲ್ಲ?

ಬಿಎಸ್‌ಎನ್‌ಎಲ್‌ನ ಮೊಬೈಲ್ ಸೇವೆಯನ್ನು ಖಾಸಗಿ ಸಂಸ್ಥೆಗಳು ಪ್ರಾರಂಭಿಸಿ ಬೇರು ಬಿಟ್ಟ ಮೂರು ವರ್ಷದ ಮೇಲೆ ಪ್ರಾರಂಭಿಸಲಾಯಿತು. ಇದರ ಉದ್ದೇಶ ಏನು? ಸದ್ಯದಲ್ಲಿ ಈ ಸಂಸ್ಥೆ ಲಕ್ಷಾಂತರ ಮಾಸ್ಟ್‌ಗಳನ್ನು ರಾಷ್ಟ್ರಾದ್ಯಂತ ನೆಟ್ಟು, ಅದರ ವಲಯದ ಹರಹನ್ನು ಭದ್ರಪಡಿಸಲಾಗದೆ ಹೋಗಿದೆ. ಹಾಗಾಗಿ ಅದರ ಸೇವೆ ತೀರ ಕಳಪೆಯಾಗಿದೆ. ಇದಕ್ಕೆ ಕಾರಣ ಈ ಅಧಿಕಾರಿಗಳು. ಈ ಕುರಿತ ಟೆಂಡರ್‌ಅನ್ನು ಸರಿಯಾಗಿ ಸಿದ್ಧಪಡಿಸದೆ ಹಲವಾರು ವರ್ಷಗಳಿಂದ ಕೋರ್ಟಿನಲ್ಲಿ ಮೊಕದ್ದಮೆಯಾಗಿ ಕುಳಿತಿದೆ. ಈ ಹಿಂದೆ ಹೀಗೆ ಆಗಿದ್ದರೆ ಅಧಿಕಾರಿಗಳ ಅದಕ್ಷತೆ ಬಗ್ಗೆ ಶಿಸ್ತಿನ ಕ್ರಮ ಹಾಗೂ ನ್ಯಾಯಾಲಯದ ಮುಂದೆ ತುರ್ತು ತೀರ್ಪಿಗೆ ಒತ್ತಾಯ ಹೀಗೆಲ್ಲಾ ಮಾಡಿ, ಸರಿಪಡಿಸಿ, ಸೇವೆಗೆ ಆದ್ಯತೆ ನೀಡುತ್ತಿದ್ದರು. ಈಗ ಇದು ಇದರ ಸೇವೆಯನ್ನು ಹಾಳುಗೆಡವಲು ಒಂದು ಉದ್ದೇಶಪೂರಿತ ತಂತ್ರವೆಂದು ಕಂಡುಬರುತ್ತಿದೆ. ಅದೇ ಖಾಸಗಿ ಸಂಸ್ಥೆಗಳಿಗೆ ಈ ಟೆಂಡರ್ ಮುಂತಾದ ತಾಪತ್ರಯಗಳಿಲ್ಲ. ಅವರು ತೀರ್ಮಾನ ತೆಗೆದುಕೊಳ್ಳುವುದು ವೇಗವಾಗಿ, ಸರ್ವಾಧಿಕಾರದ ಅನುಕೂಲಗಳು. ಬಿಎಸ್‌ಎನ್‌ಎಲ್‌ಗೆ ನೈಜವಾದ ಸ್ವಾಯತ್ತತೆ ನೀಡಿದ್ದರೆ, ಈ ಮರ್ಸಿನರಿ ಅಧಿಕಾರಿಗಳ ಹೊರೆ ಇಲ್ಲದಿದ್ದರೆ ಸಮರ್ಥವಾದ ನಿರ್ವಹಣೆ ಸಾಧ್ಯವಾಗುತ್ತಿತ್ತು. ಕಾರ್ಮಿಕ ಸಂಘ ಈ ಸಂಸ್ಥೆಯೊಳಗೆ ತನ್ನ ಹಿಂದಿನ ಎಲ್ಲ ಹೋರಾಟದ ಸಾಮರ್ಥ್ಯವನ್ನು ಕಳೆದುಕೊಂಡಿದೆ. ಸಂಸ್ಥೆಯ ಭವಿಷ್ಯದ ಬಗ್ಗೆ ಅವರೂ ಚಿಂತೆಯಿಲ್ಲದ ನಿಷ್ಕ್ರಿಯತೆಯನ್ನು ಬೆಳೆಸಿಕೊಂಡಿದ್ದಾರೆ. ಇದಕ್ಕೆ ಒಂದು ಮುಖ್ಯ ಕಾರಣ ಈ ಸಂಸ್ಥೆ ನಷ್ಟ ಅನುಭವಿಸುತ್ತಿದ್ದರೂ, ಖಾಸಗಿ ಕಂಪನಿಗಳಿಗೆ ಸಮಾಸಮವಾಗಿ ತಮಗೂ ವೇತನ ಸವಲತ್ತು ಬೇಕೆನ್ನುವ ಹಾಗೂ ಸರ್ಕಾರ ಅದನ್ನು ಅನುಮೋದಿಸುವ ನೀತಿ. ಇದರಿಂದ ಇಲ್ಲಿಯ ಅಧಿಕಾರಿಗಳೂ ಕಾರ್ಮಿಕರೂ ನಿರಾಳವಾಗಿದ್ದಾರೆ. ಎಂದಾದರೂ ಘಟಕ ಮುಳುಗಿ ಹೋದರೂ ಅವರಿಗೆ ಅದರ ಬಗ್ಗೆ ಚಿಂತೆಯಿಲ್ಲ, ಕಾರಣ ಸರ್ಕಾರ ಈ ಕುರಿತ ಹಲವಾರು ಗ್ಯಾರಂಟಿಗಳನ್ನು ನೀಡಿಬಿಟ್ಟಿದೆ. ಹೊಸದಾಗಿ ಈ ಸಂಸ್ಥೆಯಲ್ಲಿ ಉದ್ಯೋಗ ನಿರ್ಮಾಣ ಮಾಡುತ್ತಿಲ್ಲ. ಇರುವವರೆಲ್ಲಾ ಕೆಲವೇ ವರ್ಷಗಳಲ್ಲಿ ಕನಿಷ್ಠ ಪೆನ್ಷನ್‌ಗೂ ಹಕ್ಕುದಾರರಾಗುತ್ತಾರೆ. ಪರಿಣಾಮವೆಂದರೆ

(೫೫ನೇ ಪುಟಕ್ಕೆ)



ಬರೆಯಲಾರೆ ಮಗು
ಕ್ಷಮಿಸು
ನಿನ್ನ ನಗು ಅಳುವಿಗಿಂತ
ದೊಡ್ಡ ಕವಿತೆ

ಎ. ಹರಿನಾಥ ಬಾಬು ಸಿರುಗುಪ್ಪ
ಗಂಗಾವತಿ 583227, ಕೊಪ್ಪಳ ಜಿಲ್ಲೆ

# 'ತೋಳ ಬಂತಲೆ ತೋಳ'

ನಮ್ಮ ಸರ್ಕಾರ ಪದೇ ಪದೇ 'ಅಭಿವೃದ್ಧಿ' ಮಂತ್ರ ಜಪಿಸಿದ್ದರಿಂದಲೋ ಏನೋ, ಹಾಳುಬಿದ್ದ ಕುರುಬರಹಳ್ಳಿ ಈಗ ಕುಬೇರರ ಟೌನ್‌ಷಿಪ್ ಆಗಿಬಿಟ್ಟಿದೆ! ಇದಕ್ಕೆ ಅಲ್ಲಿಯ ಕುರಿ ಕಾಯುತ್ತಿದ್ದ ತಿಮ್ಮನ ಮತ್ತು ಅವನ ವೃತ್ತಿಯ ರೂಪಾಂತರವೇ ಸಾಕ್ಷಿ.

ತಲೆಗೊಂದು ಟವಲ್ ಸುತ್ತಿಕೊಂಡು, ಹೆಗಲಮೇಲೊಂದು ಕಂಬಳಿ ಇರಿಸಿಕೊಂಡು, ಸೊಂಟದ ಕೆಳಗೆ ಲಂಗೋಟಿಯ ಪರದೆ ಬಿಟ್ಟುಕೊಂಡು, ಕೈಯ್ಯಲ್ಲೊಂದು ಉದ್ದನೆಯ ಕೋಲು ಹಿಡಿದುಕೊಂಡು ತಿಮ್ಮ ಕಾಣಿಸಿಕೊಳ್ಳುವುದಿಲ್ಲ, ಮುಂಜಾನೆ ಮನೆ ಮನೆಗೆ ಬಂದು ಕುರಿಗಳನ್ನು ಜಮಾಯಿಸಿಕೊಂಡು ಪಕ್ಕದ ಕಾಡುಮೇಡಿನಲ್ಲಿ ಅವುಗಳನ್ನು ದಿನವಿಡೀ ಮೇಯಿಸಿ ಸಂಜೆ ಅವು ತಮ್ಮ ತಮ್ಮ ಮನೆ ಸೇರುವಂತೆ ಅವನು ದುಡಿಯಬೇಕಾಗಿಲ್ಲ, ವರ್ಷಕ್ಕೊಮ್ಮೆ ರೈತಾಪಿ ಜನರು ನೀಡುವ ಅಷ್ಟಿಷ್ಟು ದವಸಧಾನ್ಯಗಳಿಂದಲೇ ತನ್ನ ಸಂಸಾರದ ಖರ್ಚನ್ನು ತೂಗಿಸಬೇಕಾಗಿಲ್ಲ.

ಕುಬೇರರ ಟೌನ್‌ಷಿಪ್ಪಿಗೆ ಈಗ ಮಲ್ಟಿ ನ್ಯಾಷನಲ್ ಕಂಪೆನಿಯೊಂದು ಬಂದು, ಕುರಿಕಾಯುವ ದಂಧೆಯನ್ನು ಪ್ರಾರಂಭಿಸಿದೆ. ಊರ ಹೊರಗೊಂದು ದೊಡ್ಡ ಮೈದಾನ. ಸುತ್ತಲೂ ಮುಳ್ಳು ಬೇಲಿ. ಮಧ್ಯದಲ್ಲೊಂದು ಷೆಡ್ಡು. ಪಕ್ಕದಲ್ಲೊಂದು ಗೋಡೌನು. ಈ ಗೋಡೌನಿನಲ್ಲಿ ಕುರಿಗೆ ತಿನ್ನಲು ಬೇಕಾದ ಎಲೆಗಳನ್ನು ಸಂಗ್ರಹಿಸಿ ಇಡಲಾಗುತ್ತದೆ. ಪಕ್ಕದಲ್ಲಿ ಕಾಡುಮೇಡು ಇಲ್ಲದಿರುವುದರಿಂದ ದೂರದ ಅಳಿದುಳಿದ ಕಾಡು ಪ್ರದೇಶದಿಂದ ಎಲೆಗಳೂ ರವಾನೆಯಾಗುತ್ತವೆ. ಒಂದೊಂದು ಜಾತಿಯ ಗಿಡದ ಎಲೆಗೆ ಒಂದೊಂದು ರೇಟು. ಯಾವ ಎಲೆ ತಿಂದರೆ ಕುರಿಯ ಹಾಲು ಹೆಚ್ಚು ಉತ್ಪಾದನೆಯಾಗುತ್ತದೋ ಆ ಎಲೆಗೆ ಬೆಲೆ ಜಾಸ್ತಿ. ದೊಡ್ಡ ದೊಡ್ಡ ರಟ್ಟಿನ ಪೆಟ್ಟಿಗೆಗಳ ಮೇಲೆ ಯಾವ ಜಾತಿಯ ಗಿಡದ ಎಲೆ, ಅದರ ತೂಕ ಮತ್ತು ಬೆಲೆ ಮಾತ್ರವಲ್ಲ, ಅದನ್ನು ಸಂಗ್ರಹಿಸಿದ ತಾರೀಕು ಹಾಗೂ ಅದರ ಎಕ್ಸ್‌ಪೈರಿ ಡೇಟನ್ನು ಮುದ್ರಿಸಲಾಗುತ್ತದೆ! ಲಾರಿಯಲ್ಲಿ ಪೆಟ್ಟಿಗೆಗಳನ್ನು ಸೇರಿಸಿ ಕುರಿಕಾಯುವ ಸ್ಥಳಗಳಿಗೆ ರವಾನಿಸಲಾಗುತ್ತದೆ. ಒಳ್ಳೆಯ ಗುಣಮಟ್ಟದ ಎಲೆಗಳ ಉತ್ಪಾದನೆಗೆಂದೇ ವಿದೇಶಿ ವಿಜ್ಞಾನಿಗಳ ಮಾರ್ಗದರ್ಶನದಲ್ಲಿ ಸಂಶೋಧನಾ ಕೇಂದ್ರಗಳನ್ನು ತೆರೆಯಲಾಗಿದೆ.

ಕುರಿಗಳನ್ನು ಇಟ್ಟುಕೊಂಡವರು, ಕೆಲಸಕ್ಕೆ ಹೋಗುವ ನಾಗರಿಕರು ತಮ್ಮ ತಮ್ಮ ಮಕ್ಕಳನ್ನು ಹೇಗೆ ಬೇಬಿ ಸಿಟಿಂಗ್‌ಗೆ ಕರೆದೊಯ್ದು ಬಿಟ್ಟು ಸಂಜೆ ವಾಪಸ್ಸು ಒಯ್ಯುತ್ತಾರೋ ಹಾಗೆಯೇ, ಕಂಪೆನಿಯ ಮೈದಾನಕ್ಕೆ ತಂದುಬಿಟ್ಟು ಅನಂತರ ತಮ್ಮ ತಮ್ಮ ಮನೆಗಳಿಗೆ ಕರೆದೊಯ್ಯುತ್ತಾರೆ. ಈಗ ಎಲ್ಲರ ಬಳಿಯೂ ವಾಹನಗಳಿವೆ. ನಡೆದಾಡುವವರೇ ಕಣ್ಣಿಗೆ ಬೀಳುವುದಿಲ್ಲ, ಪ್ರಾಣಿಗಳನ್ನು ಬಿಟ್ಟರೆ ನಡೆದಾಟವೇ ನಿಷೇಧ ಎನ್ನುವಂತಾಗಿದೆ. ತಂದುಬಿಟ್ಟು ಒಯ್ಯುವ ಕಷ್ಟ ಬೇಡವೆಂದವರು ಕಂಪೆನಿಯ ವ್ಯಾನಿನ ಸೌಲಭ್ಯವನ್ನು ದುಡ್ಡು ಕೊಟ್ಟು ಪಡೆಯಬಹುದು. ಅದೂ ಬೇಡ, ಕಂಪೆನಿಯ ಹಾಸ್ಟೆಲ್ಲಿನಲ್ಲಿಯೇ ಬೆಳೆಯಲಿ ಎನ್ನುವವರಿಗೂ ಸೌಲಭ್ಯವಿದೆ. ಹಾಗಿದ್ದಲ್ಲಿ ಮೊದಲು ಸೀಟ್ ರಿಸರ್ವ್ ಮಾಡಬೇಕಾಗುತ್ತದೆ. ಅದಕ್ಕೂ ನುಗ್ಗಾಟ, ಕ್ಯೂ. ಇಷ್ಟೆಲ್ಲಾ ಕಷ್ಟಪಟ್ಟು ಕುರಿಗಳನ್ನು ಯಾಕೆ ಸಾಕಬೇಕಪ್ಪಾ ಎಂದು ನೀವು ಕೇಳಬಹುದು. ಕುರಿಗಳನ್ನು ಈಗ ಯಾರೂ ಪ್ರೀತಿಯಿಂದ ಸಾಕುತ್ತಿಲ್ಲ, ಅದೊಂದು ಇನ್ವೆಸ್ಟ್‌ಮೆಂಟ್, ಅಷ್ಟೆ. ದುಪ್ಪಟ್ಟು, ತಿಪ್ಪಟ್ಟು ಲಾಭ ಸಿಗುವುದರಿಂದ ಅನೇಕರಿಗೆ ಕುರಿಗಳ ಮೇಲೆ ಆಸೆ. ಜನರು ಈಗ ಹಸು ಸಾಕುವುದನ್ನು ಬಿಟ್ಟುಬಿಟ್ಟಿದ್ದಾರೆ. ಗೋವಧೆ ಮಾಡಿದರೆ ಧಾಂದಲೆಗಳಾಗುತ್ತವೆ. ಹಾಗಾಗಿ ಕುರಿಗಳನ್ನು ಸಾಕಿದರೆ ರಗಳೆಯೇ ಇಲ್ಲ.

ಕಂಪೆನಿಗೆ ಸೇರಿದ ನಂತರ ತಿಮ್ಮನ ದೆಸೆ ಖುಲಾಯಿಸಿದೆ. ಅವನು ಮೋಟಾರ್‌ಬೈಕಿನಲ್ಲಿ ಯಾರ್ಡಿಗೆ ವೇಳೆಗೆ ಸರಿಯಾಗಿ ಬಂದು ಹೋದರಾಯ್ತು. ಒಳ್ಳೆಯ ವೇತನ. ಯೂನಿಫಾರಂ, ಬಿಸಿಲಿಗೆ ಹ್ಯಾಟು, ಮಳೆಗೆ ರೇನ್‌ಕೋಟು, ರಬ್ಬರ್ ಬೂಟು ಅವನಿಗೆ ಕೊಡಲಾಗಿದೆ. ಕೂತಲ್ಲಿಂದಲೇ ಕುರಿಗಳನ್ನು ನೋಡಲು ದುರ್ಬೀನು, ಶಬ್ದದಿಂದಲೇ ನಿಯಂತ್ರಿಸಲು ವಿಸಿಲ್‌ಗಳನ್ನು ಅವನಿಗೆ ನೀಡಲಾಗಿದೆ. ಷೆಡ್ಡಿನಲ್ಲಿ ಕುರ್ಚಿ, ಮೇಜು, ಅಡ್ಡಬೀಳಲು ಒಂದು ದಿವಾನ್ ಇವೆ. ಸೀಲಿಂಗ್ ಫ್ಯಾನ್ ಇದೆ. ಮನರಂಜನೆಗೆ ಒಂದು ಚಿಕ್ಕ ಟಿ.ವಿ. ಇದೆ. ಮನೆಯಿಂದ ತಂದ ಪಿಜ್ಜಾ, ಬರ್ಗರ್ ಮುಂತಾದ ತಿಂಡಿ, ಕುಡಿಯಲು ಬೇಕಾದ ಬಿಸಿಲೇರಿ ಬಾಟಲ್, ಪೆಪ್ಸಿ ಎಲ್ಲವನ್ನು ತಣ್ಣಗೆ ಇಟ್ಟುಕೊಳ್ಳಲು ಫ್ರಿಜ್ ಇದೆ. ಒಂದೇ ಒಂದು ಅನಾನುಕೂಲವೆಂದರೆ ಇಲ್ಲಿ ಸಿಗರೇಟು, ಬೀಡಿ ಸೇದುವಂತಿಲ್ಲ, ಮದ್ಯ ಸೇವಿಸುವಂತಿಲ್ಲ. ಅದನ್ನೆಲ್ಲಾ ಬೇಕಾದರೆ ಮನೆಗೆ ಹಿಂತಿರುಗಿದ ನಂತರ ತಿಮ್ಮ ಇಟ್ಟುಕೊಳ್ಳಬಹುದು. ಸಾರಿ, ಅವನನ್ನು ತಿಮ್ಮ ಎಂದು ಕರೆದರೆ ಅವನಿಗೆ ಸಿಟ್ಟು ಬರುತ್ತದೆ.

ಹಾಲಾಡಿ ಮಾರುತಿ ರಾವ್



ಅವನೀಗ ತನ್ನ ಹೆಸರನ್ನು 'ಟಿಮ್' ಎಂದು ಟ್ರಿಮ್ ಮಾಡಿಕೊಂಡಿದ್ದಾನೆ!

ವಿಶ್ವಕಪ್ ಕ್ರಿಕೆಟ್ ಮ್ಯಾಚನ್ನು ಇಡೀ ವಿಶ್ವವೇ ಕೆಲಸಬಿಟ್ಟು ನೋಡುವಾಗ ಟಿಮ್ ನೋಡದಿರಲು ಸಾಧ್ಯವೇ? ಅವತ್ತು ಅವನ ಹೆಂಡತಿ ಬೇರೆ, ''ಖಂಡಿತ ಭಾರತ ಆಸ್ಟ್ರೇಲಿಯವನ್ನು ಸೋಲಿಸುತ್ತದೆ'' ಎಂದು ಅಡ್ವಾನ್ಸ್ ಆಗಿ ಹೇಳಿ ಅವನಿಗೆ ಮಧ್ಯಾಹ್ನ ತಿನ್ನಲು ಕೋಳಿ ಬಿರಿಯಾನಿ ಪಾರ್ಸಲ್ ಮಾಡಿಕೊಟ್ಟಿದ್ದಳು. ಅದನ್ನು ಉಂಡು ಟಿ.ವಿ. ಆನ್ ಮಾಡಿದಾಗ ಅವನಿಗೆ ಗೊತ್ತಾಯ್ತು ಆಸ್ಟ್ರೇಲಿಯಾದವರದು ಮೊದಲನೆಯ ಬ್ಯಾಟಿಂಗ್ ಎಂದು. ಭಾರತ ಬ್ಯಾಟಿಂಗ್ ನೋಡುವ ಉತ್ಸಾಹ, ಎದುರಾಳಿಗಳ ಬ್ಯಾಟಿಂಗ್ ನೋಡುವುದರಲ್ಲಿ ಇರುವುದಿಲ್ಲ. ಬಿರಿಯಾನಿ ಊಟ ಭರ್ಜರಿಯಾಗಿದ್ದರಿಂದ ಟಿ.ವಿ. ನೋಡುತ್ತಾ ದಿವಾನಿನ ಮೇಲೆ ಒರಗಿದ. ಅವನಿಗೊಂದು ಕನಸು.

ತಮಾಷೆಗೆಂದು ''ತೋಳ ಬಂತೆಲೆ ತೋಳ'', ಎಂದು ತಾನು ಕೂಗಿಕೊಂಡಂತೆಯೂ, ಅದನ್ನು ಕೇಳಿ ಗದ್ದೆ ತೋಟಗಳಲ್ಲಿ ಕೆಲಸಮಾಡುತ್ತಿದ್ದ ಕೆಲವರು ಅವನ ಸಹಾಯಕ್ಕೆ ಓಡಿ ಬಂದಂತೆಯೂ, ಅವರ ಗಾಬರಿ ನೋಡಿ ತಾನು ನಕ್ಕಂತೆಯೂ, ಬಂದವರು ಪೆಚ್ಚು ಮುಖಮಾಡಿಕೊಂಡು ಅವನನ್ನು ಬಯ್ಯುತ್ತಾ ಹಿಂತಿರುಗಿದಂತೆಯೂ, ಸ್ವಲ್ಪ ಹೊತ್ತಿನ ನಂತರ ನಿಜವಾಗಿಯೂ ತೋಳ ಬಂತೆಂದೂ, ಅದನ್ನು ನೋಡಿ ತಾನು ಮತ್ತೊಮ್ಮೆ ''ತೋಳ ಬಂತು, ತೋಳ'' ಎಂದು ಕೂಗಿದಂತೆಯೂ, ಈ ಬಾರಿ ಯಾರೂ ಬರದಂತಾಗಿ ತೋಳ ಕುರಿಯನ್ನು ಹೊತ್ತುಕೊಂಡು ಹೋದಂತೆಯೂ, ಆ ನಷ್ಟ ತಿಳಿದ ಕುರಿಯ ಮಾಲೀಕ ತನ್ನನ್ನು ಬೆತ್ತದಿಂದ ಥಳಿಸಿದಂತೆಯೂ...

ನಿಜವಾಗಿಯೂ ಏಟು ತಿಂದವನಂತೆ ಟಿಮ್ ಗಾಬರಿಯಿಂದ ಎದ್ದು ಕುಳಿತು, ದುರ್ಬೀನು ಕಣ್ಣಿಗೆ ಹಿಡಿದು ನೋಡಿದರೆ, ನಿಜಕ್ಕೂ ಒಂದು ತೋಳ ಬೇಲಿಯಾಚೆ ಕುಳಿತು ಹೊಂಚುಹಾಕುತ್ತಿದೆ! ಅವನು ಈ ಹಿಂದೆ ತಮಾಷೆ ಮಾಡಿರಲಿಲ್ಲ. ಜನರು ಈಗ ಗಂಭೀರರಾಗುತ್ತಾ ಬಂದಂತೆ ಪ್ರಾಕ್ಟಿಕಲ್ ಜೋಕ್ ಸಹಿಸುವುದಿಲ್ಲ ಎನ್ನುವ ತಿಳುವಳಿಕೆ ಅವನಿಗಿತ್ತು. ನಿಜವಾಗಿ ಸಹಾಯ ಬೇಕಿದ್ದರೂ ಈ ದಿನಗಳಲ್ಲಿ ಜನ ಬರುವುದಿಲ್ಲ ಎನ್ನುವುದೂ ಅವನಿಗೆ ಗೊತ್ತಿತ್ತು. ಹಾಗಾಗಿ ಅವನು ತನ್ನ ಮೊಬೈಲ್ ಮೂಲಕ ಪಕ್ಕದ ಅರಣ್ಯ ಇಲಾಖೆಗೆ ತೋಳ ಬಂದಿರುವ ವಿಷಯ ತಿಳಿಸಿದ.

ಸ್ವಲ್ಪ ಹೊತ್ತಿನಲ್ಲೇ ಖಾಕಿ ಬಟ್ಟೆ ಧರಿಸಿದ ಅರಣ್ಯ ಅಧಿಕಾರಿಗಳು ರೈಫಲ್ ಹಾಗೂ ದೊಡ್ಡ ಬಲೆಯೊಡನೆ ನಾಲ್ಕಾರು ಜೀಪುಗಳಲ್ಲಿ ಬಂದಿಳಿದರು. ತುಂಬಾ ಕಷ್ಟಪಟ್ಟು ತೋಳನನ್ನು ಬಲೆಯಲ್ಲಿ ಹಿಡಿದಿಡುವಲ್ಲಿ ಅವರು ಯಶಸ್ವಿಯಾದರು. ಇದೊಂದು ದೊಡ್ಡ ಸುದ್ದಿಯಾಯ್ತು. ಟಿ.ವಿ.ಯಲ್ಲಿ ಇದನ್ನು ಬಿತ್ತಿದ್ದರಿಂದ ಟಿಮ್‌ಗೆ ದೊಡ್ಡ ಪ್ರಚಾರ ಸಿಕ್ಕಂತಾಯ್ತು. ಯಾವುದೇ ಸಾವಿಗೆ ಅಥವಾ ಸಹಾಯಕ್ಕೆ ಧಾರಾಳತನ ತೋರಿಸುವ ನಮ್ಮ ಸರ್ಕಾರ ಅವನಿಗೆ ಒಂದು ಲಕ್ಷ ಬಹುಮಾನ ನೀಡುವುದಾಗಿ ಘೋಷಿಸಿತು.



ಟಿಮ್‌ನಿಗೆ ತುಂಬಾ ಖುಷಿಯಾಯ್ತು ತಾನೊಬ್ಬ ಹೀರೋ ಆದೆನಲ್ಲಾ ಎಂದು. ಆದರೆ ಅವನ ಹೆಂಡತಿ ಆ ಬಹುಮಾನ ಯಾವಾಗ ಸಿಗುತ್ತದೆಂದು ಕಾಯುತ್ತಿದ್ದಾಳೆ. ಬೇಸತ್ತು ಅವಳು ಕೂಗುತ್ತಿದ್ದಾಳೆ, ''ಬಹುಮಾನ ಬಂತೆಲೆ, ಬಹುಮಾನ'', ಎಂದು!

**ಹಾಲಾಡಿ ಮಾರುತಿ ರಾವ್**
ನಂ. ೧೨, ೪ನೇ ಮುಖ್ಯರಸ್ತೆ, ೯ನೇ 'ಎ' ಅಡ್ಡರಸ್ತೆ, ಭೈರವೇಶ್ವರನಗರ
ನಾಗರಭಾವಿ, ಬೆಂಗಳೂರು - ೫೬೦ ೦೭೨

*(೫೩ನೇ ಪುಟದಿಂದ)* ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚುವುದೇ...

ಇವರಲ್ಲಿ ಯಾವುದೇ ಪ್ರತಿಭಟನೆ, ಪ್ರತಿರೋಧದ ಸುಳುವೂ ಉಳಿದಿಲ್ಲ. ಸೇವೆ ನೀಡುವ ಬದ್ಧತೆಯೂ ಇಲ್ಲ. ಬಿಎಸ್‌ಎನ್‌ಎಲ್ ಸಂಸ್ಥೆಯ ಕದ ಮುಚ್ಚಿಬಿಟ್ಟರೆ ಸಾಕು ಅದನ್ನು ಖಾಸಗಿಗೆ ಮಾರಿದಂತೆಯೇ. ಕಾರಣ ಆ ತೆರವನ್ನು ತುಂಬಲು ಈಗ ಖಾಸಗಿ ಸಂಸ್ಥೆಗಳು ಸಿದ್ಧವಾಗಿವೆ. ಈ ಕ್ಷೇತ್ರದಲ್ಲಿರುವ ಅಪಾರ ಲಾಭ ಎಷ್ಟು ಎಂದು ೨-ಜಿ ಹಗರಣದಲ್ಲಿ ಹೊರಗೆಡವಲಾಯ್ತಲ್ಲ. ಅಂದರೆ ಸಾರ್ವಜನಿಕ ಘಟಕಗಳನ್ನು ಲಾಭದಾಯಕವಾಗಿ ಮಾರಿ ಹಣ ಸಂಪಾದಿಸುವ ನೀತಿಯೂ ಈಗ ಸರ್ಕಾರದಲ್ಲಿ ಉಳಿದಿಲ್ಲವೆನಿಸುತ್ತದೆ.

ಈ ಹಿಂದೆ ಒಮ್ಮೆ ಜಯಪ್ರಕಾಶ್ ನಾರಾಯಣ್ ನೇತೃತ್ವದವರು ಇಂದಿರಾಗಾಂಧಿಯವರ ನೀತಿಯನ್ನು ವಿರೋಧಿಸುತ್ತಾ ''ಪ್ರಭುತ್ವದ ಬಂಡವಾಳಷಾಹಿ ಅಂದರೆ ಸಮಾಜವಾದವಲ್ಲ'' ಎಂದು ಹಿಂದೂ ಪತ್ರಿಕೆಯಲ್ಲಿ ಲೇಖನ ಬರೆದಿದ್ದರು. ಅದು ಸರಿಯಾದ ವಿಮರ್ಶೆಯಾಗಿತ್ತು. ತದನಂತರ ಅವರು ಟೋಟಲ್ ರೆವಲೂಷನ್ ಅಂತ ಹೇಳಿ ತಮ್ಮ ಸಮಾಜವಾದೀ ವ್ಯಕ್ತಿತ್ವವನ್ನೇ ನೀಗಿಕೊಂಡುದೆ ಬೇರೆ ವಿಷಯ. ಪ್ರಭುತ್ವದ ನಾಯಕತ್ವದಲ್ಲಿ ಸಾರ್ವಜನಿಕ ಘಟಕಗಳು ಸೃಷ್ಟಿಯಾದ ಮಾತ್ರಕ್ಕೆ ಅವು ಸಮಾಜವಾದೀ ಘಟಕಗಳಾಗುವುದಿಲ್ಲ. ಆದರೆ ರಾಜಕೀಯವಾಗಿ ಅವನ್ನು ಹಾಗೆ ಬಣ್ಣಿಸಿ ಸರ್ಕಾರ ಕಾರ್ಮಿಕರ, ಎಡಪಕ್ಷಗಳ ಸಹಕಾರವನ್ನು ಸ್ವಲ್ಪಕಾಲ ದಕ್ಕಿಸಿಕೊಂಡಿದ್ದು ವಾಸ್ತವ.

ಹಾಗೆಯೇ ಈ ಘಟಕದ ಕಾರ್ಮಿಕರು ಪ್ರಾರಂಭದಿಂದಲೇ ಸವಲತ್ತುಗಳನ್ನು ಪಡೆಯುತ್ತಾ ಸಮಾಜವಾದೀ ಹೋರಾಟವನ್ನು ಮೈಗೂಡಿಸಿಕೊಳ್ಳಲೇ ಇಲ್ಲ. ಐಟಿಐನ ಕಾರ್ಮಿಕನೊಬ್ಬನನ್ನು ನಾನು ಯಾಕಪ್ಪ ನೀನು ಸರಿಯಾಗಿ ಕೆಲಸ ಮಾಡುತ್ತಿಲ್ಲ, ಕಾರ್ಮಿಕನಾಗಿ ನಾವು ಈ ಸಂಸ್ಥೆಯನ್ನು ಉಳಿಸಿಕೊಳ್ಳಬೇಡವೇ ಎಂದರೆ, ಆತ ನನ್ನ ಮಗ ಈ ಸಂಸ್ಥೆಗೆ ಕೆಲಸಮಾಡಲು ಬರುವುದಿಲ್ಲ, ನನ್ನ ಕಾಲ ಮುಗಿದರೆ ಆಯ್ತು, ನಾನೂ ಸ್ವಯಂನಿವೃತ್ತಿಯನ್ನು ಪಡೆದರೂ ಪಡೆದೆ ಎಂದು ಹೇಳಿದ್ದ. ಈ ಎರಡು ಧೋರಣೆಗಳ ನಡುವೆ ಸಾರ್ವಜನಿಕ ಕೈಗಾರಿಕೆಗಳ ಬೆಂಬತ್ತಿದ ನಮ್ಮ ಸಮಾಜವಾದದ ಬಯಕೆ ಮಣ್ಣುಗೂಡಿದೆ. ಬಂಡವಾಳದ ಅತಿ ಕೆಟ್ಟ ಸ್ವರೂಪದ ಮಟ್ಟವನ್ನು ತಲಪಿರುವ ನಮ್ಮ ವ್ಯವಸ್ಥೆ ಈಗ ಈ ಎಲ್ಲ ಘಟಕಗಳನ್ನು ಗುಳಂ ಮಾಡಿದರೆ ಅದರಿಂದ ಯಾವುದೇ ರಾಜಕೀಯ ಪ್ರತಿಕ್ರಿಯೆಯೂ ಉಂಟಾಗದು. ಬಿಎಸ್‌ಎನ್‌ಎಲ್ ಮತ್ತು ಸರ್ಕಾರದ ದೂರಸಂಪರ್ಕ ಇಲಾಖೆ ಅಧಿಕಾರಿಗಳು ನಿವೃತ್ತಿ ಅಥವಾ ಸ್ವಯಂ ನಿವೃತ್ತಿ ಪಡೆದು, ಮರುದಿನವೇ ಖಾಸಗಿ ಟೆಲಿಕಾಂ ಕಂಪನಿಗಳಲ್ಲಿ ಉನ್ನತ ಹುದ್ದೆ ಸಂಬಳ ಪಡೆಯುವುದು ಈಗ ಭ್ರಷ್ಟಾಚಾರವೆಂದೇ ಪರಿಗಣಿಸುತ್ತಿಲ್ಲ.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ಬೆಳಕು', ವನಸಿರಿ ಬಡಾವಣೆ
ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭



# ವಿಶ್ವ ಕನ್ನಡ ಸಮ್ಮೇಳನ

**ಮಾ**ರ್ಚ್ ೧೧ರಿಂದ ೧೩ರವರೆಗೆ ಬೆಳಗಾವಿಯಲ್ಲಿ ವಿಜೃಂಭಣೆಯಿಂದ ನಡೆದ ವಿಶ್ವ ಕನ್ನಡ ಸಮ್ಮೇಳನದ ಬಗೆಗೆ ಬರೆಯಲು ಈಗಾಗಲೆ ತಡವಾಗಿದೆಯೆಂಬುದು ನಿಜ. ಬೇರೆ ಬೇರೆ ಪತ್ರಿಕೆಗಳ ವರದಿಗಳನ್ನು ನೋಡಿ, ದೂರದರ್ಶನದಲ್ಲಿ ಕಂಡ ದೃಶ್ಯಗಳನ್ನು ನೆನಪು ಮಾಡಿಕೊಂಡು, ಗಣ್ಯರ ಅಭಿಪ್ರಾಯಗಳನ್ನು ಗಮನಿಸಿ ಈಗ ವಿಶ್ಲೇಷಣೆಗೆ ತೊಡಗುವುದು ಅಪ್ರಸ್ತುತವಲ್ಲ.

ಸಮ್ಮೇಳನದ ಆರಂಭದ ದಿನವಾದ ಶುಕ್ರವಾರ ಬೆಳಗಿನಿಂದ ಬೆಳಗಾವಿಯ ಸುತ್ತಮುತ್ತಲಿನ ಎಲ್ಲ ದಾರಿಗಳೂ ರಾಣಿ ಚೆನ್ನಮ್ಮ ವೇದಿಕೆಯ ಕಡೆಗೇ ಸಾಗುತ್ತಿದ್ದವು. ಕನ್ನಡ ಸಂಸ್ಕೃತಿಯ ವೈಲಕ್ಷಣ್ಯಗಳನ್ನು ಪ್ರತಿನಿಧಿಸುವಂಥ ಮೆರವಣಿಗೆಯು, ನಿಗದಿಪಡಿಸಿದ್ದಂತೆ ಬೆಳಗಿನ ೯-೩೦ಕ್ಕೆ ಆರಂಭವಾಗದಿದ್ದರೂ ಜನ ತಾಳ್ಮೆಯಿಂದ ಕಾಯುತ್ತಿದ್ದರು. ಉದ್ಘಾಟನಾ ಸಮಾರಂಭವು ಆರಂಭವಾದ ಸಂಜೆಯ ಐದು ಗಂಟೆಯ ವೇಳೆಗೆ ಜಿಲ್ಲಾ ಮೈದಾನದ ಚಪ್ಪರವು ಅಕ್ಷರಶಃ ಜನರಿಂದ ಕಿಕ್ಕಿರಿದು ತುಂಬಿ ತುಳುಕುತ್ತಿತ್ತು. ಕೆಲವರು ಚಪ್ಪರದ ಹೊರಗೆ ನಿಂತು, ಕೆಲಹೊತ್ತು ಕಾಯ್ದು, ಹೊರವಲಯದಲ್ಲಿ ಠಳಾಯಿಸುತ್ತಿದ್ದು, ಹೊರಟುಹೋದುದು ಕನ್ನಡಾಭಿಮಾನಿಗಳಿಗೆ ನೋವಿನ ಸಂಗತಿಯಾಯಿತು.

ಸಮ್ಮೇಳನದಲ್ಲಿ ಭಾಗವಹಿಸಲು ದೇಶದ ಮೂಲೆ ಮೂಲೆಗಳಿಂದ, ದೂರದ ಊರುಗಳಿಂದ ಬಂದಿದ್ದ ನೂರಾರು ಕಲಾವಿದರಿಗೆ ಬೆಳಗಿನ ಉಪಾಹಾರವಾಗಲಿ, ವಸತಿ ಸೌಕರ್ಯವಾಗಲಿ ದೊರೆಯದೆ ಪರದಾಡಿದರೆಂದು ತಿಳಿಯುತ್ತದೆ.

ಸಮ್ಮೇಳನದ ಮುಖ್ಯ ಸಮಾರಂಭವು ನಡೆದ ರಾಣಿ ಚೆನ್ನಮ್ಮ ವೇದಿಕೆಯಂತೂ ಮೂರು ದಿನಗಳ ಕಾಲ ಸತತವಾಗಿ ಒಂದಿಲ್ಲೊಂದು ಚಟುವಟಿಕೆಯಿಂದ ಕೂಡಿರುತ್ತಿತ್ತು. ಹಗಲಿನಲ್ಲಿ ಸಭಾ ಕಾರ್ಯಕ್ರಮ, ವಿಚಾರಗೋಷ್ಠಿಗಳು, ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ ಕಾರ್ಯಕ್ರಮಗಳು, ಕವಿಗೋಷ್ಠಿ, ನಗೆಕೂಟ, ದೇಶವಿದೇಶಗಳ ಗಣ್ಯರ ಭೇಟಿ... ಹೀಗೆ. ರಾತ್ರಿಯಾದಂತೆ ರಂಗ ಪ್ರದರ್ಶನಗಳು. ಜಿಲ್ಲಾ ಕ್ರೀಡಾಂಗಣದ ಮುಖ್ಯವೇದಿಕೆಯಲ್ಲದೆ, ಹತ್ತಿರದ, ದೂರದ ೧೩ ಸಭಾಂಗಣಗಳು ಮತ್ತು ರಂಗಮಂದಿರಗಳಲ್ಲಿ ವಿಚಾರ ಸಂಕಿರಣಗಳೂ, ಗೋಷ್ಠಿಗಳೂ ನಡೆದವು. ಲಿಂಗರಾಜ ಕಾಲೇಜು ಮೈದಾನದಲ್ಲಿ ದೊಡ್ಡ ಪ್ರಮಾಣದ ಪುಸ್ತಕ ಪ್ರದರ್ಶನವು ನಡೆಯಿತು. ಒಟ್ಟಿನ ಮೇಲೆ ಇಡೀ ಬೆಳಗಾವಿ ನಗರದ ಸುತ್ತಮುತ್ತ ಹಬ್ಬದ, ಜಾತ್ರೆಯ ವಾತಾವರಣವೇರ್ಪಟ್ಟಿತ್ತು.

ನಾಗನೂರು ಮಠದ ಆವರಣದಲ್ಲಿ ಏರ್ಪಡಿಸಿದ್ದ ಊಟದ ವ್ಯವಸ್ಥೆಯೂ ತಕ್ಕಮಟ್ಟಿಗೆ ತೃಪ್ತಿಕರವಾಗಿಯೆ ಇತ್ತೆಂದು ಹೇಳಲಾಗುತ್ತದೆ. ಊಟ ತಿಂಡಿಗಳ ವ್ಯವಸ್ಥೆಯ ಜವಾಬ್ದಾರಿ ವಹಿಸಿಕೊಂಡಿದ್ದ, ಸ್ವಾಗತ ಸಮಿತಿಯ ಕಾರ್ಯಾಧ್ಯಕ್ಷರಾದ ಮಾನ್ಯ ಪ್ರಭಾಕರ ಕೋರೆಯವರು – ದೊಡ್ಡ ಸಮಾರಂಭಗಳ ಭೋಜನ ವ್ಯವಸ್ಥೆ ಮಾಡುವುದರಲ್ಲಿ ಸಿದ್ಧಹಸ್ತರೆಂದು ಹೇಳಲಾಗುತ್ತದೆ. ಭೋಜನ ವ್ಯವಸ್ಥೆಯು ತೃಪ್ತಿಕರವಾಗಿದ್ದಿತಂತೆ. ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ ಕಾರ್ಯಕರ್ತರೊಬ್ಬರು ಒಂದು ದಿನದ ಅಡಿಗೆಯ ವಿವರಗಳನ್ನು ನೀಡಿದ್ದು ಹೀಗೆ: ಇವತ್ತು ಇಲ್ಲಿ ಹತ್ತು ಕ್ವಿಂಟಾಲ್ ಅನ್ನ ಮಾಡಿವ್ರಿ; ನಾಲ್ಕು ಕ್ವಿಂಟಾಲ್ ಬದನಿಕಾಯಿ, ಇಳಿಸೀವಿ; ಎಂಟು ಕ್ವಿಂಟಾಲ್ ಹುಗ್ಗಿ ಮತ್ತು ಅಂಬಲಿ ಮಾಡಿವ್ರಿ.'' ಊಟದ ಬಗೆಗೆ ಯಾರೋ ಟೀಕೆ ಮಾಡಿದಾಗ, ಪಕ್ಕದ ಗ್ರಾಮದಿಂದ ಬಂದಿದ್ದ ಮುದುಕಿಯೊಬ್ಬರು ''ಜನ ಇಲ್ಲಿ ಉಣ್ಣಾಕ ಬರೋದಿಲ್ರಿ; ಪ್ರಸಾದ ಅಂತ ಬರ್ತಾರೆ'' – ಎಂದರಂತೆ !

ವಿಶ್ವ ಕನ್ನಡ ಸಮ್ಮೇಳನಕ್ಕೆ ಬೆಳಗಾವಿಯ ಆಸುಪಾಸಿನ ಪ್ರದೇಶಗಳಲ್ಲಿ ಮರಾಠಿ ಮಾತನಾಡುವ ಸಹಸ್ರಾರು ಮಂದಿ ಬಂದಿದ್ದರು. ಇವರಲ್ಲಿ ಹಲವರು ಕನ್ನಡ ಸಾಹಿತ್ಯ, ಸಂಸ್ಕೃತಿಗಳ ನಿಕಟ ಪರಿಚಯ ಮಾಡಿಕೊಳ್ಳುವ ಉದ್ದೇಶದಿಂದ ಬಂದಿರಲೂಬಹುದು. ವಿದ್ಯಾವಂತರೊಬ್ಬರು, ''ಸಮ್ಮೇಳನದಲ್ಲಿ ಭಾಗ ವಹಿಸುವುದು ಒಂದು ವೀಕೆಂಡ್ ಬದಲಾವಣೆ ಇದ್ದಂತೆ'' – ಎಂದುದೂ ಇದೆ.

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**

ಇದೆಲ್ಲ ಸಮ್ಮೇಳನ ವೈಭವ, ಸಂಭ್ರಮಗಳ ಮಾತಾಯಿತು. ಬೆಳಗಾವಿಯ ಈ ಸಮ್ಮೇಳನವು, ಕಳೆದ ಐವತ್ತು ವರ್ಷಗಳಲ್ಲಿ ರಾಜ್ಯವು ವಿವಿಧ ರಂಗಗಳಲ್ಲಿ ಮಾಡಿರುವ ಸಾಧನೆ, ಕನ್ನಡಿಗರ ಆಶೋತ್ತರಗಳನ್ನು ಈಡೇರಿಸುವ ದಿಕ್ಕಿನಲ್ಲಿ ಇಟ್ಟಿರುವ ಹೆಜ್ಜೆಗಳು, ನಾಡು ನುಡಿಗಳು ಎದುರಿಸುತ್ತಿರುವ ಸಮಸ್ಯೆಗಳು, ಸವಾಲುಗಳು – ಇತ್ಯಾದಿಗಳ ಬಗೆಗೆ ಗಂಭೀರವಾದ ಚರ್ಚೆಯೇನಾದರೂ ನಡೆಯಿತೆ, ಭರವಸೆಗಳೇನಾದರೂ ದೊರೆತವೆ ಎಂಬ ಬಗೆಗೆ ವಿವೇಚಿಸಬೇಕಾಗಿದೆ.

ಇಪ್ಪತ್ತೈದು ವರ್ಷಗಳ ಹಿಂದೆ ಮೈಸೂರಿನಲ್ಲಿ ಪ್ರಥಮ ವಿಶ್ವ ಕನ್ನಡ ಸಮ್ಮೇಳನ ನಡೆದಿತ್ತು. ಮೊದಲು ಇಂಥದೊಂದು ಸಮ್ಮೇಳನದ ಹೊಳಹು ಹಾಕಿದವರು ಅಂದಿನ ಮುಖ್ಯಮಂತ್ರಿಗಳಾಗಿದ್ದ ಆರ್. ಗುಂಡೂರಾಯರು. ಸಮ್ಮೇಳನಕ್ಕೆ ಪೂರ್ವಭಾವಿಯಾಗಿ ೧೯೮೩ರಲ್ಲಿ, ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ, ಸುಲಭ ಬೆಲೆಗೆ ಮಾರಾಟ ಮಾಡುವ ಯೋಜನೆ ಕಾರ್ಯಗತವಾಯಿತು. ಆದರೆ, ಸಮ್ಮೇಳನವು ನಡೆಯುವ ವೇಳೆಗೆ ಗುಂಡೂರಾಯರ ಅಧಿಕಾರಾವಧಿ ಮುಗಿದು ಮಾನ್ಯ ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಯಾಗಿದ್ದರು. ಸತತ ಎರಡು-ಮೂರು ವರ್ಷಗಳ ಅನಾವೃಷ್ಟಿಯಿಂದಾಗಿ ರಾಜ್ಯದಲ್ಲಿ ಬರಗಾಲ ತಲೆದೋರಿತ್ತು. ಜನರು ಹೊಟ್ಟೆ ತುಂಬ ಊಟವಿಲ್ಲದೆ ಕಂಗಾಲಾಗಿದ್ದರು. ಇಂಥ ಕ್ಷಾಮ ಕಾಲದಲ್ಲಿ ಅದ್ದೂರಿಯ ಸಮ್ಮೇಳನ ನಡೆಸುವುದು ಸರಿಯೆ, ಇದರ ಅಗತ್ಯವಿದೆಯೆ ಎಂಬ ಬಗೆಗೆ ವಿವಾದ ಉಂಟಾಯಿತು. ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಸಮ್ಮೇಳನದ ಪರ-ವಿರೋಧದ ನಿಲುವುಗಳ ಗಣ್ಯರನ್ನು ಚರ್ಚೆಗೆ ಆಹ್ವಾನಿಸಿ ವಿಧಾನಸೌಧದಲ್ಲಿ ಮಹತ್ವದ ಸಭೆ ನಡೆಸಿದರು. ಅದರಲ್ಲಿ ಭಾಗವಹಿಸಿದವರೆಲ್ಲ ಮುಕ್ತವಾಗಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರಂತೆ. ಶಿವರಾಮ ಕಾರಂತರು, ಬರಗಾಲವಿದೆಯೆಂದು ಜನ ಮಸಾಲೆ ದೋಸೆ ತಿನ್ನುವುದನ್ನು ನಿಲ್ಲಿಸಿದ್ದಾರೆಯೆ? – ಎಂದು ಖಾರವಾಗಿ ಪ್ರಶ್ನಿಸಿದ್ದೂ ವರದಿಯಾಗಿತ್ತು. ಸಮ್ಮೇಳನದಲ್ಲಿ, ಕನ್ನಡದ ಇಬ್ಬರು ಮಹಾನ್ ದಿಗ್ಗಜರಾದ ಕುವೆಂಪು ಮತ್ತು ಶಿವರಾಮ ಕಾರಂತರನ್ನು ಒಂದೇ ವೇದಿಕೆಯ ಮೇಲೆ ಕಾಣುವುದು ತಮ್ಮ ಸೌಭಾಗ್ಯವೆಂದು ಜನ ಭಾವಿಸಿದರು.

ಈ ವರ್ಷದ ಸಮ್ಮೇಳನದ ಬಗೆಗೆ ಉಂಟಾದ ವಿವಾದ ಮತ್ತು ಅದನ್ನು ಬಗೆಹರಿಸಿದ ರೀತಿ ಎರಡೂ ಬೇರೆಯಾಗಿಯೆ ಇವೆ. ಈ ಬಾರಿ ವಿವಾದ ಉಂಟಾದುದು ಸಮ್ಮೇಳನದ ಉದ್ಘಾಟನೆಗೆ ಮುಖ್ಯ ಅತಿಥಿಗಳಾಗಿ, ಮಾಹಿತಿ ತಂತ್ರಜ್ಞಾನ ಸಂಸ್ಥೆ 'ಇನ್‌ಫೋಸಿಸ್'ನ ಸ್ಥಾಪಕರಾದ ಎನ್. ಆರ್. ನಾರಾಯಣಮೂರ್ತಿಯವರನ್ನು ಆಹ್ವಾನಿಸುವ ಮೂಲಕ. ಇದು ಕನ್ನಡ ಸಾಹಿತ್ಯ ಸಮ್ಮೇಳನವಲ್ಲ; ಆದ್ದರಿಂದ ಪ್ರಸಿದ್ಧ ಸಾಹಿತಿಗಳನ್ನಾಗಲಿ, ಕನ್ನಡ ವಿದ್ವಾಂಸರನ್ನಾಗಲಿ ಮುಖ್ಯ ಅತಿಥಿಗಳಾಗಿಸಬೇಕೆಂದು ಯಾರೂ ಹಟ ಮಾಡುವುದಿಲ್ಲ, ನಿಜ. ಆದರೆ ಇದೂ (ವಿಶ್ವ) ಕನ್ನಡ ಸಮ್ಮೇಳನ. ಆದ್ದರಿಂದ ಉದ್ಘಾಟನಾ ಸಮಾರಂಭದ ಮುಖ್ಯ ಅತಿಥಿಗಳು ಕನ್ನಡ ನಾಡು ನುಡಿಗಳ ಬಗೆಗೆ ಬದ್ಧತೆಯುಳ್ಳವರಾಗಬೇಕಾದದ್ದು ಅನಿವಾರ್ಯವಲ್ಲವೆ? ಮುಖ್ಯಮಂತ್ರಿ ಯಡ್ಯೂರಪ್ಪನವರು ಯಾರ ಭಿನ್ನಾಭಿಪ್ರಾಯಕ್ಕೂ ಗೌರವ ಕೊಡಲಿಲ್ಲ. 'ಎ ಬೆಟರ್ ಇಂಡಿಯಾ ಎ ಬೆಟರ್ ವರ್ಲ್ಡ್' – ಎಂಬುದು ನಾರಾಯಣಮೂರ್ತಿಯವರು ಇಂಗ್ಲಿಷ್‌ನಲ್ಲಿ ಬರೆದ ಪುಸ್ತಕದ ಹೆಸರು. ಕರ್ನಾಟಕವನ್ನು ಗುಜರಾತ್ ಮಾದರಿಯ 'ಎ ಬೆಟರ್ ಕರ್ನಾಟಕ'ವಾಗಿಸುವುದಾಗಿ ಕಳೆದ ಮೂರು ವರ್ಷಗಳಿಂದ ಎಡೆಬಿಡದೆ ಘೋಷಿಸುತ್ತಿರುವ ಮುಖ್ಯಮಂತ್ರಿ ಯಡ್ಯೂರಪ್ಪನವರಿಗೆ, ಸಮ್ಮೇಳನದ ಉದ್ಘಾಟನೆಗೆ ಮಾನ್ಯ ನಾರಾಯಣಮೂರ್ತಿಯವರೇ ಸೂಕ್ತ ವ್ಯಕ್ತಿ ಎಂದು ಮನದಟ್ಟಾಗಿರಬಹುದು!

ಶ್ರೀ ನಾರಾಯಣಮೂರ್ತಿಯವರು ಸಾಮಾನ್ಯ ಮಧ್ಯಮವರ್ಗದ ಕುಟುಂಬವೊಂದರಲ್ಲಿ ಹುಟ್ಟಿ, ಕರ್ನಾಟಕದ ಇಂಜಿನಿಯರಿಂಗ್ ಕಾಲೇಜುಗಳಲ್ಲೆ ಕಲಿತು, ಮುಂದೆ ತಮ್ಮ ಮತ್ತು ಕೆಲವು ಗೆಳೆಯರ ಸ್ವಸಾಮರ್ಥ್ಯದಿಂದ 'ಇನ್‌ಫೋಸಿಸ್ ಟೆಕ್ನಾಲಜೀಸ್' – ಎಂಬ ಮಾಹಿತಿ ತಂತ್ರಜ್ಞಾನ ಸಂಸ್ಥೆಯನ್ನು ಸ್ಥಾಪಿಸಿ ಹಲವು ವರ್ಷಗಳ ಕಾಲ ಅದರ ಅಧ್ಯಕ್ಷರಾಗಿದ್ದು ಸಂಸ್ಥೆಯನ್ನು ಮುನ್ನಡೆಸಿದವರು. ಹೀಗಾಗಿ ಉದ್ಯೋಗಾಪೇಕ್ಷಿಗಳಿಗೆ ಮಾತ್ರವಲ್ಲದೆ ಸ್ವಂತ ಉದ್ದಿಮೆ ಸ್ಥಾಪಿಸಬೇಕೆಂಬ ಮಹತ್ವಾಕಾಂಕ್ಷೆಯ ಕನ್ನಡ ಜಾಣ ಜಾಣೆಯರಿಗೂ ಆದರ್ಶಮೂರ್ತಿಯಾದವರು, ನಿಜ. ಆದರೆ ಇದೇ ಶ್ರೀ ನಾರಾಯಣಮೂರ್ತಿಯವರು ಹಲವು ಸಂದರ್ಭಗಳಲ್ಲಿ ಕನ್ನಡನಾಡು, ನುಡಿಗಳ ಬಗೆಗೆ ತೋರಿದ ಅಲಕ್ಷ್ಯವು ಪ್ರಜ್ಞಾವಂತರ ಅಸಮಾಧಾನಕ್ಕೂ ಕಾರಣವಾಗಿದೆ. ಬೆಂಗಳೂರನ್ನು ಕೇಂದ್ರಾಡಳಿತ ಪ್ರದೇಶವಾಗಿಸಬೇಕೆಂಬ ಸಲಹೆ; ಮಕ್ಕಳಿಗೆ ಪ್ರಾಥಮಿಕ ಹಂತದಿಂದಲೂ ವಿಷಯಗಳನ್ನು ಇಂಗ್ಲಿಷ್ ಮಾಧ್ಯಮದ ಮೂಲಕವೆ ಬೋಧಿಸಬೇಕೆಂಬ ಸಲಹೆ ಇವುಗಳಲ್ಲಿ ಕೆಲವು. ಬೆಂಗಳೂರಿನಲ್ಲಿರುವ 'ಇನ್‌ಫೋಸಿಸ್' ಸೇರಿದಂತೆ ಯಾವುದೇ 'ಸಾಫ್ಟ್‌ವೇರ್' ಕಂಪನಿಯಲ್ಲಿ ಕನ್ನಡಕ್ಕೆ ಸಂಬಂಧಿಸಿದ ಚಟುವಟಿಕೆಗಳು ನಡೆಯುವಂತೆ ತೋರುವುದಿಲ್ಲ.




ಇಷ್ಟಾದಮೇಲೆ ಉದ್ಘಾಟನಾ ಸಮಾರಂಭದ ಸುಮಾರು ೧೦-೧೨ ನಿಮಿಷಗಳ ತಮ್ಮ ಭಾಷಣದಲ್ಲಿ ಮಾನ್ಯ ನಾರಾಯಣಮೂರ್ತಿಯವರು ಹೇಳಿದ್ದೇನು? ದೇಶದ ಯುವಜನರೇ ತಮ್ಮ ಆರಾಧಕರೆಂಬುದನ್ನು ಅರಿತಿರುವ ನಾರಾಯಣಮೂರ್ತಿಯವರು, ತಮ್ಮನ್ನು ತಾವು ಅಸ್ತಮಿಸುತ್ತಿರುವ ಸೂರ್ಯನಿಗೆ ಹೋಲಿಸಿಕೊಂಡು, ಯುವಕರನ್ನುದ್ದೇಶಿಸಿ, "ನೀವೇ ನಮ್ಮ ದೇಶದ ಸಂಪತ್ತು, ಭವಿಷ್ಯ ಹಾಗೂ ಉದಯಿಸುತ್ತಿರುವ ಸೂರ್ಯ... ನೀವು ಹಣದ ಹಿಂದೆ ಓಡಿದರೆ (ಅಂದರೆ ಹೆಚ್ಚು ಸಂಬಳದ ನೌಕರಿ ದೊರೆಯುವುದೆಂಬ ಆಸೆಯಿಂದ ಅಮೆರಿಕ, ಇಂಗ್ಲೆಂಡ್, ಆಸ್ಟ್ರೇಲಿಯಾಗಳಿಗೆ ಹೋದರೆ – ಎಂಬ ಅಭಿಪ್ರಾಯವೇ?) ಹಣ ನಿಮ್ಮಿಂದ ಓಡಿಹೋಗುತ್ತದೆ. ಮೊದಲು ನೀವು ಕೆಲಸವನ್ನು ಪ್ರೀತಿಸಬೇಕು; ಮುನ್ನುಗ್ಗಿ ಯಶಸ್ಸನ್ನು ಸಾಧಿಸಬೇಕು. ...ದೇಶದ ಬಡತನ ನೀಗಬೇಕಾದರೆ, ಉದ್ಯೋಗಾವಕಾಶಗಳು ಹೆಚ್ಚಬೇಕು; ಅದು ನಮ್ಮೆಲ್ಲರ ಆದ್ಯತೆಯಾಗಬೇಕು. ನೀವೆ ಸ್ವಂತ ಉದ್ದಿಮೆದಾರರಾದರೆ ಅನೇಕ ಹೊಸ ಕೆಲಸದ ಅವಕಾಶಗಳು ತಾವಾಗಿಯೇ ಬಾಯಿ ತೆರೆಯುತ್ತವೆ" – ಎಂದು ದೇಶದ ಬಡತನವನ್ನು ನಿವಾರಿಸುವ ಉಪಾಯವನ್ನು ಸೂಚಿಸಿದರು. (ಆದರೆ ಮಾನ್ಯ ನಾರಾಯಣಮೂರ್ತಿಯವರಂತೆ 'ಇನ್‌ಫೋಸಿಸ್'ನಂಥ ಸ್ವಂತ ಉದ್ದಿಮೆ ಸ್ಥಾಪಿಸುವುದು ಈ ದೇಶದ ಎಷ್ಟು ಜನ ಯುವಕರಿಗೆ ಸಾಧ್ಯವಾದೀತು?)

ಕರ್ನಾಟಕದ ಹಳ್ಳಿಗಳ ಪರಿಸ್ಥಿತಿ ಹೇಗಿದೆ ಎಂಬುದನ್ನು ಮಾನ್ಯ ನಾರಾಯಣಮೂರ್ತಿಯವರು ತಮ್ಮದೇ ಶೈಲಿಯಲ್ಲಿ ವಿವರಿಸಿದರು. (ಸಮ್ಮೇಳನದಲ್ಲಿ ಸೇರಿದ್ದ ಬಹಳಷ್ಟು ಜನರಿಗೆ ಇದು ದಿನನಿತ್ಯವೂ ಕಾಣುತ್ತಿರುವ ಪರಿಸ್ಥಿತಿ). ತಮ್ಮ 'ಇನ್‌ಫೋಸಿಸ್' ಸಂಸ್ಥೆಯು ಶಾಲೆಗಳಿಗೆ ಗ್ರಂಥಾಲಯ, ವೈದ್ಯಕೀಯ ನೆರವು, ಧರ್ಮಶಾಲೆಯ ಕಟ್ಟಡ ನಿರ್ಮಾಣ (?), ನಶಿಸುತ್ತಿರುವ ಕಲೆಗಳಿಗೆ ಪುನರ್ಜೀವನ – ಹೀಗೆ ಹಲವು ರೀತಿಯಲ್ಲಿ ಸೇವೆ ಸಲ್ಲಿಸುತ್ತಿರುವುದನ್ನು ಉಲ್ಲೇಖಿಸಿದರು. ('ಇನ್‌ಫೋಸಿಸ್' ಮಾತ್ರವಲ್ಲದೆ ಇತರ ಕೆಲವು ಸಾಫ್ಟ್‌ವೇರ್ ಕಂಪನಿಗಳೂ – ಉದಾಹರಣೆಗೆ 'ವಿಪ್ರೋ' – ಈ ಬಗೆಯ 'ಸಾಮಾಜಿಕ ಸೇವೆ' ಸಲ್ಲಿಸುತ್ತಿವೆ. ವಿಪ್ರೋದ ಅಜೀಂ ಪ್ರೇಮ್‌ಜಿ ಹೆಸರಿನಲ್ಲಿ ವಿಶ್ವವಿದ್ಯಾಲಯವೊಂದು ಸ್ಥಾಪನೆಯಾಗಿರುವುದು, ಅಲ್ಲಿ ಪ್ರಾಥಮಿಕ ಶಾಲಾ ಅಧ್ಯಾಪಕರಿಗೆ ತರಪೇತಿ ನೀಡುತ್ತಿರುವುದು ಮುಖ್ಯವಾಗಿ ಗಮನಿಸಬೇಕಾದ ಸಂಗತಿ.)

ತಮ್ಮನ್ನು ವಿಶ್ವ ಕನ್ನಡ ಸಮ್ಮೇಳನದ ಉದ್ಘಾಟನೆಗೆ ಆಹ್ವಾನಿಸಿದ ವಿಚಾರದಲ್ಲಿ ಹಲವು ಕನ್ನಡಾಭಿಮಾನಿಗಳು ಅಸಮಾಧಾನಗೊಂಡಿರುವುದನ್ನು ಶ್ರೀಯುತರು

ಗಮನಿಸಿರಬೇಕು. ಆದ್ದರಿಂದ ತಾವೂ 'ಕನ್ನಡಿಗ'ರೆಂಬುದನ್ನು ಸಮರ್ಥಿಸಲು ಮಾನ್ಯ ನಾರಾಯಣಮೂರ್ತಿಯವರು ಮರೆಯಲಿಲ್ಲ ''ನಾನು ದಕ್ಷಿಣ ಕರ್ನಾಟಕದವನಾದರೂ, (ನಾಗವಾರ ರಾಮರಾಯ ನಾರಾಯಣಮೂರ್ತಿಯವರು ಬಾಲ್ಯದ ವಿದ್ಯಾಭ್ಯಾಸ ಮಾಡಿದ್ದು ಮಂಡ್ಯ, ತುಮಕೂರು, ಮಧುಗಿರಿಗಳಲ್ಲಿ ಎಂದು ಓದಿದ ನೆನಪು. ಇದು ಹಿಂದಿನ ಮೈಸೂರು ಪ್ರಾಂತ್ಯ. ವಾಸ್ತವವಾಗಿ ದಕ್ಷಿಣ ಕರ್ನಾಟಕವೆನ್ನುವುದು ಉಡುಪಿ, ಮಂಗಳೂರು ಮೊದಲಾದ ಕರಾವಳಿ ಪ್ರದೇಶವನ್ನು.) ಉತ್ತರ ಕರ್ನಾಟಕದ ಅಳಿಯನಾಗಿದ್ದೇನೆ. (ನಾರಾಯಣ ಮೂರ್ತಿಯವರ ಪತ್ನಿ ಶ್ರೀಮತಿ ಸುಧಾಮೂರ್ತಿ – ಹುಬ್ಬಳ್ಳಿಯವರು). ತಮ್ಮ ವ್ಯಾವಹಾರಿಕ ಭಾಷೆ ಇಂಗ್ಲಿಷ್ ಆದರೂ, ''ನಾನು ನನ್ನ ಭಾವನೆಗಳನ್ನು ಇಂದಿಗೂ ಕನ್ನಡದಲ್ಲಿಯೆ ಹೇಳಬಯಸುತ್ತೇನೆ; ಜಗತ್ತಿನ ಯಾವುದೇ ಮೂಲೆಯಲ್ಲಿರಲಿ, ಎಂಥ ಸಿರಿವಂತರ ಅತಿಥಿ ಸತ್ಕಾರವಿರಲಿ, ನನಗೆ ನಮ್ಮ ಬೆಂಗಳೂರಿಗೆ ಬಂದು ನಮ್ಮ ಕಾಫಿ ಕುಡಿದರೆ ನೆಮ್ಮದಿ'' ಎಂದರು. ಆದಿಕವಿ ಪಂಪನ ಮಾತನ್ನು ಸ್ವಲ್ಪ ಬದಲಾಯಿಸಿ, ಮರುಜನ್ಮದಲ್ಲಿ, ''...ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ಕರ್ನಾಟ ದೇಶದೊಳ್...'' ಎಂದು ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸಿ, ಕನ್ನಡಕ್ಕಾಗಿ ಕೈ ಎತ್ತಿ ಜೈಕಾರ ಘೋಷಿಸಿದರು.

ನಾರಾಯಣಮೂರ್ತಿಯವರ ಈ ಭಾಷಣದ ಬಗೆಗೆ ತಕರಾರು ಎತ್ತುವಂತಹುದೇನೂ ಇಲ್ಲ. ಆದರೆ 'ವಿಶ್ವ ಕನ್ನಡ ಸಮ್ಮೇಳನ'ದಂತಹ ಮಹಾನ್ ಸಮಾವೇಶದ ಉದ್ಘಾಟನಾ ಭಾಷಣದಲ್ಲಿ ಕನ್ನಡ ನಾಡು ನುಡಿಗಳ ಬದ್ಧತೆಯ ಬಗೆಗೆ ಹೆಚ್ಚಿನ ಕಾಳಜಿಯನ್ನು ನಿರೀಕ್ಷಿಸಬಹುದಲ್ಲವೆ? 'ಕನ್ನಡಿಗ'ನಾಗಿರುವುದು ಎಂದರೆ ಮನೆಯಲ್ಲಿ ಕನ್ನಡವನ್ನೇ ಮಾತಾಡುವುದು, ಬೆಂಗಳೂರಿನ ಕಾಫಿಯನ್ನು ಪ್ರೀತಿಸುವುದು – ಇಷ್ಟು ಸಾಕೆ? ಭಾವನೆಗಳನ್ನು ಕನ್ನಡದಲ್ಲಿ ಹೇಳಿಕೊಂಡಹಾಗೆ ಬೌದ್ಧಿಕ ಸಾಮರ್ಥ್ಯವನ್ನು, ವಿಚಾರಗಳನ್ನು ಅಭಿಪ್ರಾಯಗಳನ್ನು ಕನ್ನಡದಲ್ಲಿ ವ್ಯಕ್ತ ಪಡಿಸುವುದು ಅವಶ್ಯವಲ್ಲವೆ? ಕನ್ನಡ ಪುಸ್ತಕಗಳನ್ನು, ಪತ್ರಿಕೆಗಳನ್ನು ಓದುವುದು ಕೂಡ 'ಕನ್ನಡತನ'ದ ಒಂದು ಸೂಚಕವಲ್ಲವೆ? ಕನ್ನಡ ನಾಡು, ನುಡಿಗಳೂ, ಕನ್ನಡದ ಮಕ್ಕಳ ಶಿಕ್ಷಣ – ಇವೆಲ್ಲ ಎದುರಿಸುತ್ತಿರುವ ಸವಾಲುಗಳನ್ನು ಕುರಿತ ಗಂಭೀರ ವಿಚಾರಗಳ ಪ್ರಸ್ತಾಪವೂ ಅಗತ್ಯವಾಗಿತ್ತಲ್ಲವೆ?

ನಾರಾಯಣಮೂರ್ತಿಯವರು 'ಇನ್‌ಫೋಸಿಸ್' ಟೆಕ್ನಾಲಜೀಸ್' ಸ್ಥಾಪನೆಯ ಮೂಲಕ, ಮಾಹಿತಿ ತಂತ್ರಜ್ಞಾನ ಕ್ಷೇತ್ರಕ್ಕೆ ಅಪಾರ ಕೊಡುಗೆ ಸಲ್ಲಿಸಿ ಜಾಗತಿಕ ಮಟ್ಟದಲ್ಲಿ ಹೆಸರು ಮಾಡಿದ್ದಾರೆ. ಇತ್ತ, ಕನ್ನಡದಲ್ಲಿ ಅಲ್ಪಸ್ವಲ್ಪ ಮಟ್ಟಿಗೆ ಗಣಕಗಳ ಬಳಕೆಯಾಗುತ್ತಿದ್ದರೂ, ಅದರ ಬಳಕೆಯು ಎಲ್ಲ ಕ್ಷೇತ್ರಗಳಲ್ಲಿ ವ್ಯಾಪಕವಾಗಬೇಕಾದರೆ ಇನ್ನೂ ಸಾಕಷ್ಟು ದೂರ ಸಾಗಬೇಕಿದೆ. ವಿವಿಧ ಕ್ಷೇತ್ರಗಳಿಗೆ ಅಗತ್ಯವಾದ ತಂತ್ರಾಂಶಗಳು ಸಿದ್ಧವಾಗಬೇಕಿದೆ. ಈ ದಿಕ್ಕಿನಲ್ಲಿ ಕೆಲವು ಸ್ವತಂತ್ರ ಪರಿಷತ್ತುಗಳೂ ಸರ್ಕಾರವೂ ಮಾಡುತ್ತಿರುವ ಪ್ರಯತ್ನಗಳಿಗೆ ನಾರಾಯಣಮೂರ್ತಿಯಂಥವರ ಮಾರ್ಗದರ್ಶನದ ಅಗತ್ಯವಿದೆ. ಅಲ್ಲದೆ ದೊಡ್ಡ ಪ್ರಮಾಣದ ಬಂಡವಾಳ ಹೂಡಿಕೆಯನ್ನು ನಿರೀಕ್ಷಿಸುವ ಈ ಕೆಲಸವನ್ನು – ಪರಿಮಿತವಾದ ಮಾರುಕಟ್ಟೆಯನ್ನುಳ್ಳ ಕನ್ನಡದಂತಹ ಭಾಷೆಗೆ ಖಾಸಗಿ ಕಂಪನಿಗಳಾಗಲಿ, ಸರ್ಕಾರವಾಗಲಿ ಏಕಾಂಗಿಯಾಗಿ ನಿರ್ವಹಿಸುವುದು ಕಷ್ಟವೆಂದು ತೋರುತ್ತದೆ. ಸರ್ಕಾರ ಮತ್ತು ಖಾಸಗಿ ಕಂಪನಿಗಳು ಸಹಯೋಗದಲ್ಲಿ ಮಾಡಬೇಕಾದ ಕೆಲಸ ಇದು. ವಿಶ್ವ ಕನ್ನಡ ಸಮ್ಮೇಳನದ ಉದ್ಘಾಟನಾ ಭಾಷಣದಲ್ಲಿ ಕನ್ನಡಿಗರಾದ ಮಾನ್ಯ ಎನ್. ಆರ್. ನಾರಾಯಣಮೂರ್ತಿಯವರಿಂದ ಈ ವಿಚಾರದ ಯಾವ ಪ್ರಸ್ತಾಪವಾಗಲಿ, ಭರವಸೆಯಾಗಲಿ ದೊರೆಯದಿದ್ದುದು ಒಂದು ದೊಡ್ಡ ಕೊರತೆ ಎನಿಸುತ್ತದೆ. ಮುಖ್ಯಮಂತ್ರಿ ಯಡ್ಯೂರಪ್ಪನವರು ಇಂಥ ಭರವಸೆಗಳನ್ನೇನಾದರೂ ನಿರೀಕ್ಷಿಸಿದ್ದರೆ? ಹೇಳುವುದು ಕಷ್ಟ.

ಉದ್ಘಾಟನಾ ಸಮಾರಂಭದಲ್ಲಿ 'ನೂರು ಮೇರು ಕೃತಿಗಳನ್ನು' ಬಿಡುಗಡೆ ಮಾಡಿದ ರಾಷ್ಟ್ರಕವಿ ಡಾ|| ಜಿ. ಎಸ್. ಶಿವರುದ್ರಪ್ಪನವರು ಒಂದಾದ ಮೇಲೊಂದರಂತೆ ಬಂದ ಈವರೆಗಿನ ಎಲ್ಲ ಸರ್ಕಾರಗಳು ಕನ್ನಡ ನಾಡು, ನುಡಿಗಳ ಹಿತರಕ್ಷಣೆ ಮಾಡುವುದರಲ್ಲಿ ಹೇಗೆ ವಿಫಲವಾಗಿವೆಯೆಂಬುದನ್ನು ತೆರೆದಿಟ್ಟರು. ವಿಶೇಷತಃ ಬೆಂಗಳೂರು, ಮಂಗಳೂರಿನಂತಹ ದೊಡ್ಡ ನಗರಗಳಲ್ಲಿ ಕನ್ನಡವು ಕಣ್ಮರೆಯಾಗುತ್ತಿರುವ ಬಗೆಗೆ ಕಳವಳ ವ್ಯಕ್ತಪಡಿಸಿದರು. ಶಿಕ್ಷಣ ಮತ್ತು ಸಾರ್ವತ್ರಿಕ ವ್ಯವಹಾರದಲ್ಲಿ ಕನ್ನಡವನ್ನು ಜಾರಿಗೆ ತರಲು ಹಿಂಜರಿಯುತ್ತಿರುವ ಸರ್ಕಾರವನ್ನು ಟೀಕಿಸಿದರು. ಅಲ್ಲದೆ, ಡಾ|| ಜಿ.ಎಸ್.ಎಸ್. ಅವರು ರಾಜ್ಯದಲ್ಲಿ ವ್ಯಾಪಕವಾಗುತ್ತಿರುವ ಭ್ರಷ್ಟಾಚಾರ, ಕೋಮುವಾದ, ಮುಂದಾಲೋಚನೆಯಿಲ್ಲದೆ ಕೈಗಾರಿಕೀಕರಣದಿಂದ ನೈಸರ್ಗಿಕ ಪರಿಸರ, ದೇಶಭಾಷೆ, ದೇಶೀಯ ಸಂಸ್ಕೃತಿಗಳ ಅವನತಿಯಾಗುತ್ತಿರುವುದನ್ನು ಪ್ರಸ್ತಾಪಿಸಿದರು.

'ಪುನರಾವಲೋಕನ ಸಂದರ್ಭ' ಎಂಬ ಗ್ರಂಥವನ್ನು ಬಿಡುಗಡೆ ಮಾಡಿದ ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ|| ಯು. ಆರ್. ಅನಂತಮೂರ್ತಿಯವರು ನಮ್ಮ ರಾಜ್ಯದಲ್ಲಿ ಆಗುತ್ತಿರುವಂತೆ ಜರ್ಮನಿ ಅಥವಾ ಫ್ರಾನ್ಸ್ ದೇಶದಲ್ಲಿ ಸ್ಥಳೀಯ ಭಾಷೆಯನ್ನು ಅಲಕ್ಷಿಸಿ ಬಹುರಾಷ್ಟ್ರೀಯ ಕಂಪನಿಗಳು ಬೆಳೆಯಬಲ್ಲವೆ? – ಎಂದು ಪ್ರಶ್ನಿಸಿದರು. ಕನ್ನಡವನ್ನು ಪ್ರಾಥಮಿಕ ಹಂತದಲ್ಲಾದರೂ ಶಿಕ್ಷಣ ಮಾಧ್ಯಮವಾಗಿಸುವುದರ ವೈಫಲ್ಯದ ಬಗೆಗೆ ತೀವ್ರ ವಿಷಾದ ವ್ಯಕ್ತಪಡಿಸಿದರು. ಇಂಗ್ಲಿಷ್ ಭಾಷೆಯು ಕನ್ನಡದ ಸಮೃದ್ಧಿಗೆ (ಗೊಬ್ಬರದಂತೆ) ಪೋಷಕಾಂಶವಾಗಬೇಕೇ ಹೊರತು ಕನ್ನಡವನ್ನೇ ನಾಶಗೊಳಿಸಬಾರದೆಂದರು. ಇಂಗ್ಲಿಷ್ ಕಲಿತ ಶ್ರೀಮಂತರು ಮತ್ತು ಕನ್ನಡವನ್ನು ಕಲಿತ ಬಡವರು – ಎಂಬಂತೆ ಜನರನ್ನು ವಿಭಜಿಸುವುದರಲ್ಲಿ ಉದ್ಯುಕ್ತವಾಗಿರುವ, ಸಂವಿಧಾನ ವಿರೋಧಿ ಬೆಳವಣಿಗೆಯನ್ನು ಖಂಡಿಸಿದರು.

ವೇದಿಕೆಯಲ್ಲಿ ಉಪಸ್ಥಿತರಿದ್ದವರ ಪೈಕಿ ವಿಶೇಷವಾಗಿ ಪ್ರೇಕ್ಷಕರ ಗಮನ ಸೆಳೆದವರಲ್ಲಿ ಹಿಂದಿ ಚಿತ್ರತಾರೆ, ಮಾಜಿ ವಿಶ್ವಸುಂದರಿ ಐಶ್ವರ್ಯ ರೈ ಬಚ್ಚನ್ ಪ್ರಮುಖರು. ಸಭೆಗೆ ಸ್ವಲ್ಪ ತಡವಾಗಿ ಆಗಮಿಸಿದ ವಿಶ್ವಸುಂದರಿಯನ್ನು ಎಲ್ಲರೂ ಸಂಭ್ರಮದಿಂದ ಸ್ವಾಗತಿಸಿದರು. ವೇದಿಕೆಯ ಮೇಲಿದ್ದವರು ಈಕೆಯ ಉಪಸ್ಥಿತಿಯನ್ನು ವಿಶೇಷವೆನ್ನುವಂತೆ ಪರಿಗಣಿಸಿದರು. ಲಂಡನ್‌ನಿಂದ ಆಗಮಿಸಿದ್ದ ನೀರಜ್ ಪಾಟೀಲರಂತೂ ''ನಾನು ಲಂಡನ್‌ನಿಂದ ಬಂದಿರುವುದು ವಿಶ್ವಸುಂದರಿಯನ್ನು ನೋಡುವುದಕ್ಕೆ'' – ಎಂದು ಹೇಳಿ ಜನರ ನಗೆಯುಕ್ಕಿಸಿದರು. ಐಶ್ವರ್ಯ ರೈ ಏನು ಭಾಷಣ ಮಾಡಬಹುದು – ಎಂದು ಜನ ನಿರೀಕ್ಷಿಸುತ್ತಿರುವಾಗಲೆ ಆಕೆ, ''ಪ್ರೀತಿ, ಅಭಿಮಾನದಿಂದ ಇಲ್ಲಿ ನಡೆಯುತ್ತಿರುವ ವಿಶ್ವ ಕನ್ನಡ ಸಮ್ಮೇಳನಕ್ಕೆ ನನ್ನನ್ನು ಆಹ್ವಾನಿಸಿ ಗೌರವಿಸಿದ್ದಕ್ಕೆ ಕೃತಜ್ಞತೆಗಳು'' – ಎಂಬ ಒಂದೇ ಮಾತನ್ನು – ಪ್ರಾಯಶಃ ಹಿಂದಿ ಲಿಪಿಗಳಲ್ಲಿ ಬರೆದುಕೊಂಡು ಬಂದದ್ದನ್ನು – ಓದಿ ಹೇಳಿದರು. ತಮ್ಮ ಮಾತು ಕನ್ನಡಿಗರಿಗೆ ಅರ್ಥವಾಯಿತೋ ಇಲ್ಲವೋ ಎಂಬಂತೆ, ಮತ್ತೊಮ್ಮೆ ಅದನ್ನೇ ಹಿಂದಿಯಲ್ಲಿ ಹೇಳಿದರು. ಮುಗಿಯಿತು ಆಕೆಯ ಭಾಷಣ. ಕ್ರೀಡಾಂಗಣದಿಂದ ಜನ ಮನೆಗಳಿಗೆ ಮರಳಲು ಆರಂಭಿಸಿದ್ದು ನೂಕುನುಗ್ಗಲಿಗೆ ಕಾರಣವಾಯಿತೆಂದು ಪತ್ರಿಕೆಗಳು ವರದಿ ಮಾಡಿವೆ.

ಶ್ರೀಮತಿ ಐಶ್ವರ್ಯ ರೈ ಬಚ್ಚನ್, ಕರ್ನಾಟಕದ ಭಾಗವಾಗಿರುವ ತುಳುನಾಡಿನ ಸುಂದರಿ ಎಂಬುದು ನಿಜ (ಅಂದಹಾಗೆ ಈಕೆಗೆ ಮೊದಲ ಬಾರಿಗೆ ವಿಶ್ವಸುಂದರಿ ಪಟ್ಟವು ದೊರೆತಾಗ ಈಕೆಯ ಹೆಸರನ್ನು 'ಐಶ್ವರ್ಯ ರೇ' ಎಂದು ಓದಿಕೊಂಡ ಬಂಗಾಳಿಗಳು ಈಕೆ ತಮ್ಮವಳೇ ಎಂದು ಹೇಳಿಕೊಳ್ಳುತ್ತಿದ್ದರಂತೆ!). ತುಳು ಮಾತೃಭಾಷೆಯಾಗಿರುವ ಈಕೆ ತಾಯ್ನಾಡಿನೊಡನೆ ಏನು ಸಂಬಂಧವಿಟ್ಟು ಕೊಂಡಿದ್ದಾರೆ, ಕನ್ನಡಕ್ಕೆ ಈಕೆಯ ಕಾಣಿಕೆ, ಮಹತ್ವಗಳೇನು ಎಂಬುದೆಲ್ಲ ಈಕೆಯನ್ನು ವಿಶೇಷವಾಗಿ ಆಹ್ವಾನಿಸಿದವರಿಗೇ ಗೊತ್ತಿರಬಹುದು.

ಸಮ್ಮೇಳನದ ಎರಡನೆಯ ದಿನ 'ಇನ್‌ಸ್ಟಿಟ್ಯೂಟ್ ಆಫ್ ಇಂಜನಿಯರ್ಸ್' ಸಭಾಂಗಣದಲ್ಲಿ ಡಾ|| ಕೆ. ಚಿದಾನಂದಗೌಡರ ಅಧ್ಯಕ್ಷತೆಯಲ್ಲಿ ನಡೆದ 'ಜ್ಞಾನ ವಿಜ್ಞಾನ ತಂತ್ರಜ್ಞಾನ ಕರ್ನಾಟಕ' ಗೋಷ್ಠಿಯು ಹಲವು ದೃಷ್ಟಿಗಳಿಂದ ಮುಖ್ಯವಾದುದು. ಮಂಗಳೂರು ವಿಶ್ವವಿದ್ಯಾನಿಲಯದ ನಿವೃತ್ತ ಉಪಕುಲಪತಿಗಳೂ, ದೀರ್ಘಕಾಲ ವಿಜ್ಞಾನ ಬೋಧಕರೂ ಆದ ಪ್ರೊ|| ಎಂ. ಎ. ಸವದತ್ತಿಯವರು ತಮ್ಮ ಉದ್ಘಾಟನಾ ಭಾಷಣದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಕ್ಷೇತ್ರದಲ್ಲಿ ಕರ್ನಾಟಕವು ಗಣನೀಯ ಪ್ರಗತಿಯನ್ನು ಸಾಧಿಸಿದ್ದರೂ ಈಚಿನ ದಿನಗಳಲ್ಲಿ ವಿಜ್ಞಾನದ ಅಧ್ಯಯನದಲ್ಲಿ ಯುವಜನರ ಆಸಕ್ತಿಯು ಕ್ಷೀಣಿಸುತ್ತಿದೆಯೆಂದು ತಿಳಿಸಿದರು. ಸಭೆಯಲ್ಲಿ ಜನರ ಹಾಜರಾತಿ ಅತ್ಯಂತ ಕಡಮೆಯಿರುವುದನ್ನು ಗಮನಿಸಿ, ಪ್ರಾಯಶಃ ಕನ್ನಡದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಬಗೆಗೆ ಸಾಕಷ್ಟು ಪಠ್ಯ ಗ್ರಂಥಗಳು ದೊರೆಯದಿರುವುದೇ ಜನರ

**ಪಕ್ಷಿ**

ಕೆಲವರು ಪ್ರಾಣಿಪ್ರಿಯರಾದರೆ,
ಎಲ್ಲರೂ ಪಕ್ಷಿಪ್ರಿಯರು :
ಪ್ರಾಣಪಕ್ಷಿ
ಹಾರಿಹೋಗಲೆಂದು
ಯಾರು ತಾನೆ ಬಯಸುತ್ತಾರೆ?

ಸಿ.ಪಿ.ಕೆ.

ಈ ನಿರಾಸಕ್ತಿಗೆ ಕಾರಣವಾಗಿರಬೇಕೆಂದು (ತಮ್ಮಷ್ಟಕ್ಕೆ) ಸಮಾಧಾನ ತಂದುಕೊಂಡರು.

ಜರ್ಮನಿ, ಫ್ರಾನ್ಸ್‌ಗಳಂಥ ಚಿಕ್ಕಪುಟ್ಟ ದೇಶಗಳು ಕೂಡ ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಅಪಾರ ಪ್ರಗತಿ ಸಾಧಿಸಲು, ಆ ದೇಶಗಳು ಈ ವಿಷಯಗಳಿಗೆ ಸಂಬಂಧಿಸಿದ ಪುಸ್ತಕಗಳು ಆಯಾ ದೇಶ ಭಾಷೆಯಲ್ಲೇ ದೊರೆಯುವಂತೆ ಮಾಡಿರುವುದೇ ಪ್ರಮುಖ ಕಾರಣವಾಗಿದೆಯೆಂದು ಡಾ॥ ಸವದತ್ತಿ ಪ್ರತಿಪಾದಿಸಿದರು. ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಮಿತಿಗೆ ಸ್ವತಃ ಮುಖ್ಯಮಂತ್ರಿಗಳೇ ಅಧ್ಯಕ್ಷರಾಗಿದ್ದರೂ ಸಹ, ಇದರಿಂದ ಹೆಚ್ಚಿನದನ್ನು ಸಾಧಿಸಲು ಆಗಿಲ್ಲವೆಂದು ಅವರು ಎತ್ತಿ ತೋರಿಸಿದರು. ವಿಜ್ಞಾನವು ದೇಶ ಭಾಷೆಗಳ ಮೂಲಕ ಪ್ರಸಾರವಾದ ಹೊರತು ಜನರಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಆಸಕ್ತಿ ಮೂಡುವುದು ಅಸಾಧ್ಯವೆಂದು ಡಾ॥ ಸವದತ್ತಿ ಸ್ಪಷ್ಟಪಡಿಸಿದರು.

ಇದೇ ದಿನ 'ಬೆಳವಡಿ ಮಲ್ಲಮ್ಮ ವೇದಿಕೆ'ಯಲ್ಲಿ ಡಾ॥ ಸ. ಶಿ. ಮರುಳಯ್ಯನವರ ಅಧ್ಯಕ್ಷತೆಯಲ್ಲಿ 'ಕನ್ನಡ ಭಾಷಾ ಬಳಕೆ' ಎಂಬ ವಿಚಾರಗೋಷ್ಠಿ ನಡೆಯಿತು. ಸಮ್ಮೇಳನದ ಉದ್ಘಾಟನಾ ಭಾಷಣ ಮಾಡಿದ ನಿವೃತ್ತ ಹಿರಿಯ ಐ.ಎ.ಎಸ್. ಅಧಿಕಾರಿಯೂ ವಿಶ್ವಸಂಸ್ಥೆಯಲ್ಲಿ ವಿಜ್ಞಾನ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ಪರ ಭಾರತದ ಪ್ರತಿನಿಧಿಯೂ ಆದ ಶ್ರೀ ಚಿರಂಜೀವಿ ಸಿಂಗ್ ಅವರು ತಕ್ಷಣದಲ್ಲಿ ಕೈತುಂಬ ಹಣ ಮತ್ತು ಉನ್ನತ ಜೀವನೋಪಾಯಗಳನ್ನು ಕಂಡುಕೊಳ್ಳುವ ಆಸೆಯು ಇಂದಿನ ಯುವಕರದ್ದಾಗಿದೆ. ಹೀಗಾಗಿ ಶಿಕ್ಷಣವು ಉತ್ತಮ ನೌಕರಿಗೆ ಅಗತ್ಯವಾದ ತಂತ್ರಜ್ಞಾನವನ್ನು ಪಡೆದುಕೊಳ್ಳುವುದಕ್ಕೆ ಸೀಮಿತವಾಗಿಬಿಡುತ್ತದೆ. ನಾವು ಜಾಗತಿಕ (ಗ್ಲೋಬೀಕೃತ) ಕಾರ್ಪೊರೇಟ್ ಸಂಸ್ಥೆಗಳಿಗೆ ಅಗತ್ಯವಾದ ಪದಾತಿಗಳನ್ನು ತಯಾರಿಸುತ್ತಿದ್ದೇವೆಯೆ ಹೊರತು ವಿಜ್ಞಾನಿಗಳನ್ನು, ಚಿಂತಕರನ್ನು, ತತ್ವಬದ್ಧರನ್ನು, ನವಭಾರತದ ಮುಂದಾಳುಗಳಾಗಬಲ್ಲವರನ್ನು ಸೃಷ್ಟಿಸುತ್ತಿಲ್ಲ. ಈ ಕಾರಣದಿಂದಾಗಿಯೆ ಕನ್ನಡದಂತಹ ಮಿತವ್ಯಾಪ್ತಿಯುಳ್ಳ ಭಾರತೀಯ ಭಾಷೆಗಳು ವಾಣಿಜ್ಯೋದ್ಯಮದ ಯಶಸ್ಸಿಗೆ ಪೂರಕವಲ್ಲವೆಂಬ ಭಾವನೆ ಬೇರೂರಿದೆ. ನಿಜವಾದ ಶಿಕ್ಷಣವೆಂದರೆ ಭವಿಷ್ಯದ ಸಾಧ್ಯತೆಗಳತ್ತ ಯುವಜನತೆಯ ಕಣ್ಣು ಮನಸ್ಸುಗಳನ್ನು ತೆರೆಸುವುದು; ಆದರೆ ಕೇವಲ ತರಬೇತಿಯು ಮನಶ್ಶಕ್ತಿಯನ್ನು ಕುಗ್ಗಿಸಿ ಪೂರ್ವನಿಶ್ಚಿತ ಕ್ರಮಗಳಲ್ಲಿ ಬಂಧಿಸುವುದು – ಎಂದು ವಿಶ್ಲೇಷಿಸಿದರು. ಸರ್ಕಾರ ಮತ್ತು ವಿದ್ಯಾಸಂಸ್ಥೆಗಳು ತಾವು ಸರಿಯಾದ ದಿಕ್ಕಿನಲ್ಲಿ ಸಾಗುತ್ತಿದ್ದೇವೆಯೆ ಎಂಬ ಬಗೆಗೆ ಆತ್ಮ ನಿರೀಕ್ಷಣೆ ಮಾಡಿಕೊಳ್ಳಬೇಕಾಗಿದೆಯೆಂದು ಸಲಹೆ ಮಾಡಿದರು.

ವಿದ್ಯುನ್ಮಾನ ಆಡಳಿತದ ಬಗ್ಗೆಯೂ ಪ್ರಸ್ತಾಪಿಸಿದ ಶ್ರೀ ಸಿಂಗ್ ಅವರು ಆಡಳಿತದಲ್ಲಿ ಪಾರದರ್ಶಕತೆ ಮತ್ತು ಜವಾಬ್ದಾರಿ ಹೆಚ್ಚಿದರೆ ಆಡಳಿತದಲ್ಲಿ ಜನತೆಯ ಪಾಲ್ಗೊಳ್ಳುವಿಕೆಯೂ ಹೆಚ್ಚುತ್ತದೆ ಎಂದರೆ, ಮತ್ತೊಬ್ಬ ಭಾಷಣಕಾರರು ಕಳೆದ ಎರಡು ದಶಕಗಳಲ್ಲಿ ಆಡಳಿತದಲ್ಲಿ ಪಾರದರ್ಶಕತೆ ಮತ್ತು ಜನರ ಭಾಗವಹಿಸುವಿಕೆಗಳು ಹೆಚ್ಚುವುದಕ್ಕೆ ಬದಲಾಗಿ ಕ್ಷೀಣಿಸುತ್ತಿರುವುದನ್ನು ಸಮೀಕ್ಷಿಸಿ ಇದು ಗಂಭೀರವಾದ ವಿಷಯವೆಂದು ಒತ್ತಿ ಹೇಳಿದರು. ಆಯಾ ಪ್ರದೇಶದ ಜನರು ಆಡಳಿತದಲ್ಲಿ ಭಾಗವಹಿಸುವುದು ಹೆಚ್ಚಿದಾಗ ಮಾತ್ರ ಕನ್ನಡದಂತಹ ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಯಾಗುತ್ತದೆ; ಆದರೆ ಈಚಿನ ದಿನಗಳಲ್ಲಿ ಆಡಳಿತವು ಇಂಗ್ಲಿಷ್ ಮತ್ತು ಪ್ರಾದೇಶಿಕ ಭಾಷೆಗಳ ನಡುವಿನ ಸಂಘರ್ಷದ ಸ್ವರೂಪ ಪಡೆದುಕೊಳ್ಳುತ್ತಿದೆಯೆಂದು ವಿಷಾದಿಸಿದರು.

ಫ್ರಾನ್ಸ್‌ನಂತಹ ದೇಶಗಳಲ್ಲಿ ಆಡಳಿತ ಭಾಷೆಯನ್ನು ಕುರಿತ ಶಾಸನವನ್ನು ಕಟ್ಟುನಿಟ್ಟಾಗಿ ಅನುಸರಿಸಬೇಕಾಗುತ್ತದೆ. ಈ ನಿಯಮವನ್ನು ಉಲ್ಲಂಘಿಸಿದ ಬಹುರಾಷ್ಟ್ರೀಯ ಕಂಪನಿಗಳಿಗೂ ಸರ್ಕಾರವು ದಂಡ ಹಾಕುತ್ತದೆ. ನಮ್ಮ ಸರ್ಕಾರವು ಅಂಥ ರಾಜಕೀಯ ಇಚ್ಛಾಶಕ್ತಿಯನ್ನು ತೋರಬಲ್ಲುದೆ – ಎಂದು ಸವಾಲು ಹಾಕಿದರು.

ವಿದ್ಯುನ್ಮಾನ ಆಡಳಿತಕ್ಕೆ ಸಂಬಂಧಿಸಿದ ಸಭೆಯ ಅಧ್ಯಕ್ಷತೆಯನ್ನು ಸ್ವತಃ ಕಂಪ್ಯೂಟರ್ ತಜ್ಞರಾದ ಡಾ॥ ಕೆ. ಚಿದಾನಂದಗೌಡರು ವಹಿಸಿದ್ದರೆಂಬುದೂ ಗಣಕ ಕ್ಷೇತ್ರದಲ್ಲಿ ತಜ್ಞರಾದ ವಿದ್ವಾಂಸರು ಪ್ರಬಂಧಗಳನ್ನು ಮಂಡಿಸಿದರೆಂಬುದೂ ನಿಜ. ಆದರೆ ೨೦೦೮ರಲ್ಲಿ ಡಾ॥ ಚಂದ್ರಶೇಖರ ಕಂಬಾರರ ಅಧ್ಯಕ್ಷತೆಯಲ್ಲಿ ರಚನೆಯಾದ ಸಮಿತಿಯ ಶಿಫಾರಸ್ಸುಗಳನ್ನು, ಸಲಹೆಗಳನ್ನು ಸರ್ಕಾರವು ತಹಲ್‌ವರೆಗೆ ಜಾರಿಗೊಳಿಸಿಲ್ಲ.

ನಾಡು ನುಡಿಗಳಿಗೆ ಸಂಬಂಧಿಸಿದಂತೆ ಬೆಳಗಾವಿ ಸಮ್ಮೇಳನವು ಯಾವುದೇ ಗಟ್ಟಿಯಾದ ನೆಲೆಯನ್ನು ಕಂಡುಕೊಳ್ಳಲಿಲ್ಲವೆಂಬುದನ್ನು ಬಿಟ್ಟರೆ, ಈಗಾಗಲೆ ಪ್ರಸ್ತಾಪಿಸಿದಂತೆ ಅದು ವಿಜೃಂಭಣೆಯಿಂದ, ಸಂಭ್ರಮದಿಂದ ನಡೆಯಿತೆಂದು ಪತ್ರಿಕಾ ವರದಿಗಳು ತಿಳಿಸುತ್ತವೆ.

ಉದ್ಘಾಟನಾ ಸಮಾರಂಭ ಮತ್ತು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಮುಖ್ಯಮಂತ್ರಿ ಯಡ್ಯೂರಪ್ಪನವರ ಭಾಷಣದಲ್ಲಿ ವಿಶೇಷವಾದುದೇನೂ ಇರಲಿಲ್ಲ. ಸಮ್ಮೇಳನದ ಅಂಗವಾಗಿ ಏರ್ಪಡಿಸಿದ್ದ 'ಬಂಡವಾಳ ಹೂಡಿಕೆದಾರರಿಗೆ ಅವಕಾಶಗಳು' ಎಂಬ ಗೋಷ್ಠಿಯ ಉದ್ಘಾಟನಾ ಭಾಷಣದಲ್ಲಿ ರಾಜ್ಯ ಸರ್ಕಾರವು 'ಲ್ಯಾಂಡ್ ಬ್ಯಾಂಕ್' ಸ್ಥಾಪನೆಗಾಗಿ ಗುರುತಿಸಲಾಗಿರುವ ೧.೧೫ ಲಕ್ಷ ಎಕರೆಗಳ ಪೈಕಿ ೮೨,೦೦೦ ಎಕರೆಗಳನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆ ಆರಂಭವಾಗಿದೆಯೆಂದು ತಿಳಿಸಿದರು. 'ಸುವರ್ಣ ಕರ್ನಾಟಕ ಪಾರ್ಕ್' ಅಭಿವೃದ್ಧಿಪಡಿಸುವುದಾಗಿಯೂ, ಇದೇ ವರ್ಷದ ಜೂನ್ ತಿಂಗಳಲ್ಲಿ 'ಕೃಷಿ ಬಂಡವಾಳ ಹೂಡಿಕೆದಾರರ' ಸಮ್ಮೇಳನ ನಡೆಸುವುದಾಗಿಯೂ, ಘೋಷಿಸಿದರು. ಈ ಎಲ್ಲ ಅಭಿವೃದ್ಧಿ ಪ್ರಕ್ರಿಯೆಗಳಿಗೆ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳದಂತೆ ಎಚ್ಚರವಹಿಸುವುದಾಗಿ ಭರವಸೆ ನೀಡಿದರು! ಈ ಎರಡನೆ ವಿಶ್ವ ಕನ್ನಡ ಸಮ್ಮೇಳನದ ನೆನಪನ್ನು ದೀರ್ಘಕಾಲ ಉಳಿಸಬಲ್ಲಂಥ, ಅರ್ಥಪೂರ್ಣವಾದ ಯಾವುದಾದರೂ ಕ್ರಿಯಾ ಯೋಜನೆಯ ಭರವಸೆ ಮುಖ್ಯಮಂತ್ರಿಗಳಿಂದ ದೊರೆಯಬಹುದೆಂದು (ಮೈಸೂರಿನಲ್ಲಿ ನಡೆದ ಮೊದಲ ವಿಶ್ವ ಕನ್ನಡ ಸಮ್ಮೇಳನದಲ್ಲಿ 'ಕನ್ನಡ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವ ಭರವಸೆ ಪ್ರಕಟವಾಗಿತ್ತು. 'ಹಂಪಿ ಕನ್ನಡ ವಿಶ್ವವಿದ್ಯಾನಿಲಯ'ವು ಸ್ಥಾಪನೆಯಾಗಿ ಉತ್ತಮ ಕಾರ್ಯ ನಿರ್ವಹಿಸುತ್ತಿರುವುದನ್ನು ಕನ್ನಡಿಗರು ಬಲ್ಲರು) ನಿರೀಕ್ಷಿಸಿದ್ದವರಿಗೆ ನಿರಾಸೆಯಾಯಿತು. ಅಲಕ್ಷ್ಯಕ್ಕೆ ಒಳಗಾಗಿರುವ 'ವ್ಯಾಕ್ಸೀನ್ ಇನ್‌ಸ್ಟಿಟ್ಯೂಟ್'ನ್ನು ಅಭಿವೃದ್ಧಿಪಡಿಸಿ 'ವಿಶ್ವ ಕನ್ನಡ ಸಮ್ಮೇಳನದ ಉದ್ಯಾನ'ವಾಗಿಸುವುದಾಗಿ ಮಾತ್ರ ಮುಖ್ಯಮಂತ್ರಿಗಳು ಪ್ರಕಟಿಸಿದರು.

ಸಮ್ಮೇಳನದ ಪ್ರಮುಖ ಅತಿಥಿಗಳಲ್ಲೊಬ್ಬರಾಗಿದ್ದ, ವಿಧಾನಸಭೆಯ ವಿರೋಧಪಕ್ಷದ ನಾಯಕ ಮಾನ್ಯ ಸಿದ್ಧರಾಮಯ್ಯನವರು ತಮ್ಮ ಭಾಷಣದಲ್ಲಿ ಮಹಾರಾಷ್ಟ್ರದ ಸರ್ಕಾರವನ್ನು ತೀವ್ರ ತರಾಟೆಗೆ ತೆಗೆದುಕೊಂಡರು. ''ಬೆಳಗಾವಿ ವಿಷಯವನ್ನು ಪದೇ ಪದೇ ಕೆಣಕುತ್ತಿರುವುದನ್ನು, ಮಹಾರಾಷ್ಟ್ರವು ಈ ವಿಷಯದಲ್ಲಿ ತೋರಿಸುತ್ತಿರುವ ಉದ್ಧಟತನವನ್ನು ಕನ್ನಡಿಗರು ಸಹಿಸಲಾರರು'' – ಎಂದರು. ''ಮಹಾಜನ ವರದಿಯೆ ನಮಗೆ ಅಂತಿಮ'' ಎಂದು ಸ್ವರ ಏರಿಸಿ ಸಾರಿದರು.

''ಕರ್ನಾಟಕ ಸರ್ಕಾರವು ವಿಶ್ವ ಕನ್ನಡ ಸಮ್ಮೇಳನ ಮಾಡಿದ ಮಾತ್ರಕ್ಕೆ ಬೆಳಗಾವಿಯ ಮೇಲೆ ಅದರ ಹಕ್ಕನ್ನ ಸ್ಥಾಪಿಸಲಾಗದು'' ಎಂಬ ಶಿವಸೇನೆಯ ಮುಖ್ಯಸ್ಥ ಬಾಳಠಾಕ್ರೆ ನೀಡಿದ ಹೇಳಿಕೆಗೆ ಪ್ರತಿಯಾಗಿ ಮುಂಬೈಯಲ್ಲಿ ಮಾಯವಾಗುತ್ತಿರುವ ಮರಾಠಿಯನ್ನು ಮೊದಲು ಉಳಿಸಿಕೊಳ್ಳಲಿ – ಎಂಬ ಮಾತುಗಳೂ ಕೇಳಿಬಂದವಂತೆ. ಬಾಳಠಾಕ್ರೆಯಂಥ ಮುದಿ ಹುಲಿಗೆ ಹೀಗೆ ಉತ್ತರ ಕೊಡುವುದೇನೋ ಸರಿ. ಆದರೆ ಅದೇ ಮಾತನ್ನು ತಿರುಗಿಸಿ ''ಬೆಂಗಳೂರಿನಲ್ಲಿ ಮಾಯವಾಗುತ್ತಿರುವ ಕನ್ನಡವನ್ನು ಮೊದಲು ಉಳಿಸಿಕೊಳ್ಳಿರಿ'' ಎಂದು ಹೇಳಿದರೆ ಕನ್ನಡಿಗರಿಗೂ ಮುಜುಗರವಾದೀತು.

ಕೇಂದ್ರ ಸಚಿವ ವೀರಪ್ಪ ಮೊಯಿಲಿಯವರು ಮಾತ್ರ ''ಬೆಳಗಾವಿ ಸಮ್ಮೇಳನದಿಂದ ಕನ್ನಡ ಅಭಿವೃದ್ಧಿಯಾಗುತ್ತದೆ ಎಂದು ನನಗಂತೂ ಅನಿಸುತ್ತಿಲ್ಲ. ರಾಜ್ಯ ಸರ್ಕಾರದ ಭ್ರಷ್ಟಾಚಾರ ಮರೆಮಾಚಲು ಈ ಸಮ್ಮೇಳನ ನಡೆಸಲಾಗುತ್ತಿದೆ. ಈ ಸಮಯದಲ್ಲಿ ಇಂಥ ಅದ್ದೂರಿಯ ಸಮಾರಂಭವನ್ನು ನಡೆಸುವ ಅಗತ್ಯವಾದರೂ ಏನಿತ್ತು?'' ಎಂದು ರಾಜ್ಯ ಸರ್ಕಾರದ ಧೋರಣೆಯನ್ನು ಕಟುವಾಗಿ ಟೀಕಿಸಿದರೆಂದು ವರದಿಯಾಗಿದೆ.

ಒಟ್ಟಿನ ಮೇಲೆ ಬೆಳಗಾವಿಯ ವಿಶ್ವ ಕನ್ನಡ ಸಮ್ಮೇಳನವು ನಾಡು, ನುಡಿಗಳಿಗೆ ಸಂಬಂಧಿಸಿದಂತೆ ಜರೂರಾದ ಸಂಗತಿಗಳನ್ನು ಜಾಗರೂಕತೆಯಿಂದ ವಿಚಾರಮಾಡುವ ಒಂದು ಅವಕಾಶವಾಗಿತ್ತೇ ಅಥವಾ ಕೇವಲ ನಯನ ಮನೋಹರವಾದ ಪ್ರದರ್ಶನವಾಗಿತ್ತೇ ಎಂಬ ಪ್ರಶ್ನೆಗೆ ಉತ್ತರವನ್ನು ಓದುಗರು ತಮ್ಮಷ್ಟಕ್ಕೇ ಕಂಡುಕೊಳ್ಳಬೇಕಾಗಿದೆ.

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

ಲೇಖಕರು : ಕುಂ. ವೀರಭದ್ರಪ್ಪ
ಪ್ರಕಾಶಕರು : ಸಪ್ನ ಬುಕ್‌ಹೌಸ್
೩ನೇ ಮುಖ್ಯ ರಸ್ತೆ, ಗಾಂಧಿನಗರ, ಬೆಂಗಳೂರು - ೯
ಪುಟಗಳು : ೩೯೦ ಬೆಲೆ : ರೂ. ೨೨೫

ಡಾ|| ಶಿವಕುಮಾರ್ ಕಂಪ್ಲಿ





# 'ಗಾಂಧಿಕ್ಲಾಸು' - ಶ್ರಮಜೀವಿಯ ಪ್ರಾಮಾಣಿಕತೆ

ಕನ್ನಡ ಸಾಹಿತ್ಯದಲ್ಲಿ ಇತ್ತೀಚೆಗೆ ಆತ್ಮಕಥೆಗಳ ಹುಲುಸಾದ ಬೆಳೆ ಬರುತ್ತಿದೆ. ಅಂತಹ ಸಾಲಿನಲ್ಲಿ ಕುಂ. ವೀ. ಅವರ 'ಗಾಂಧಿ ಕ್ಲಾಸು' ಆತ್ಮಕಥನವೂ ಒಂದು. ಬಳ್ಳಾರಿಯ ಕೂಡ್ಲಿಗಿ, ಕೊಟ್ಟೂರಿನ ಹಳ್ಳಿಗಳ ಒಡಲ ಓಣಿಗಳನ್ನು ದಾಟುತ್ತಲೇ ಆಂಧ್ರದ ಸೀಮೆಯ ಗಡಿಭಾಗವನ್ನೂ, ಬೆಂಗಳೂರಂತಹ ಮಹಾನಗರವನ್ನೂ, ಅಮೇರಿಕಾದಂತಹ ಬೃಹತ್ ದೇಶವನ್ನೂ ಮುಟ್ಟಿಬರುವ ಈ ಕೃತಿಯ ಅಂತರಾಳದಲ್ಲಿ ಗಟ್ಟಿಯಾಗಿ ಹುದುಗಿರುವುದು ಶ್ರಮಜೀವಿಗಳ ಬೆವರಿನ ತಾಕತ್ತು ಮತ್ತು ಸೋಲೆಂಬ ಸವಾಲುಗಳೆದುರು ಕಾಪಾಡಿಕೊಳ್ಳುವ ಕನಸುಗಾರಿಕೆ.

ದಲಿತ ಆತ್ಮಕಥೆಗಳಿಗೆ ಹೋಲಿಸಿದರೆ ಇದು ಗಾತ್ರದಲ್ಲಿ ಬೃಹತ್ತಾಗಿದೆ. 'ಬಡವರ ನಗುವಿನ ಶಕ್ತಿ' ಎಂದು ಸಿದ್ದಲಿಂಗಯ್ಯನವರ 'ಊರುಕೇರಿ'ಯನ್ನು ಡಿ. ಆರ್. ನಾಗರಾಜ್ ಅವರು ಕರೆದಂತೆ ನಾವು ಕುಂ. ವೀ. ಅವರ 'ಗಾಂಧಿಕ್ಲಾಸ್' ಕೃತಿಯನ್ನು ಕರೆಯಬಹುದು. ಮುಖಪುಟದ ಅವರ ನಗುವಿನ ಮುಖನೋಡಿ ಪುಟ ತೆರೆದೊಡನೆ ಕಾಣಿಸುವ ಸಾಲು "ಅದ್ಯಾಕೆ ಬಾಪೂಜಿ... ನೀವು ಮೂರನೆ ತರಗತಿಯ ಬೋಗಿಗಳಲ್ಲಿ ಪ್ರಯಾಣಿಸುವುದು ?" - ಎಂಬ ಪ್ರಶ್ನೆಗೆ, "ನಾಲ್ಕನೆ ತರಗತಿಯ ಬೋಗಿಗಳಿಲ್ಲವಲ್ಲ... ಅದಕ್ಕೆ" ಎಂಬ ಹಾಸ್ಯದ ಉತ್ತರ. ಆದರೆ ಈ ಹಾಸ್ಯದೊಳಗೆ ಹತ್ತಾರು ಪ್ರಶ್ನೆಗಳೂ ಅಡಗಿವೆ. ಅಂತಹ ಹತ್ತಾರು ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕುವಂತೆ ಇಲ್ಲಿನ ಬರಹ ವಿಸ್ತಾರಗೊಳ್ಳುತ್ತಾ ಹೋಗಿದೆ.

ಹಳ್ಳಿಯ ಕುಲಕಸಬುಗಳ ಮನೆಮಕ್ಕಳಿಗೆ ಎದುರಾಗುವ ಅಕ್ಷರಲೋಕ, ಅದರಲ್ಲೂ ಇಂಗ್ಲಿಷ್ ಎಂಬ ಭೂತ, ಗಣಿತ ಎಂಬ ಹೊಡೆತ ಹೇಗೆ ಮಕ್ಕಳನ್ನು ಶಾಲೆ ಬಿಡಿಸಿ ಹಾಳುಬಾವಿ, ಕೆರೆ, ದನಕರುಗಳ ಹಿಂದೆ ತಿರುಗುವಂತೆ ಮಾಡುತ್ತದೆ ಎಂಬ ಎಲ್ಲಾ ಹಳ್ಳಿ ಮಕ್ಕಳ ಕಥೆಯಂತೆ ಪ್ರಾರಂಭವಾಗುವ ಈ ಆತ್ಮಕಥೆಯಲ್ಲಿ ಹಳ್ಳಿಯ ಒಡಲೊಳಗಿನ ವಿಜೃಂಭಿಸುವ ಕ್ರೌರ್ಯವಿದೆ. ಜಮೀನ್ದಾರಿಕೆಯ ಗತ್ತುಗಾರಿಕೆ, ಹಳೆ ಜನರ ವಿಚಿತ್ರ ನಂಬಿಕೆಗಳು, ಒಮ್ಮೆ ನುಡಿದರೆ ಮುಗಿಯಿತೆಂಬ ಛಲವಂತಿಕೆ, ಅವಜ್ಞೆಗೆ ಒಳಗಾದ ಪ್ರದೇಶದವ ಏನು ಬರೆದರೂ ಮುಟ್ಟೆನೆಂದು ಉಡಾಫೆ ತೋರಿಸುವ ನಗರದ ಬುದ್ಧಿಜೀವಿಗಳು, ಯಾವ ತಾರತಮ್ಯವನ್ನೂ ಮಾಡದೆ ಮೌಲ್ಯಯುತವಾದುದನ್ನೇ ಪ್ರಕಟಿಸುವ ಪತ್ರಿಕೆಗಳು, ಆ ಮೂಲಕವೇ ಹಳ್ಳಿಯ ಹುಡುಗನೊಬ್ಬ ಬೆಳೆದು ಗಿಡವಾಗಿ, ಮರವಾಗಿ, ಹಲವು ಬಿಳಲಿನ ಆಲವಾಗುವ ಸಾಹಸ ಸಣ್ಣದೇನಲ್ಲ.

ಸಿನಿಮಾ ಪ್ರಪಂಚದ ಬಣ್ಣದ ಸುಳ್ಳುಗಳು, ರಂಜನೀಯವೆನಿಸುವ ರಾಯಲಸೀಮೆಯ ಕೇರಿಗಳು, ತಿಕ್ಕಲುತನದ ಪರಮಾವಧಿಗಿಳಿಯುವ ರೆಡ್ಡಿಗಳು. ಅಂಥವರ ರಕ್ತಚರಿತ್ರೆಯ ಒಳಗೂ ಹೊಟ್ಟೆಪಾಡಿಗಾಗಿ ರೌಡಿಯ ವೇಷ ತೊಟ್ಟ ನಾರಾಯಣಿಯಂಥವರು, ಜಮೀನ್ದಾರನಾದರೂ ಸಾಕಷ್ಟು ಓದಿಕೊಂಡು ಕೃಷ್ಣದೇವರಾಯನ ತೆಲುಗು ಪ್ರೇಮವನ್ನೂ ಶ್ರೀನಾಥ ಕವಿಯ ಕನ್ನಡ ಪ್ರೇಮವನ್ನೂ ಹೇಳುವ ಸೀತಾರಾಮರೆಡ್ಡಿ ಎಲ್ಲರೂ ಕುತೂಹಲ ಮೂಡಿಸುತ್ತಾರೆ.

ಕುಂ. ವೀ. ಬರಹದ ಶೈಲಿ ಉತ್ಪ್ರೇಕ್ಷೆಯ ಮಾರ್ಗ ಹಿಡಿದರೂ ಅದು ಅವರದೇ ಎನ್ನುವಷ್ಟು ಪ್ರಖರವಾಗಿದೆ. ಮಾನವೀಯ ಮನಸ್ಸಿನ ಶಿಕ್ಷಕನೊಬ್ಬ ಇತರರಂತೆ ಯಾವುದನ್ನೂ ಲೆಕ್ಕಿಸದೆ ಇಸ್ಪೀಟ್ ಆಡಿಯೋ, ರಾಜಕಾರಣ ಮಾಡಿಯೋ, ಪರ್ಯಾಯ ದುಡಿಮೆಗಳಲ್ಲಿ ಮುಳುಗಿಯೋ ಹಳ್ಳಿಗಳಲ್ಲಿ ಆರಾಮವಾಗಿರಬಹುದಾದ ಮಾರ್ಗಗಳ ನಡುವೆ ಬದುಕದೆ ದಲಿತಕೇರಿಗಳ, ಶ್ರಮಿಕ ಶೂದ್ರರ ಮಕ್ಕಳಿಗೆ ಅಕ್ಷರ ಕಲಿಸಬೇಕೆಂದು ಅವರ ಬದುಕನ್ನು ಬದಲಿಸಬೇಕೆಂದು ಊರನ್ನೇ ಎದುರುಹಾಕಿಕೊಂಡು ಬಹಿಷ್ಕಾರಕ್ಕೆ ಒಳಗಾಗಿ, ಸಂಬಳವನ್ನೆಲ್ಲ ಖರ್ಚುಮಾಡಿ ಬರಿಗೈ ಆಗುವುದು, ಮಕ್ಕಳ ಕಲಿಕೆ ಕಂಡು ಎಲ್ಲಾ ಸಂಕಟಗಳನ್ನು ಮರೆವುದು ಎಲ್ಲವೂ ಛಲದಿಂದ ಬದುಕಿನಲ್ಲಿ ಹೊಸ ಮಾರ್ಗವೊಂದನ್ನು ರೂಪಿಸಿಕೊಳ್ಳುವ ಪ್ರಯತ್ನಗಳಿಗೆ ಪೂರಕವಾಗಿವೆ. ನಿಜಕ್ಕೂ ಆತ್ಮಕಥೆಯೊಂದು ವ್ಯಕ್ತಿಯ ಖಾಸಗಿ ವಿವರ ಮಾತ್ರವಲ್ಲ, ತನ್ನ ಕ್ರಿಯೆಯ ಮೂಲಕ ಸ್ಫೂರ್ತಿಯ ಸೆಲೆ ತುಂಬುವ ಕೆಲಸವನ್ನು ಮಾಡುತ್ತದೆನ್ನುವುದಕ್ಕೆ ಈ ಕೃತಿಯು ಸಾಕ್ಷಿಯಂತಿದೆ.

**ಹಳ್ಳಿಯ ಕುಲಕಸಬುಗಳ ಮನೆಮಕ್ಕಳಿಗೆ ಎದುರಾಗುವ ಅಕ್ಷರಲೋಕ, ಅದರಲ್ಲೂ ಇಂಗ್ಲಿಷ್ ಎಂಬ ಭೂತ, ಗಣಿತ ಎಂಬ ಹೊಡೆತ ಹೇಗೆ ಮಕ್ಕಳನ್ನು ಶಾಲೆ ಬಿಡಿಸಿ ಹಾಳುಬಾವಿ, ಕೆರೆ, ದನಕರುಗಳ ಹಿಂದೆ ತಿರುಗುವಂತೆ ಮಾಡುತ್ತದೆ ಎಂಬ ಎಲ್ಲಾ ಹಳ್ಳಿ ಮಕ್ಕಳ ಕಥೆಯಂತೆ ಪ್ರಾರಂಭವಾಗುವ ಈ ಆತ್ಮಕಥೆಯಲ್ಲಿ ಹಳ್ಳಿಯ ಒಡಲೊಳಗಿನ ವಿಜೃಂಭಿಸುವ ಕ್ರೌರ್ಯವಿದೆ. ಜಮೀನ್ದಾರಿಕೆಯ ಗತ್ತುಗಾರಿಕೆ, ಹಳೆ ಜನರ ವಿಚಿತ್ರ ನಂಬಿಕೆಗಳು, ಒಮ್ಮೆ ನುಡಿದರೆ ಮುಗಿಯಿತೆಂಬ ಛಲವಂತಿಕೆ, ಅವಜ್ಞೆಗೆ ಒಳಗಾದ ಪ್ರದೇಶದವ ಏನು ಬರೆದರೂ ಮುಟ್ಟೆನೆಂದು ಉಡಾಫೆ ತೋರಿಸುವ ನಗರದ ಬುದ್ಧಿಜೀವಿಗಳು, ಯಾವ ತಾರತಮ್ಯವನ್ನೂ ಮಾಡದೆ ಮೌಲ್ಯಯುತವಾದುದನ್ನೇ ಪ್ರಕಟಿಸುವ ಪತ್ರಿಕೆಗಳು, ಆ ಮೂಲಕವೇ ಹಳ್ಳಿಯ ಹುಡುಗನೊಬ್ಬ ಬೆಳೆದು ಗಿಡವಾಗಿ, ಮರವಾಗಿ, ಹಲವು ಬಿಳಲಿನ ಆಲವಾಗುವ ಸಾಹಸ ಸಣ್ಣದೇನಲ್ಲ.**

''ಚನ್ನಬಸವಣ್ಣ ಹಲವು ಸಲದಂತೆ ಎಡತಾಕಿ ನನ್ನಿಂದ ಕಾದಂಬರಿಯೊಂದನ್ನು ಅಪೇಕ್ಷಿಸಿದರು. ಆರುನೂರು ಪುಟದ ಕಾದಂಬರಿಯೊಂದು ರೆಡಿಯಿರುವುದಾಗಿಯೂ ಒಂಚೂರು ದಕ್ಷಿಣೆಯನ್ನು ಸಂಭಾವನೆ ರೂಪದಲ್ಲಿ ದಯಪಾಲಿಸಿದಲ್ಲಿ ತಿಂಗಳೊಳಗೆ ಕೊಡುವುದಾಗಿ ಹೇಳಿದೆ. ಕಾದಂಬರಿ ಹೆಸರೇನು ಎಂದು ಕೇಳಿದ್ದಕ್ಕೆ ನಾನು ''ಶಾಮಣ್ಣ'' ಎಂದು ಹೇಳಿದೆ. ''ಮಾರ್ಚ್ ಇಪ್ಪತ್ಮೂರಕ್ಕೆ ಬಿಡುಗಡೆ'' ಎಂದರು. ''ಆಯ್ತಣ್ಣ'' ಎಂದೆ. ''ಎಷ್ಟು ಕೊಡಲಿ'' ಎಂದು ಕೇಳಿದ್ದಕ್ಕೆ, ''ಎಷ್ಟಾದರೂ ಮುಂಗಡ ಕೊಡಿ'' ಎಂದು ಹಿಂದಲೆ ಕೆರೆಯುತ್ತ ಹೇಳಿದೆ. ಯಾವುದೋ ಒಂದು ವಸತಿಶಾಲೆಯಲ್ಲಿ ಓದುತ್ತಿದ್ದ ಮಕ್ಕಳ ಫೀಜು ಕಟ್ಟುವುದಿತ್ತಲ್ಲವೆ !''

''ಆತನ ಮಕ್ಕಳು ತಮ್ಮ ಹೆಂಡರು ಮಕ್ಕಳನ್ನು ಕಟ್ಟಿಕೊಂಡು ಬದುಕುವ ಸಲುವಾಗಿ ಚಿಕ್ಕಮಗಳೂರು ಕಡೆಯ ಕಾಫಿ ತೋಟಗಳ ಕಡೆಗೆ ವಲಸೆ ಹೋಗಿ ತಮ್ಮ ಹೆತ್ತಾತನ ಶೇಷ ಬದುಕನ್ನು ಅತಂತ್ರಗೊಳಿಸಿದ್ದರು. ತನ್ನನ್ನು ನಿರ್ವಿರಾಮವಾಗಿ ಕಾಡುತ್ತಿದ್ದ ಕ್ಷಯ, ಅಸ್ತಮಾಗಳಂತಹ ರೋಗಗಳಿಗೆ ಇಲಾಜು ಮಾಡಿಸಿಕೊಳ್ಳುವ ಸಲುವಾಗಿ ಆತ ಹಿಂದಿನ ದಿನವೇ ಬಳ್ಳಾರಿಗೆ ಬಂದಿದ್ದ. ಊಟ ಮಾಡುವಾಗ ಆತನ ಕಣ್ಣಲ್ಲಿದ್ದ ನೀರಲ್ಲದ ನೀರನ್ನು ಗಮನಿಸಿದೆ. ಹಾಗೆಯೇ ಒಂದು ಜೊತೆ ಬಟ್ಟೆ ಬರೆಯನ್ನೂ, ಚೀಟಿಯಲ್ಲಿದ್ದ ಮಾತ್ರೆಗಳನ್ನು ಕೊಡಿಸಿದೆ. ''ವಟ್ಟೇಲಿ ವುಟ್ಟಿದ ಮಕ್ಳು ಈಟು ಪ್ರೀತಿ ತ್ವಾರ್ಸಲಿಲ್ಲ ಸಾಏಬ್ರೇ'' ಎಂದ.

ವಾಗಿಲಿಯ ಶಾಲೆಯ ಮಧ್ಯಾಹ್ನದ ಊಟಕ್ಕೆ ನಿಲ್ಲುತ್ತಿದ್ದ ಕೇರಿಯ ಮಕ್ಕಳು, ವಿಧವೆಯರು. ಮುದುಕಿಯರು. ಇಡೀ ಆತ್ಮಕಥೆಯೇ ಒಂದು ಬಗೆಯಲ್ಲಿ, ''ಮೇಸ್ಟ್ರೇ, ನಿಮ್ಮದೊಂದು ಕಥೆಯೇ ಕುರ್ಚಿಮೇಲೆ ಕುಂತೈತಿ ನೋಡುಬರ್ರಿ'' ಎಂಬಂತೆ ಶ್ರಮಿಕ, ದಲಿತಲೋಕ ಕುಂ. ವೀ. ಅವರ ಖಾಸಗಿ ಆಸ್ತಿಯಂತಾಗಿದೆ. ಅರಮನೆಯಂತಹ ರಾಜರ ಪಾಳೆಗಾರರ ಕಥೆಯೂ ಈಗ ಹರಿದ ಅಂಗಿಯ, ಮೋಟು ಬೀಡಿಯ, 'ಉಫ್' ಎಂದು ಊದಿದರೆ ಬೀಳುವಂತಹ ಮಣ್ಣ ಗುಡಿಸಲುಗಳ ಕಥೆಯಾಗಿದೆ. ಸರ್. ಥಾಮಸ್ ಮನ್ರೋ ಕೂಡಾ ಇಂಥ ಕಥೆಯ ಜಾನಪದದ ಭಾಗವಾಗಿದ್ದುದು ವಿಶೇಷವೆನಿಸುತ್ತದೆ.

ಈ ಆತ್ಮಕಥೆಯಲ್ಲಿ ಕುಂ.ವೀ. ಅವರ ಕಥೆ ಮಾತ್ರವಲ್ಲ, ಚಿಮಣೆವ್ವ, ಸವಾರೆವ್ವ, ಹಂಪಜ್ಜಿ, ಯಾಲಪಿ ಹುಲಿಗೆಮ್ಮನ ಸೊಸೆ ಸಿದ್ಲಿಂಗಿ, ವಾಗಿಲೆಯ ಮೇಲ್ಗಿರಿ ತಿಮ್ಮನ ಹೆಂಡತಿ ಎಲ್ಲಮ್ಮ, ಗೂಳ್ಯಂನ ಜೀರ್ರ ರತ್ನಮ್ಮ – ಹೀಗೆ ಹತ್ತಾರು ಗ್ರಾಮೀಣ ವೀರವನಿತೆಯರ ಚಿತ್ರವಿಚಿತ್ರ ಸಂಗತಿಗಳ ಕಥೆಯೂ ಇದೆ. ರಾಯಲ ಸೀಮೆಯಂತೂ ಗದ್ದರ್ ಹಾಡಿನಂತೆ ''ರಾಯಲಸೀಮಾ ರತುನಾಲ ಸೀಮ ಕಾದರಾ ಗಾಯಾಲ ಸೀಮರಾ'' ಎಂಬಂತಿದೆ.

ಬರಹದ ಉದ್ದಕ್ಕೂ ಶ್ರುತಿ ಕಷ್ಟ, ಶ್ರುತಿ ದುಷ್ಟಗಳನ್ನಿಟ್ಟುಕೊಂಡೇ ಜವಾರಿ ಭಾಷೆಯನ್ನು ಒಕ್ಕುವ ಕುಂ.ವೀ. ಕಥನವನ್ನು ''ಲೇಖಕನಾದೋನು ಶ್ರಮಜೀವಿಗಳ ಪ್ರಾಮಾಣಿಕತೆಯನ್ನ ಸಂಶಯದಿಂದ ನೋಡಬಾರದು'', ಎಂದು ಲಂಕೇಶರು ಲೇಖಕರಿಗೆ ಹೇಳಿದ ಮಾತನ್ನೇ ಈ ಕಥನದ ಬೆಲೆ ಕಟ್ಟಲೂ ಬಳಸಬಹುದು.

'ಗಾಂಧಿಕ್ಲಾಸು' ಕೃತಿಯನ್ನ ಓದಿದ ನಂತರ ನನಗೆ ಬಂದ ಸಂದೇಹ ಇದು: ಕುಂ. ವೀ. ಮರೆತು ಆತ್ಮಕಥೆಯ ಬದಲಿಗೆ ತಾವು ಬರೆದಿರುವ ಹೊಸ ಕಾದಂಬರಿಯೊಂದನ್ನು ನನಗೆ ಕಳಿಸಿದ್ದಾರೆಯೆ ?

ಇಷ್ಟು ರೋಚಕ ನಿರೂಪಣೆ, ಇಷ್ಟು ರಂಜಕ ಹಾಗೂ ಅಸಾಧಾರಣ ಘಟನೆಗಳು ಕಾದಂಬರಿಯಲ್ಲಲ್ಲದೆ ಆತ್ಮಕಥೆಯಲ್ಲಿರಲು ಸಾಧ್ಯವೇ, ಎಂದು ಪ್ರಶ್ನಿಸುವ ಡಾ|| ಸಿ. ಎನ್. ರಾಮಚಂದ್ರನ್ ಅವರ ಪ್ರಶ್ನೆ ಈ ಕೃತಿಯ ಮಹತ್ತು ಮತ್ತು ಮಿತಿಯನ್ನು ಹೇಳುವಂತಿದೆ. ಕೆಲವರು ಆತ್ಮಕಥೆ ಎಂದರೆ ಲೇಖಕನೊಬ್ಬನ ಆಂತರಿಕ ಸತ್ಯ, ಅದಕ್ಕೆ ವಿಜೃಂಭಣೆಗಿಂತಲೂ ನಾಚಿಕೆಯ ಮತ್ತು ನೋವಿನ ಅನಾವರಣವಿದ್ದರೆ ಚೆನ್ನ ಎಂದು ಭಾವಿಸಿದರೆ ಮತ್ತೆ ಕೆಲವರು ಕುಂ.ವೀ. ಅವರ ಭಾಷೆಯೇ ಉತ್ಪ್ರೇಕ್ಷಿತ ಎಂದು ಮೂಗುಮುರಿಯುತ್ತಾರೆ. ಆದರೆ ನೂರಾರು ಕಥೆ ಬರೆದು ಸವೆದ ತನ್ನ ನಡುಬೆರಳನ್ನೂ 'ಇದೊಂದು ರೂಪಕ' ಎಂದು ಅಭಿಮಾನದಿಂದ ತೋರಿಸುವ, ಪ್ರಕಾಶಕರಿಗೆ ಮಾತುಕೊಟ್ಟಂತೆ ಮೂರು ವಾರಗಳಲ್ಲಿ ೬೦೦ ಪುಟಗಳ 'ಶಾಮಣ್ಣ' ಎಂಬ ಕಾದಂಬರಿ ಬರೆಯುವ 'ಅರಮನೆ' ಎಂಬ ೧೨೦೦ ಪುಟಗಳ ಕಾದಂಬರಿಯನ್ನು ೫೦೦ ಪುಟಗಳಿಗೆ ತರಲು ಮತ್ತೆ ಮತ್ತೆ ಅದನ್ನ ಮುರಿದು ಕಟ್ಟಿ ಕೊನೆಗೆ ಅದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆಯುವ ಕುಂ.ವೀ. ಬರಹಗಳಲ್ಲಿ ಸಾಧನೆಯ ಅಮಲಿಲ್ಲ, ಸಿದ್ಧ ಮಾದರಿಗಳನ್ನು ಒಡೆದು ತನ್ನದನ್ನು ನಿರ್ಮಿಸಿಕೊಳ್ಳುವ ಉಮೇದು ಇದೆ. ಅದು ಈ ಆತ್ಮಕಥೆಯಲ್ಲೂ ನಿಜವಾಗಿದೆ ಎನ್ನಬಹುದು.

ಡಾ|| ಶಿವಕುಮಾರ್ ಕಂಪ್ಲಿ
ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕೂಡ್ಲಿಗಿ ಅಂಚೆ, ತಾಲೂಕು, ಬಳ್ಳಾರಿ ಜಿಲ್ಲೆ

# ತಂಗಾಳಿ

ಗಾಳಿ ಸುಳಿಯೆ ತಣ್ಣಗೆ
ಮೈಯ ಸವರು ಮೆಲ್ಲಗೆ

ಬರುವಾಗ ಬಿರುಸಾಗಿ ಬಾರದೆ
ಮೆದುವಾಗಿ ನನ್ನತ್ತ ಸುಳಿಯಲೆ
ಆರಂಭ ನಿನ್ನಿಂದ ಕಂಡಿದೆ
ಅಲೆದಾಡೋ ಮನಸು ನಿಂತಿದೆ.

ಈ ಮನಸು ಬಿಸಿಲಿದ್ದರೂ ನಡುಗಿದೆ
ಸುಳಿಯೋ ಆ ನಿನ್ನ ಶೀವಿಗೆ
ಆತಂಕ ಮನೆ ಮಾಡಿದೆ.
ನನ್ನ ಬಿಟ್ಟು ನೀ ದೂರಾಗೋ ಭೀತಿಗೆ.

ರಘು ಬಿ. ಎಮ್.
ಬೈಚೇನಹಳ್ಳಿ

# ಭಾವಸಾಮರಸ್ಯ-ಪ್ರೊ|| ತೀನಂಶ್ರೀ ವಿಚಾರಧಾರೆ



೧೯೬೫ನೇ ಇಸವಿಯ ಆರಂಭದ ದಿನಗಳಲ್ಲಿ ಒಮ್ಮೆ ತೀನಂಶ್ರೀ ಅವರು ಕೋಲಾರ ಚಿನ್ನದ ಗಣಿ ಮತ್ತು ಕೋಲಾರಕ್ಕೆ ಭೇಟಿ ಕೊಟ್ಟಿದ್ದರು. ಚಿನ್ನದ ಗಣಿ ಪ್ರದೇಶದ ಕರ್ನಾಟಕ ಸಂಘದಲ್ಲಿ ಪಂಪ, ಕುಮಾರವ್ಯಾಸ ಇವರುಗಳ ಬಗ್ಗೆ ಉಪನ್ಯಾಸ ನೀಡಿದ ಅವರು ಮಾರನೆಯ ದಿನ ಕೋಲಾರಕ್ಕೆ ಬಂದರು. ಅಲ್ಲಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಅವರ ಉಪನ್ಯಾಸ ಏರ್ಪಾಡಾಗಿತ್ತು. ಅಲ್ಲಿ ಪ್ರೊ|| ಉಡುಪ ಅವರು ಪ್ರಿನ್ಸಿಪಾಲರಾಗಿದ್ದರು ಮತ್ತು ಪ್ರೊ|| ಎಲ್. ಎಸ್. ಶೇಷಗಿರಿರಾಯರು ಪ್ರಾಧ್ಯಾಪಕರಾಗಿದ್ದರು. ಕಾಲೇಜಿನ ಅಂಗಳದಲ್ಲಿ ಸಂಜೆ ಏರ್ಪಡಿಸಲಾಗಿದ್ದ ಸಭೆಯಲ್ಲಿ ತೀನಂಶ್ರೀ ಅವರ ಉಪನ್ಯಾಸವನ್ನು ಕೇಳಲು ಅಧ್ಯಾಪಕರೂ, ವಿದ್ಯಾರ್ಥಿ ಸಮುದಾಯವೂ ದೊಡ್ಡ ಸಂಖ್ಯೆಯಲ್ಲಿ ಕಿಕ್ಕಿರಿದು ನೆರೆದಿದ್ದರು.

ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ದೇಶದ ಪ್ರಥಮ ಪ್ರಜೆಯಿಂದ ಹಿಡಿದು ಸರ್ಕಾರದ ಅಧಿಕಾರಸ್ಥರ, ವಿವಿಧ ಹಂತಗಳ ಜನಪ್ರತಿನಿಧಿಗಳ, ಕೇಂದ್ರ ಹಾಗೂ ರಾಜ್ಯ ಸರ್ಕಾರದ ವಿವಿಧ ಆಡಳಿತ ಸಭೆಗಳ ಪದನಾಮಗಳನ್ನು ಭಾರತೀಯಗೊಳಿಸಲು ನೇಮಿಸಲಾಗಿದ್ದ ಸಮಿತಿಯ ಸದಸ್ಯರಾಗಿ ಸಭೆಗಳಲ್ಲಿ ಭಾಗವಹಿಸುತ್ತಿದ್ದ ಪ್ರೊ|| ತೀನಂಶ್ರೀ ಅವರ ಕೊಡುಗೆ ಅಪಾರ. ಉದಾಹರಣೆಗೆ, 'ರಾಷ್ಟ್ರಪತಿ' ಪದನಾಮವು ಅವರ ಚಿಂತನೆಯ ಮೂಸೆಯಲ್ಲಿ ಮೂಡಿಬಂದಿತು. ಪದಗಳು ಅರ್ಥಗರ್ಭಿತವಾಗಿದ್ದು, ಅವು ಆಯಾ ಸಂದರ್ಭಗಳನ್ನು ಪೂರ್ತಿಯಾಗಿ ಪ್ರತಿಬಿಂಬಿಸುವಂತೆ ಇರಬೇಕೆಂಬ ಇಚ್ಛೆ ಅವರದಾಗಿತ್ತು. ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ-ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅದಕ್ಕೆ ಅತ್ಯಂತ ತರ್ಕಬದ್ಧವೂ, ಅರ್ಥಗರ್ಭಿತವೂ, ಮೌಲ್ಯಯುತವೂ ಆದ ತಳಹದಿಯನ್ನು ಹಾಕಿಕೊಟ್ಟು ಮಹಾನ್ ಕಾರ್ಯ ನಿರ್ವಹಿಸುತ್ತಾ ಇಂತಹ ಸಂದರ್ಭೋಚಿತವಾದ ಮತ್ತು ಅರ್ಥವತ್ತಾದ ಪದಗಳ ಸೃಷ್ಟಿ, ಅರ್ಥ, ವಿವರಣೆಗಳು ಮುಂತಾಗಿ ಅವರು ನೀಡಿರುವ ಕೊಡುಗೆಗಳು ಅಪಾರವಾಗಿವೆ.

ಈ ಹಿನ್ನೆಲೆಯಲ್ಲಿ, ಕೋಲಾರದಲ್ಲಿ ತಮ್ಮ ಎಂದಿನ ಅತ್ಯಾಕರ್ಷಕ ಶೈಲಿಯಲ್ಲಿ ಭಾಷಣವನ್ನು ಆರಂಭಿಸಿದ ಅವರು ಅಂದಿನ ಉಪನ್ಯಾಸಕ್ಕೆ ಆರಿಸಿಕೊಂಡ ವಿಷಯ ಅನ್ಯಾದೃಶವಾಗಿತ್ತು. ಭಾರತದ ಎಲ್ಲ ರಾಜ್ಯಗಳೂ ಎಲ್ಲ ಜನತೆ ಒಂದುಗೂಡಿ ದೇಶವನ್ನು ಉನ್ನತ ಸ್ತರದಲ್ಲಿ ಕೊಂಡೊಯ್ಯಲು ಏಕೋಭಾವ ಇರಬೇಕೆಂಬುದು ಸ್ವಾತಂತ್ರ್ಯಪೂರ್ವ ಭಾರತದ ತತ್ತ್ವವಾಗಿತ್ತು; ಇಂದಿಗೂ ಇದೆ. ಇದನ್ನು ವಿಶ್ಲೇಷಿಸುತ್ತಾ ತೀನಂಶ್ರೀ ಅವರು, ಇದಕ್ಕಾಗಿ ಭಾರತೀಯರಲ್ಲಿ 'ಭಾವೈಕ್ಯ' ಇರಬೇಕೆಂದು ಹೇಳುವುದು ಅಭ್ಯಾಸವಾಗಿದೆ; ಆದರೆ ಈ ಪದವು ಸರಿಯಾದ ಭಾವನೆಯನ್ನು ಪ್ರತಿಬಿಂಬಿಸುವುದಿಲ್ಲ; ದೇಶವು ಆರೋಗ್ಯಕರವಾಗಿ ಮುಂದುವರೆಯಲು ಭಾರತೀಯರಲ್ಲಿ **'ಭಾವಸಾಮರಸ್ಯ'** ಉಂಟಾಗಬೇಕೇ ಹೊರತು **'ಭಾವೈಕ್ಯ'** ಅಲ್ಲ ಎಂದು ಅವರು ಪ್ರತಿಪಾದಿಸಿದರು. ಇಷ್ಟೊಂದು ವಿಶಾಲವಾದ ದೇಶದಲ್ಲಿನ ಜನಗಳ ಭಾವದಲ್ಲಿ ಅಂದರೆ ಮನಸ್ಸಿನಲ್ಲಿ ಏಕತೆ ಉಂಟಾಗುವುದು ಸಾಧ್ಯವೇ, ಎಂದು ಪ್ರಶ್ನಿಸಿದ ಅವರು 'ಸಾಮರಸ್ಯ' ಪದದ ವೈಶಾಲ್ಯವನ್ನು ಬಹು ಚೆನ್ನಾಗಿ ತಿಳಿಸಿಕೊಟ್ಟರು. ಜೀವನದಲ್ಲಿ ಯಾವುದೇ ಇಬ್ಬರು ವ್ಯಕ್ತಿಗಳ ನಡುವೆ ಒಂದೇ ರೀತಿಯ ಮನೋಭಾವವನ್ನು ನಿರೀಕ್ಷಿಸಲಾಗುವುದಿಲ್ಲ. ಪ್ರತಿಯೊಂದು ವ್ಯಕ್ತಿಯ ಆಸೆ, ಆಕಾಂಕ್ಷೆಗಳು, ಕಾರ್ಯವಿಧಾನಗಳು, ಪ್ರವೃತ್ತಿಗಳು ಬೇರೆಯೇ ಆಗಿರುತ್ತವೆ. ಇದೇ ಜೀವನ. ಆದರೆ ಇವೆಲ್ಲವೂ ಒಂದೇ ರೀತಿಯಾಗಿಬಿಟ್ಟು ಏಕೋಭಾವ ಸಾಧ್ಯವಾದರೆ ಎಲ್ಲವೂ ಯಾಂತ್ರಿಕ ಕ್ರಿಯೆಗಳಾಗುತ್ತವೆ. ಇದು, ಅಂದರೆ ಭಾವೈಕ್ಯ ಸಾಧ್ಯವೂ ಆಗುವುದಿಲ್ಲ. ಆದ್ದರಿಂದ ಎಲ್ಲೆಲ್ಲೂ ಭಾವಸಾಮರಸ್ಯವನ್ನು ನಾವು ಸಾಧಿಸಬೇಕು. ಮನೆಯಲ್ಲಿ ತಂದೆ ತಾಯಿಯರ ನಡುವೆ, ಮಕ್ಕಳ ನಡುವೆ, ಮಿತ್ರರ ನಡುವಿನ ಸಂಬಂಧ ಅತ್ಯುತ್ತಮವಾಗಿದ್ದರೆ ಅದು ಭಾವಸಾಮರಸ್ಯವೇ ಹೊರತು ಭಾವೈಕ್ಯವಲ್ಲ. ಮನೆಯ ವಾತಾವರಣವು ಆರೋಗ್ಯಕರವಾಗಿರಬೇಕಾದರೆ ಮನೆಯಲ್ಲಿನ ಸದಸ್ಯರ ಚಟುವಟಿಕೆ ಮತ್ತು ಇತರರೊಡನೆ ನಡೆಸುವ ವ್ಯವಹಾರಗಳು ವಿಷಯಾಧಾರಿತವಾಗಿರಬೇಕು ಮತ್ತು ಅದರಿಂದಾಗಿ ಅವರ ನಡುವೆ ಭಾವಸಾಮರಸ್ಯ ಉಂಟಾಗಬೇಕು.

ಭಾಷಾವಿಜ್ಞಾನದ ದೃಷ್ಟಿಯಿಂದ ಭಾರತೀಯ ಭಾಷೆಗಳೆಲ್ಲವೂ ಒಂದೇ ಸಂವಿಧಾನವನ್ನು ಹೊಂದಿವೆ. ನಮ್ಮ ಭಾಷೆಗಳ ನಡುವೆ ಲಿಪಿ ಹಾಗೂ ಇತರ ಅಲ್ಪಸ್ವಲ್ಪ ವ್ಯತ್ಯಾಸಗಳು ಮಾತ್ರ ಕಂಡುಬರುತ್ತವೆ. ಆದ್ದರಿಂದಲೇ ಭಾರತೀಯ ಭಾಷೆಗಳ ನಡುವೆ ಅತ್ಯಂತ ಹೆಚ್ಚಿನ ಭಾವಸಾಮರಸ್ಯ ಇದೆ.

ಭಾವಸಾಮರಸ್ಯವು ಜೀವನದ ಯಾವುದೇ ವ್ಯವಹಾರಕ್ಕೂ ಅನ್ವಯಿಸುತ್ತದೆ. ನಮ್ಮ ದೇಶದ ವಿವಿಧ ಭಾಗಗಳಲ್ಲಿನ ಜನತೆಯ ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ಹಾಗೂ ಇತರ ಚಟುವಟಿಕೆಗಳಲ್ಲಿನ ಕಾರ್ಯವಿಧಾನಗಳು, ಫಲಿತಾಂಶಗಳು ಬೇರೆ ಬೇರೆ ರೀತಿಯಲ್ಲಿ ಕಂಡುಬರುತ್ತಿದ್ದರೂ ಅವುಗಳನ್ನು/ಅವರನ್ನು ಹತ್ತಿರ ತಂದಿರುವ ಅಂಶಗಳು ಯಾವುವು ಎಂದು ನಾವು ಪ್ರಶ್ನಿಸಿ, ವಿಶ್ಲೇಷಿಸಿದಾಗ ಅವು ಆ ವ್ಯಕ್ತಿಗಳಲ್ಲಿನ/ಸಂಬಂಧಪಟ್ಟ ಚಟುವಟಿಕೆಗಳಲ್ಲಿನ ಭಾವಸಾಮರಸ್ಯ ಅಂಶಗಳೇ ಎನ್ನಬಹುದಾಗಿದೆ. ಅಂತೆಯೇ 'ಭಾವಸಾಮರಸ್ಯ' ಪದವು ತಿಳಿಸುವಂತೆ ವಿವಿಧತೆಯಲ್ಲಿ ಸಾಮರಸ್ಯ ಇದ್ದರೆ ದೇಶವು ಒಗ್ಗಟ್ಟಿನಿಂದ ಮುಂದುವರೆಯಲು ಸಾಧ್ಯವಾಗುತ್ತದೆ.

ಹೀಗೆ ಭಾವಸಾಮರಸ್ಯವು ರಾಜ್ಯಗಳಲ್ಲಿ, ಮನೆಗಳಲ್ಲಿ, ವಿವಿಧ ಸಂಸ್ಥೆಗಳಲ್ಲಿ, ಸಾಹಿತ್ಯ, ಸಂಗೀತ, ಕಲೆ ಮುಂತಾದ ಕ್ಷೇತ್ರಗಳಲ್ಲಿ ಕೆಲಸ ಮಾಡುವವರ ಎಲ್ಲ ರೀತಿಯ ಸರಿಯಾದ ಚಿಂತನೆಗಳು ಹಾಗೂ ಜನೋಪಯೋಗಿ ಆಗುವಂತಹ ಯಶಸ್ವೀ ಕಾರ್ಯನಿರ್ವಹಣೆಗಳಿಗೆ ಕಾರಣವಾಗಿರುತ್ತದೆ ಮುಂತಾಗಿ ಹೇಳುತ್ತಾ ಹೋದರು.

ಈ ಎಲ್ಲಾ ವಿಷಯಗಳನ್ನು ಸೋದಾಹರಣೆಗಳ ಮೂಲಕ ಅವರು ಕೇಳುಗರ ಮನಮುಟ್ಟುವಂತೆ ಬಹು ಚೆನ್ನಾಗಿ ತಿಳಿಸಿಕೊಟ್ಟರು. ಸುಮಾರು ಒಂದು ಗಂಟೆಯ ಕಾಲ ನಡೆದ ಅವರ ಈ ಉಪನ್ಯಾಸವು ಅಲ್ಲಿ ನೆರೆದಿದ್ದ ಎಲ್ಲರನ್ನೂ ಮಂತ್ರಮುಗ್ಧರನ್ನಾಗಿಸಿತು. ತೀನಂಶ್ರೀ ಅವರ ಬಗ್ಗೆ ಮತ್ತು ಅವರು ತಿಳಿಸಿಕೊಟ್ಟ ವಿಷಯಗಳ ಬಗ್ಗೆ ಎಲ್ಲರಲ್ಲೂ ಭಾವಸಾಮರಸ್ಯವನ್ನುಂಟುಮಾಡಿತು. ಹೀಗೆ ಅವರ ಸಾಹಿತ್ಯ, ಸಂಸ್ಕೃತಿ ಮುಂತಾದ ವಿಷಯಗಳನ್ನು ಕುರಿತ ಚಿಂತನೆಗಳು ಮತ್ತು ಉಪನ್ಯಾಸಗಳು ಅನೇಕವಾಗಿದ್ದು, ಅವು ಅತ್ಯಂತ ಮೌಲಿಕವಾಗಿವೆ.

**ಚಿ. ವಿ. ಶ್ರೀನಾಥಶಾಸ್ತ್ರೀ**
ನಂ. ೧೨೩/೧, ಮಹಡಿ 'ಶಿವಗೃಹ'
ನೇತಾಜಿ ರಸ್ತೆ , ೪ನೇ ಬ್ಲಾಕ್, ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / JUNE 2011 / Rs. 12
RNI Regd. KARKAN / 1999 / 614. Karnataka Regd. KRNA/BGE/7/2009-11
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)